*With Best Compliments from:*

# KARNATAKA INSECTICIDES & FUNGICIDES

**Plot No. 27-B, II Phase, Peenya Industrial Area**

**BANGALORE - 560 058**

**PRODUCTS** formulated and sold

- SVR Carbendazim 50% WP ISI marked
- A Broad Spectrum Systemic Fungicide recommended for Cofee Collar Rot, Black Rot & Brow-eye spot.
- Available in 50gms. 100 gms., 500 gms. and 1 kg. at economical prices.
- SVR BHC 50% WP
- Guaranteed quality, Recommended for swabbing stems for control of Coffee White stem Borer.

**BAYLETON 25 WP**

- Systemic Fungicide for Effective Coffee Leaf Rust Control. (It has the Registered Trade Name of Bayer AG Leverkusen West Germany). Bayleton Technical is imported from West Germany.

*Marketea by:*

## S.V. Rangaswamy & Co. Ltd.

No. 2, III Cross, Kalasipalyam New Extension
BANGALORE - 560 002



ಗೌರವ ಸಲಹೆಗಾರರು:
ಶ್ರೀ ಅ. ರಾ. ಸೇ.
ಶ್ರೀ ಶೇಷಗಿರಿ
ಸಂಪಾದಕ:
ಶಿವಕುಮಾರ್

ಚಂದಾ ವಿವರ:

| | |
|---|---|
| ಬಿಡಿ ಪ್ರತಿ | : ರೂ. 3.50 |
| ವಾರ್ಷಿಕ ಚಂದಾ | : ರೂ. 35 |
| ಆಜೀವ ಚಂದಾ | : ರೂ. 350 |
| ಯುಗಾದಿ ವಿಶೇಷಾಂಕ | : ರೂ. 20 |

ವಿಳಾಸ: ಅಪರಂಜಿ ಕಾರ್ಯಾಲಯ, 36, 6ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-560 003 (ಕೆಲಸದ ವೇಳೆ: ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ)

## ಈ ಸಂಚಿಕೆಯಲ್ಲಿ

ಸಂಪುಟ 14 ಎಪ್ರಿಲ್ '97 ಸಂಚಿಕೆ-7

ಮುದ್ರಣ: ಇಂಪ್ರೆಶನ್ಸ್, ಬೆಂಗಳೂರು - 3    ಅಕ್ಷರ ಜೋಡಣೆ: ಒಮೇಗಾ ಲೇಸರ್ ಟೆಕ್, ಬೆಂಗಳೂರು 27

ಇಂದು ಈಶ್ವರ ಸಂವತ್ಸರಾರಂಭ. ಈ ಶುಭದಿನದಂದು, ನಮ್ಮ ಎಲ್ಲಾ ಲೇಖಕ, ಲೇಖಕಿಯರಿಗೆ, ಓದುಗರಿಗೆ, ಜಾಹಿರಾತುದಾರರಿಗೆ ಹಾಗೂ ಹಿತೈಷಿಗಳಿಗೆ ಭಗವಂತನು ಸಕಲ ಸನ್ಮಂಗಳವನ್ನುಂಟು ಮಾಡಲೆಂದು ಅಪರಂಜಿ ಮನಸಾರೆ ಪ್ರಾರ್ಥಿಸುತ್ತಾಳೆ.

ಈಚೆಗೆ ಅಪರಂಜಿ ಉತ್ಸಾಹದಿಂದ ತುಂಬಿ ತುಳುಕುತ್ತಿದ್ದಾಳೆ. ಅವಳ ವಯಸ್ಸಿಗೆ ಅದು ಸಹಜ ಎನ್ನಬಹುದು ನೀವು. ಇರಬಹುದು ಆದರೆ ಅವಳ ಉತ್ಸಾಹಕ್ಕೆ ಇನ್ನೂ ಒಂದು ಕಾರಣ ಅಂದರೆ, ಅಪರಂಜಿಯ ಸಲಹೆಗಾರರಾದ ಮಾನ್ಯ ಶೇಷಗಿರಿಯವರು ಅಪರಂಜಿಯ ವ್ಯವಹಾರದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಸಂಗತಿ. ಅಂತೆಯೇ ಎಂ.ಎಸ್.ಕೆ. ಪ್ರಭು, ಶ್ರೀನಿವಾಸ ವೈದ್ಯ ಹಾಗೂ ಡಾ॥ ಶರಣ್ ಇವರುಗಳು ತಮ್ಮ ಕ್ರಿಯಾಶೀಲತೆಯನ್ನು ಅಪರಂಜಿಯೊಂದಿಗೆ ಹಂಚಿಕೊಂಡಿದ್ದಾರೆ.

ಅಪರಂಜಿ ಹೆಚ್ಚು ಹೆಚ್ಚು ಜನರ ಕೈ ಸೇರುವಂತೆ ಮಾಡಲು ಹಲವಾರು ಹೊಸ ಯೋಜನೆಗಳನ್ನು ಹಮ್ಮಿಕೊಂಡಿದ್ದೇವೆ. ಈ ಸಂಚಿಕೆಯಲ್ಲಿ ಅಲ್ಲಲ್ಲಿ 'ನಮ್ಮ ಹೊಸ ಯೋಜನೆ' ಎಂಬ ಶೀರ್ಷಿಕೆ ಕಂಡು ಬರುತ್ತದೆ. ದಯವಿಟ್ಟು ಇದನ್ನು skip ಮಾಡದೇ ಓದಿನೋಡಿ. ಹಾಸ್ಯಪ್ರಜ್ಞೆಯನ್ನು ಹಾಸ್ಯ ಮನೋಭಾವವನ್ನು ಜನತೆಗೆ ಹರಡುವ ಕಾರ್ಯದಲ್ಲಿ ನೀವೂ ಸಕ್ರಿಯವಾಗಿ ಪಾಲ್ಗೊಳ್ಳಬಹುದು.

ಇನ್ನು ಈ ಸಂಚಿಕೆಯ ತಯಾರಿಯಲ್ಲಿ ನಮ್ಮ ಅಪರಂಜಿ Team ಬಹು ಶಿಸ್ತಿನಿಂದ ದುಡಿದು ಈ ಸಂಚಿಕೆ ಸಕಾಲಕ್ಕೆ, ನಿಮ್ಮ ಕೈಸೇರುವಂತೆ ಮಾಡಿದ್ದಾರೆ. ಜಾಹೀರಾತುಗಳನ್ನು ಸಂಗ್ರಹಿಸಿದ, ಎ.ಆರ್. ರಾಜಗೋಪಾಲ್ ಮತ್ತು ಡಾ॥ ಶರಣ್, ಅಚ್ಚುಕಟ್ಟಾಗಿ ಡಿ.ಟಿ.ಪಿ. ಕೆಲಸ ನಿರ್ವಹಿಸಿದ ಒಮೆಗಾ ಲೇಸರ್‌ಟೆಕ್‌ನ ರವಿ ಮತ್ತು ಆಚಾರ್ಯ, ಮುದ್ರಣದ ಭಾರವನ್ನು ನಗುನಗುತ್ತಾ ವಹಿಸಿದ ರವಿ ಗ್ರಾಫಿಕ್ಸ್‌ನ ವಿ.ಆರ್. ನಾಥ್ ಇವರೆಲ್ಲರಿಗೂ ಅಪರಂಜಿ ಅಭಾರಿ.

**- ಶಿವಕುಮಾರ್**



# ಅಪರಂಜಿ

## (ತಿಳಿನಗೆಯ ಕಾರಂಜಿ)

**ಸಂಪುಟ 14** | **ಏಪ್ರಿಲ್ 97** | **ಸಂಚಿಕೆ-7**

**ಅಮೃತವು ಮರ್ತ್ಯವಾಗಲಾರದು. ಮರ್ತ್ಯವಾದದ್ದು ಅಮೃತವಾಗಲಾರದು.**

**- ಗೌಡಪಾದ**

ಸಾವಿಲ್ಲದ್ದು ಸಾಯುವುದಿಲ್ಲ. ಸಾವಿರುವುದು ಸಾವಿಲ್ಲದ್ದಾಗಲಾರದು ಎಂದು ಗೌಡಪಾದರು ತಮ್ಮ ಕಾರಿಕೆಗಳಲ್ಲಿ ತಿಳಿಸಿದ್ದಾರೆ.

ಆತ್ಮವೊಂದೇ ಅಮೃತ. ಅದು ಮರ್ತ್ಯವಲ್ಲ ಆತ್ಮನಿಗೆ ಹುಟ್ಟು ಎನ್ನುವುದಿಲ್ಲ ಅದೊಂದೇ ಸತ್ಯ. ಉಳಿದದ್ದೆಲ್ಲಾ ಹುಸಿ ತೋರಿಕೆ ಎನ್ನುತ್ತಾರೆ ಗೌಡಪಾದರು. ಉಪನಿಷತ್ತುಗಳು ಅವರಿಗೆ ಪ್ರಮಾಣ.

ಆಹಾ! ನಿಜವಾಗಿ ಪ್ರಮಾಣವೆಂದರೆ ಉಪನಿಷತ್ತುಗಳೇ! ಹಾಗೆ ಲೆಕ್ಕ ಹಾಕಿ ನೋಡಿ.

ಆತ್ಮನೊಬ್ಬನೇ ಸತ್ಯವೆಂದು ಅವು ಹೇಳುವುದರಿಂದ ಸರ್ಕಾರಗಳು ಹುಸಿ ತೋರಿಕೆಗಳು. ಸಂಯುಕ್ತ, ಅಸಂಯುಕ್ತ, ಕನಿಷ್ಠ ಸಾಮಾನ್ಯ ಕಾರ್ಯಕ್ರಮಗಳು, ಸೆಕ್ಯುಲರಿಸಂ, ಬಡತನದ ರೇಖೆ, ಅದರ ಕೆಳಗೆ ಮೇಲೆ ಇವೆಲ್ಲಾ ಹುಸಿ ತೋರಿಕೆಗಳೆಂಬುದು ಸ್ವಯಂ ವೇದ್ಯವಲ್ಲದೆ ಪ್ರಮಾಣ ನಿಶ್ಚಿತವೂ ಆಗಿವೆ.

ಸಿಕ್ಕಷ್ಟೇ ಸೀರುಂಡೆ ಎನ್ನುವುದೇ ಮಿನಿಮಂ ಪ್ರೋಗ್ರಾಂ ಎನ್ನುವುದು ಕುಹಕಿಗಳ ಕೆಲಸ. ಅದೂ ಮಿಥ್ಯವೇ. ಆತ್ಮನೊಬ್ಬನೇ ಸತ್ಯ.

ಆತ್ಮ ತತ್ತ್ವವನ್ನೊಪ್ಪಿಕೊಳ್ಳದಿದ್ದರೆ ಸಬ್ಬಂ ದುಕ್ಖಂ ಎಂದೋ ಶೂನ್ಯವೆಂದೋ ಒಪ್ಪಿಕೊಳ್ಳಬೇಕಾಗುತ್ತದೆ. ಬೋಲ ಬೋಲ.

ಅಸರ್ಕಾರವೆನ್ನುವುದೂ ಮಿಥ್ಯೆಯೇ ಆದ್ದರಿಂದ ವಿವೇಕಿಯಾದವನು, ಸರ್ಕಾರವನ್ನು, ಕ್ರಿಕೆಟ್ ಪಂದ್ಯಗಳ ಫಲಿತಾಂಶವನ್ನೂ ಸಾರಾ ಸಗಟಾಗಿ ತಿರಸ್ಕರಿಸಬೇಕು. 'ಇದು ನಮ್ಮ ಟೀಂ' ಎನ್ನುವ ಅಭಿಮಾನವೇ ತಾನೇ ನಿರಾಶೆಗೆ ಕಾರಣ.

ಆತ್ಮವು ನಿತ್ಯ, ಸರ್ವಗತ, ಸ್ಥಾಣು, ಅಚಲ ಸನಾತನ ಎಂಬ ಅನುಭವವು, ಸರ್ಕಾರಗಳ ವಿಫಲತೆ, ಕ್ರಿಕೆಟ್ ಟೀಮುಗಳ ಸೋಲಿಗೆ ಏಕೈಕ ಪರಿಹಾರ.






○ ಪ್ರಕಾಶ್

ಯುಗದ ಆದಿಯಂದು ಸರ್ವೇಜನಾ

**ನಗುನಗುತೋ ಭವಂತಿ!!**

★★★

ಬಿನ್ನಿ ಮಿಲ್ಸ್ ಪುನರಾರಂಭ -ಸುದ್ದಿ

**ಬನ್ನಿ, ಬನ್ನಿ!!**

★★★

ಒಂದು, ಎರಡು, ಐದು ರೂ. ನೋಟುಗಳ ಮುದ್ರಣ ಸ್ಥಗಿತ - ಪತ್ರಿಕೆ

**ಈಗ ನೋಟುಗಳನ್ನು ಧೈರ್ಯವಾಗಿ ಮುಟ್ಟಬಹುದು!**

★★★

ಬೋಫಾರ್ಸ್ ತನಿಖೆ ಬೋ Farce ಆಗದಿರಲಿ!!

★★★

ಆಸ್ಟ್ರಿಚ್ ಸಾಕಲು ಬೆಂಗಳೂರು ಪ್ರಶಸ್ತ - ಪತ್ರಿಕೆ

**ಹೌದು, ನಮ್ಮ ರಾಜಕಾರಣಿಗಳೂ ಹಾಗೇ ತಲೆ ಮಾಡುತ್ತಾರೆ!!**

★★★

ನೆಲ, ಜಲ, ಗಡಿ ಹಿತರಕ್ಷಣೆಗೆ ಸರ್ಕಾರ ಬದ್ಧ - ಮುಖ್ಯಮಂತ್ರಿಗಳು

**ಪ್ರಧಾನಿಯವರು ಹೇಳಿದ ಮಾತಿನಂತಿದೆ!!**

★★★

ಪೆಟ್ರೋಲ್ ಬಂಕ್ ಹಗರಣ; ಪ್ರಧಾನಿ ಸೊಸೆಗೆ ಕೋರ್ಟ್ ನೋಟೀಸ್ - ಸುದ್ದಿ

**ಮಣ್ಣಿನ ಮಗನಿಗೆ ಪೆಟ್ರೋಲ್ ಆಶೆ ಏಕೆ ಬಂದೀತು ಪಾಪ!!**

★★★

ಗಣಿ ಸಚಿವರ ರಾಜೀನಾಮೆಗೆ ಪರಿಷತ್ತಿನಲ್ಲಿ ಧರಣಿ - ಸುದ್ದಿ

**ಪಾಪ, ಅವರು ಎಲ್ಲವನ್ನೂ Mine ಅಂದರೇನೋ?!**

★★★

**ಶ್ರೀನಾಥ್ ಇಲ್ಲದೆ ಭಾರತದ ಭುಜಬಲ ಕಡಿಮೆಯಾದಂತೆ!!**

★★★



# ಷೆಡ್-ಗ್ರಾಸ್-ಬಾಟಮ್

- ಕೀಫ

ಶೌರೀ....

ಸರ್...?

ನಿಜ ಹೇಳಬೇಕಂದರೆ ನಾನು ನನ್ನ ಸಮಸ್ಯೆಯನ್ನು ಶೌರೀ ಮುಂದೆ ಹಳೋದೋ ಬೇಡವೋ ಅನ್ನೋ ಜಿಗ್... ಅದೆಂಥದೋ ಅಸೆ.... ಯಸ್....ಜಿಜ್ಞಾಸೆ-ಅದರಲ್ಲಿದ್ದೆ. ಹೆಬ್ಬೂರು-ಭಾಗೀರತಮ್ಮ ಚಿಕ್ಕಮ್ಮ ಶಂಕರರಾಯರು ಮೂರ್ತಿಮಣಿ ಊರು-ಹೆಬ್ಬೂರಿನ ಹೈಯರ್ ಸೆಕೆಂಡರಿ ಸ್ಕೂಲಿನಲ್ಲಿ- ವರ್ಷದ ಕರ್ನಾಟಕ ರಾಜ್ಯೋತ್ಸವ ಸಮಾರಂಭಕ್ಕೆ ಚಿಕ್ಕಮ್ಮ ನನ್ನನ್ನ ಮುಖ್ಯ ಅತಿಥಿಯಾಗಿ ಚುನಾಯಿಸಿದ್ದರು. ಆ ಸ್ಕೂಲಿನ ಡೋನರ್ಸ್ ಶಂಕರರಾಯರ ಮನೆಯವರಿಂದ ಆ ಸ್ಕೂಲಿನ ಸಮಾರಂಭಗಳಿಗೆ ಪ್ರತಿವರ್ಷ ನನಗೆ ಅತಿಥಿ ರೋಲ್‌ಗೆ ಆಹ್ವಾನವಿರುತ್ತೆ. ನಾನೂ ಹಾಗೂ ಹೀಗೂ ತಪ್ಪಿಸಿಕೊಂಡೇ ಬರ್ತಾ ಇದ್ದೆ. ಆ ಗೌರವಕ್ಕೆ ನಮ್ಮ ಮೈಗಳ್ಳರ ಸಂಘದ ಸದಸ್ಯರುಗಳಲ್ಲೇ ಒಬ್ಬೊಬ್ಬರನ್ನಾಗಿ ಪುಸಲಾಯಿಸಿ ಕಳ್ಸಿದ್ದೇನೆ. ಶೀನಿ ಸೂರಿ ವಿಶಿ ಶಂಭು ಸೋಮು ಪಲ್ಲು ಗೊರಿಲ್ಲಾ ಪ್ರಭು ಈ ಮುಟ್ಠಾಳ್ರ ಸರದಿ ಎಲ್ಲಾ ಆಗಿದೆ. ನಾನೇ ಕಿಟ್ಟಿ ಚಿನ್ನಿ ವೆಂಕು ತ್ರಿಮೂರ್ತಿಗಳನ್ನ ಅವಾಯ್ಡ್ ಮಾಡಿದ್ದೆ ಆದ್ರೆ ವೆಂಕು ನನ್ನನ್ನ ಶನಿ ಹಿಡಿದ ಹಾಗೆ ಇದು ನನ್ನ ಸ್ವಂತ ಎಕ್ಸ್‌ಪ್ರೆಷನ್ ಅಲ್ಲ ಹೆಬ್ಬೂರು ಮಣಿ ಮತ್ತು ರಾಂಪುರದ ಭೀಮಮಾವನ ಮಗಳು ವಿಮಲಾ ಎಕ್ಸ್‌ಪ್ರೆಷನ್ನು! ಅವರಿಬ್ರೂ ಒಟ್ಟಿಗಿರಲಿ ಬೇರೆಬೇರೆ ಸ್ಥಳಗಳಲ್ಲಿ ಇರಲಿ - ಒಂದು ದಿನದಲ್ಲಿ ಹತ್ತು ಬಾರಿಯಾದ್ರೂ ಯಾರಿಗಾದ್ರೂ ಈ ಮಾತನ್ನು ಹೇಳ್ತಾ ಇರ್ತಾರೆ. ವೆಂಕು ನನ್ನನ್ನ ಶನಿ ಹಿಡಿದಹಾಗೆ ಹಿಡಿದ ಒಂದು ಬಾರಿ ಹೆಬ್ಬೂರಿಗೆ ಕರ್ಕೊಂಡು ಹೋಗು ಅಂತ. ಭಾಗೀರತೀ ಚಿಕ್ಕಮ್ಮನ ಹತ್ತಿರ ವೆಂಕಟೇಶಮೂರ್ತಿರಾವ್ ಡೆಪ್ಯುಟಿ ಆಡಿಟರ್ ಜನರಲ್ಲು - ಎಂ.ಎ.ಬಿ.ಎಲ್. ಅಂತ ಹೊಗಳಿ - ಒಂದು ವರ್ಷ ಅವರ ಸ್ಕೂಲಿನ ಫೌಂಡರ್ಸ್ ಡೇ - ಭಾಗೀರತೀ ಚಿಕ್ಕಮ್ಮನ ಮಾವನವರ ಜ್ಞಾಪಕಾರ್ಥ - ಸಮಾರಂಭಕ್ಕೆ ಕಳ್ಸಿದ್ದೆ. ಆಮೇಲೆ ಚಿಕ್ಕಮ್ಮ ಒಂದು ದಿನ ಒರಟು ಹೇಳಿಬಿಟ್ರು - ಪಾಂಡು ಇನ್ನು ಮುಂದೆ ನಿನ್ನ ಪಟಾಲಂನ ಹೆಬ್ಬೂರಿಗೆ ಕಳಿಸಿದ್ದೇ ಆದರೆ - ನಿನಗೂ ಹೆಬ್ಬೂರು ಮನೇಲಿ ಪ್ರವೇಶವಿಲ್ಲಾ - ತಿಳೀತೆ? ಅಂತ! ಇದು ನನ್ನ ಇತರೇ ಸ್ನೇಹಿತರ ಸಮಸ್ಯೆಗಿಂತ ಪೂರ್ತಿ ವ್ಯತರಿಕ್ತ.

ಶೀನಿ, ಸೂರಿ, ವಿಶು, ಶಂಭು, ಸೋಮು, ಪಲ್ಲು, ಪ್ರಭು ಎಲ್ರೂ ಹೆಬ್ಬೂರಿನಿಂದ ವಾಪಸಾದಮೇಲೆ ಚಾಮುಂಡೀ ಬೆಟ್ಟಕ್ಕೆ ಮೆಟ್ಲುಹತ್ತಿಕೊಂಡು ಹೋಗಿ ದೇವೀ ಮುಂದೆ ಕೈಯಲ್ಲಿ ಕರ್ಪೂರ ಹತ್ತಿಸಿಕೊಂಡು ಪ್ರಮಾಣ ಮಾಡಿಬಿಟ್ರು ಇನ್ನು

ಮುಂದೆ ಹೆಬ್ಬೂರು ದಿಕ್ಕಿನ ಕಡೆ ತಮ್ಮ ತಲೇನಕೂಡ ಇಟ್ಟು ಮಲಗೊಲ್ಲ ಅಂತ, ಚಾಮುಂಡೀ ಬೆಟ್ಟಕ್ಕೆ ಹೋಗೋಕೆ ಮುಂಚೆ ಹೇಳಿಬಿಟ್ಟು ಹೋಗಿ ವಾಪಸ್ ಬಂದ ಮೇಲೆ ತಮ್ಮ ಹಸ್ತ ತೋರಿಸಿ ಸಾಬೀತು ಪಡಿಸಿದರು. ವೆಂಕೂನ ಹೆಬ್ಬೂರಿಗೆ ರವಾನಿಸೋಕೆ ಮೊದಲು ಅವನಿಗೆ ಎಲ್ಲಾ ವಿಧದಲ್ಲೂ ತಯಾರು ಮಾಡೇ ಕಳ್ಸಿದ್ದೆವು ನಾನೂ ಶೌರಿ ಅವನ ಬ್ಯಾಗ್‌ನಲ್ಲಿ ಒಂದು ಕ್ವಾರ್ಟರು ಇಟ್ಟು ಅದನ್ನ ಸಮಾರಂಭ ಮುಗಿದಮೇಲೆ ದಾಮೋದರಯ್ಯನ ಹೋಟೆಲು ರೂಮುಸೇರಿ ಅಲ್ಲಿ ಮುಗಿಸು. ಬೆಳಿಗ್ಗೆ ಮೊದಲ್ನೇ ಡೋಂಟ್ ಫಿಕರ್ ಬಸ್‌ನಲ್ಲಿ ಮೈಸೂರಿಗೆ ವಾಪಸ್ ಬಾ ಅಂತ ಪುನಃ ಮಣಿ ವಿಮಲಾ ಉಪಯೋಗಿಸೋ ಫ್ರೇಸ್ - ಗಿಣೀಗೆ ಹೇಳಿದ ಹಾಗೆ ಹೇಳಿಕಳ್ಸಿದಿವಿ. ಆದರೆ ವೆಂಕು ಮಾಡಿದ್ದೇನು? ಆಮೇಲಕ್ಕೆ ಬದಲು ಮುಂಚೇನೆ ಕ್ವಾರ್ಟರ್‌ನ ಬನ್ಕೊಂಡು ಸಭಾಂಗಣಕ್ಕೆ ಕರ್ಕೊಂಡು ಹೋಗೋವಾಗ ಮಂದಸ್ಮಿತನಾಗಿದ್ದು ಸಮಾರಂಭ ಪೂರ್ತಿ ಮೌನವಾಗಿ ಮಂದಸ್ಮಿತನಾಗಿದ್ದು ಅದೇ ಸ್ಥಿತೀಲಿ ರೂಮಿಗೆ ಹೊತ್ತಿಸಿಕೊಂಡು ಬಂದು ಬೆಳಿಗ್ಗೆ ಎಚ್ಚರವಾಗೋವರ್ಗೂ ಇದ್ದು ಬುಡನ್ ಬಸ್‌ನಲ್ಲಿ ನಗರಕ್ಕೆ ವಾಪಸ್ ಬಂದಿದ್ದ... ಕ್ಷಮ್ಸಿ ಶೌರೀಗೆ ಹೇಳ್ಳೋ ಬೇಡ್ವೋ ಅನ್ನೋ ಜಿಜ್ಞಾಸೇಲಿದ್ದೆ ಅಂತ ಹೇಳಿದೆ ಅಲ್ವೆ.

''ಶೌರಿ ಈ ಬಾರಿ ಹೆಬ್ಬೂರು ಸ್ಕೂಲ್ ಕರ್ನಾಟಕ ರಾಜ್ಯೋತ್ಸವ ಸಮಾರಂಭಕ್ಕೆ ನಾನೇ ಮುಖ್ಯ ಅತಿಥಿ ಗೊತ್ತೆ?''

''ಗೊತ್ತಿರಲಿಲ್ಲ ಸರ್ ಒಳ್ಳೇದಾಯ್ತು ನಿಮ್ಮ ಜೊತೆ ನಾನೂ ಉಜ್ಜನಪ್ಪ ಬರ್ತೀವೆ ಸರ್'' ಅಂದ.

ನನಗೆ ಹೆಬ್ಬೂರು ಚಿಕ್ಕಮ್ಮನಿಂದ ಆಜ್ಞೆ ಬಂದಿದ್ದೂ ನಾನು ಮುಖ್ಯ ಅತಿಥಿಯಾಗೋಕೆ ಒಪ್ಪಿಕೊಂಡದ್ದೂ ಶೌರಿಗೆ ಗೊತ್ತಿತ್ತು. ಅವನಿಗೆ ಗೊತ್ತಿತ್ತೂಂತ ನನಗೆ ಗೊತ್ತಿತ್ತೂಂತ ಶೌರಿಗೆ ಗೊತ್ತಿತ್ತು. ಗೊತ್ತಿತ್ತುಗಳ ಲೆಕ್ಕ ಎಡವಟ್ ಆಗಿದ್ರೆ ಕ್ಷಮ್ಸಿ ಶೌರಿಯ ಟ್ಯಾಕ್ಟ್ ತೋರಿಸೋಕೆ ಈ ರೀತಿ ಹೇಳಬೇಕಾಯ್ತು. ಉಜ್ಜನಪ್ಪನಗರದ ಘಂಟಾಘೋಷ ಪೇಪರ್ ಎಡಿಟರು. ನನಗೆ ಶೌರಿಯ ಸಲಹೆ ಬಗ್ಗೆ ಅನುಮಾನ ಬಂತು ಏನೋ ಕುಂ.ಕೋ. ಇದೇಂತ

''ಉಜ್ಜನಪ್ಪ ಯಾಕೆ ಶೌರಿ? ಹೆಬ್ಬೂರು ಸಮಾರಂಭದಲ್ಲಿ ಏನು ಮಹಾ ಸಮಾಚಾರ ಇರುತ್ತೆ? ಈ ನಗರದಲ್ಲಿ ನಡೆಯೋ ರಾಜ್ಯೋತ್ಸವಗಳಲ್ಲವೇ ಅವನ ಘಂಟಾಘೋಶಕ್ಕೆ ಮ್ಯಾಟರ್ ಸಿಕ್ಕೋದು?'' ಹೇಳಿದ.

ಒಂದೇ ಕಲ್ಲಿಂದ ಎರಡು ಹಕ್ಕಿಗಳನ್ನು ಬೀಳ್ಸೋಕೆ ಪ್ರಯತ್ನ ಮಾಡ್ದೆ.

''ನಾಲ್ಕು ವರ್ಷಗಳ ಹಿಂದೆ ಬಂದಿದ್ದ ಮಂತ್ರಿ ಉಪ ಮಂತ್ರಿಗಳೆಲ್ಲಿ ಸರ್ ಈ ವರ್ಷ ಇಲ್ಲಿಯ ಸಮಾರಂಭಗಳಿಗೆ ಬರ್ತಾರೋರು ಅವರುಗಳು ಆಗ ಮಾಡಿದ ಭಾಷಣಗಳು ಘಂಟಾಘೋಷ ಹಳೇ ಸಂಚಿಕೆಗಳಲ್ಲಿವೆ ಸರ್. ಈ ಬಾರಿ ಅದೇ ರಿಪ್ರಿಂಟ್ ಮಾಡಿದರೆ ಸಾಕು'' ಅಂದ.

ನಮ್ಮ ಮಂತ್ರಿ ಉಪಮಂತ್ರಿಗಳ ಸ್ಥಿತ ಮನೋಧರ್ಮಕ್ಕೆ ಮೆಚ್ಚಿದೆ. ನನಗೋನೋ ಅವರುಗಳು ಹೇಳಿದ್ದೇ ಹೇಳೋ ಕಿ.ಬಾ. ದಾಸರುಗಳಲ್ಲ, ಸ್ಥಿರ ಚಿಂತಕರು ಅಂತ.

''ಉಜ್ಜನಪ್ಪ ಹೆಬ್ಬೂರಿಗೆ ಹೋಗಿದಿದ್ರೆ ನಾನು ಹೋಗ್ತೇನೆ ನಿಮ್ಮ ರಾಯರ ಜೊತೆ ಅಂತ ಸೂರ್ಯ ನಾರಾಯಣರಾಯರು ಹೇಳಿದರು ಸರ್''

ಶೌರಿಯ ವಿ.ಸೂ. ಕೇಳಿ ಎದೆಯಲ್ಲಿ ಢಗ್ ಎಂದಿತು. ಸೂರ್ಯನಾರಾಯಣರಾವ್‌ಅಲಿಯಾಸ್ ಸೂರಿ ನಮ್ಮ ಸಂಘದ ಪ್ರೆಸ್‌ಪರ್ಸನ್ ಹಾಗೂ ಕಾ. ಬಾಳಾಜೀರಾವ್ ಅಳಿಯ ಯಾನೇ ಸುಶೀಲಾಪತಿ ತಾನೊಬ್ಬ ರೂಪರ್ಟ್ ಮುರ್ಡಾಕ್ ಅಂಥ ತಿಳ್ಕೊಂಡಿರೋ ವಿ...

''ನೀನೂ ಉಜ್ಜನಪ್ಪ ಬನ್ನಿ. ಸಭೇಲಿ ಮಕ್ಕಳು ಗಲಾಟೆ ಮಾಡದ ಹಾಗೆ ನೋಡಿಕೊಳ್ಳಿ'' ಅಂದೆ.

''ನಾನೂ ಉಜ್ಜನಪ್ಪ ಆ ಉದ್ದೇಶದ ಮೇಲೆ ಸರ್ ಹೆಬ್ಬೂರಿಗೆ ಬರ್ತಿರೋದು'' ಅಂದ.

''ಸ್ಪ್ಲೆಂಡಿಡ್...''

''ನೀವು ದೊಡ್ಡೋರು ಗಲಾಟೆ ಮಾಡದಹಾಗೆ ರಸವತ್ತಾಗಿ ಭಾಷಣ ಮಾಡಿ ಸರ್'' ಅಂತ ಎನ್‌ಕರೇಜ್‌ಮಾಡ್ತ.

ಶೌರಿ ಸಲಹೇನ ಚೂಯಿಂಗ್ ದಿ ಗಮ್-ನೋ!- ದಿ ಕಡ್ - ಅಂದ್ರೆ ಮೆಲುಕು ಹಾಕಿದೆ.

''ಹೇಗೆ ಶೌರಿ?''

ನನಗೆ ಶೌರಿ ನಾನು ಮಾಡಬೇಕು ಅಂತ ಪ್ರಿಪೇರು ಮಾಡ್ಕೊಂಡಿರೋ ಭಾಷಣಾನ ಇಂಪ್ರೂವ್ ಮಾಡ್ತಾನೇಂತ ಸುತರಾಂ ಮನಸ್ಸಿನಲ್ಲಿರಲಿಲ್ಲ. ಆದರೂ ಶೌರಿ ಎಗ್ರೋನ್ಸ್ಮೂ ನಾನು ಹ್ಯೂಮರ್ ಮಾಡಬೇಕಲ್ಲ!

''ಕೆಲವು ಮುಖ್ಯ ಪದಗಳಿವೆ ಸರ್ ಅವುಗಳನ್ನು ಭಾಷಣದಲ್ಲಿ ಉಪಯೋಗಿಸಿ.

''ಅಂದರೆ ಕೇಳೋರಿಗೆ ತಕ್ಷಣ ಅರ್ಥವಾಗಬಾರದು ಆದರೆ ತುಂಬ ಅರ್ಥವಿದ್ದ ಹಾಗಿರಬೇಕು. ವ್ಯಾಸರೋ ವಾಲ್ಮೀಕಿಗಳೋ ಗಣಪತೀಗೆ ಮಾಡಿದ ಹಾಗೆ.''

ಈ ನಡುವೆ ನಾನು ಶೌರಿ ಹತ್ರ ಮಾತಾಡೋವಾಗ ನನ್ನ ಹಿಸ್ಟಾರಿಕಲ್ ನಾಲೆಡ್ಜ್‌ನ ಪ್ರಯೋಗಿಸ್ತೇನೆ.''

''ಬಿಲ್‌ಖುಲ್ ಸರ್ ಒಳ್ಳೆ ಉಪಮೇಯ ಸರ್ ವ್ಯಾಸರಿಗೂ ಗಣಪತೀಗೂ ಛಾಲೆಂಜ್ ತಾವು ಮಹಾಭಾರತದ ಕಥೆ ಹೇಳೋದನ್ನ ಕ್ಷಣ ಕೂಡ ತಡವರಿಸಬಾರ್ದು ಅಂತ ಗಣಪತಿ. ನಾನು ಹೇಳೋದನ್ನ ಅರ್ಥಮಾಡ್ಕೊಳ್ದೇ ನೀನು ಕೊರಕೋಬಾರ್ದು ಅಂತ ವ್ಯಾಸರು ಸರ್''

ಶೌರಿ ನನ್ನನ್ನ ವ್ಯಾಸರ ಪೊಸಿಷನ್‌ಗೆ ಏರಿಸಿದ್ದು ತುಂಬಾ ಅಪ್ರೋಪ್ರಿಯೇಟ್ ಎನ್ನಿಸಿತು. ಹಿಂದೆ ಒಂದು ಬಾರಿ ಇದೇ ಶೌರಿ ತನ್ನನ್ನ ಸಂಜಯನಿಗೂ ನನ್ನನ್ನ ಧೃತರಾಷ್ಟನಿಗೂ ಹೋಲಿಸಿದ್ದ ನಿಮಗೂ ತಿಳಿದಿರಬಹುದು.

''ನೋಡೋಣ... ಅಂಥಾ ಪದಗಳ ಸ್ಯಾಂಪಲ್ ಕೊಡು ನೋಡೋಣ....''

ಶೌರೀ ಎಗೋಗೆ ಕುಮ್ಮಕ್ಕು ಕೊಟ್ಟೆ.

''ನೀವು ಯಾವುದೇ ಸಭೇಲಿ ಭಾಷಣ ಮಾಡಿದರೂ ಮಧ್ಯೆಮಧ್ಯೆ ವಾಟರ್‌ಷೆಡ್ ಗ್ರಾಸ್‌ರೂಟ್ಸ್ ಮತ್ತು ಬಾಟಮ್‌ಲೈನ್ ಅನ್ನೋ ಮೂರು ಪದಗಳನ್ನು ಉಪಯೋಗಿಸ್ತಿರಿ ನಿಮ್ಮ ಭಾಷಣಕ್ಕೆ ಖಳೆ ಕಟ್ಟುತ್ತೆ''

ಶೌರಿ ಮಾತನ್ನ ಮೆಲುಕು ಹಾಕಿದೆ ಎರಡ್ನೇಬಾರಿ ಒಂಥರಾ ಇದ್ದ ಹಾಗೆ ಕಾಣಿಸ್ತು.

''ನೀನು ಆ ಪದಗಳನ್ನು ಉಪಯೋಗಿಸು ನೋಡೋಣ'' ಕುಮ್ಮಕ್ ನಂಬರ್ ತ್ರೀ!

'' ಉಪಯೋಗಿಸ್ತೇನೆ ಕೇಳಿ ಸರ್ ಕರ್ನಾಟಕ ನಿರ್ಮಾಣವಾದದ್ದು ನಮ್ಮ ದೇಶದ ಚರಿತ್ರೇಲಿ ಒಂದು ರೀತಿ ವಾಟರ್ ಷೆಡ್...''

''ಗುಡ್- ಅದರ ಅರ್ಥವೇನು?''

''ನಿಮಗ್ಯಾಕೆ ಸರ್ ಅದು ಸಭಿಕರಿಗೆ ಬಿಡಿ''

''ವ್ಯಾಸರ ಥರ''

''ಬಿಲ್‌ಖಿಲ್- ಮುಂದೆ ಕೇಳಿ ಸರ್ ನಾವು ಕರ್ನಾಟಕ ರಾಜ್ಯವನ್ನು ಚೆಲುವ ಕನ್ನಡನಾಡು ಮಾಡಬೇಕಾದರೆ ನಾವೆಲ್ರೂ ಗ್ರಾಸ್‌ರೂಟ್ಸ್ ಲೆವೆಲ್ ವರ್ಕ್‌ರ್ಸ್ ಆಗಬೇಕು.''

''ಎಕ್ಸೆಲೆಂಟ್!'' ಅಂತ ಹೇಳದೇ ವಿಧಿ ಇರಲಿಲ್ಲ.

''ನಾವೆಲ್ಲರೂ ನಮ್ಮ ಕನ್ನಡತಾಯಿ ಸೇವೆಗೆ ಕಂಕಣಬದ್ಧರಾಗಬೇಕು. ಅದೇ ಬಾಟಮ್ ಲೈನ್.''

''ವಂಡರ್‌ಫುಲ್-ಥಂಡರ್‌ಫುಲ್!'' ಅಂದೆ ನನಗೆ ಅರ್ಥವಾಗದಿದ್ರೂ.

ಹೆಬ್ಬೂರಿನ ಸ್ಕೂಲಿನ ಸಮಾರಂಭಗಳಿಗೆ ಭಾಗೀರತೀ ಚಿಕ್ಕಮ್ಮ ನನ್ನ ಸ್ನೇಹಿತರುಗಳನ್ನಷ್ಟೇ ಅಲ್ಲದೆ ನನ್ನ ಪೂರ್ವಾಶ್ರಮದ ಹೆಚ್ಚೆಮ್ ಸ್ವಾಮಿರಾಯರನ್ನೂ ಒಂದು ಬಾರಿ ಕರೆದಿದ್ದರು. ಅವರು ರಿಟೈರಾದಮೇಲೆ ಅವರನ್ನು ಹೆಬ್ಬೂರು ಸೀಮೆ ಎಂ.ಎಲ್.ಎ. ಪಟ್ಟಕ್ಕೆ ಏರಿಸ್ತೇನೆ ಅಂತ ಆಸೆ ತೋರಿಸಿ. ಇದೇ ಸ್ವಾಮಿರಾಯರ ಮೇರು ಕೃತಿ ಮ್ಯಾಗ್ನಮ್ ಓಪಸ್ ದೊಡ್ಡವರ ವಿದ್ಯಾಭ್ಯಾಸದಲ್ಲಿ ಹುಡುಗರನ್ನೆಲ್ಲ ಕ್ಷಮ್ಸಿ ಮಕ್ಕಳ ವಿದ್ಯಾಭ್ಯಾಸ ಮತ್ತು ದೊಡ್ಡವರ ಜವಾಬ್ದಾರಿ ಈ ಪುಸ್ತಕಾನ ಸೂರಿ ತನ್ನ ಪೇಪರಿನಲ್ಲಿ ಹೀನಾಮಾನಾ ಟೀಕಿಸಿ ರಿವ್ಯೂ ಮಾಡಿದ್ದ ಕಾರಣ ಸೂರಿ ತನ್ನ ಪೂರ್ವಾಶ್ರಮದಲ್ಲಿ

ಇದೇ ಎಚ್ಚೆಮ್‌ಸ್ವಾಮಿರಾಯರ ಹಂದೀ ಬೆತ್ತದಿಂದ ಬರೆ ಪಡಕೊಂಡಿದ್ದ. ಮುಂದೆ ಸೂರಿ ಬರೆದ ಮೇ.ಕೃ. ಜೀವನನೋ ಅಧ್ವಾನವೋ ಪುಸ್ತಕಾನ ರಿವ್ಯೂಗೆ ಸ್ವಾಮಿರಾಯರಿಗೆ ಕಳ್ಸಿ ಸೂರಿ ಸಾಹಿತ್ಯ ರಚನೇಗೆ ಆಬಿಚುಯರಿ ಮಾಡಿಸಿದ್ದ ಶೌರಿ. ಇರಲಿ ನನಗೆ ಸ್ಕೂಲು ಹುಡುಗರ ಮುಂದೆ ನಿಂತು ಮಾತನಾಡೋದೇನು ಹೊಸದಲ್ಲ. ಹಿಂದೆ ಒಂದು ಬಾರಿ ಯಾವುದೋ ಗರ್ಲ್ಸ್ ಸ್ಕೂಲ್ ಹತ್ರ ನನ್ನ ಒಪೆಲ್‌ಕಾರು ದೃಷ್ಟಿ ಬಡಿದು ಕೆಟ್ಟು ಕೂತಿತ್ತು. ಆ ಸಮಯದಲ್ಲಿ ನನ್ನನ್ನು ಶೌರಿ ಮೇಡಮ್‌ಗೆ ಪರಿಚಯ ಮಾಡಿಸಿ ದೊಡ್ಡ ಪ್ರೊಫೆಸರ್ ಅಂತ ಅವರ ಸುಪರ್ದಿಗೆ ಬಿಟ್ಟು ಕಾರ್ ರಿಪೇರಿಗೆ ಹೋದ. ಮೇಡಮ್ ಕೋರಿಕೆ ಮೇಲೆ ನಾನು ಗರ್ಲ್ಸ್‌ಗೆ ಹಿತವಚನ ಹೇಳಬೇಕಾಯ್ತು. ನನ್ನ ಸ್ಪೀಚ್ ತುಂಬಾ ಎವೆಲ್ಯೂಷನರಿ ಆಗಿರಬೇಕು. ಮೇಡಂ ಮಧ್ಯದಲ್ಲೇ ಕ್ಲಾಸ್‌ನ ಡಿಸ್‌ಮಿಸ್ ಮಾಡಿದ್ದರು. ಪ್ರಾಯಶಃ ನಾನು ಇನ್‌ಗುಡ್ ಫೆಯಿತ್ ಹೆಣ್ಣು ಮಕ್ಕಳಿಗೆ ನೀವು ಮುಂದೆ ಒಳ್ಳೆ ಹಸ್‌ಬೆಂಡ್ಸ್‌ನ ಪಡಕೊಂಡು ದೇಶಕ್ಕೆ ಹೆಚ್ಚು ಹೆಚ್ಚು ಸೋಲ್ಜರ್ಸ್‌ನ-ಸೈನಿಕರನ್ನ ಕೊಡಬೇಕು ಅಂತ ಹೇಳಿದ್ದು ತಪ್ಪಾಗಿತ್ತು. ಅದೇ ಕಾರಣದಿಂದ ಈ ಬಾರಿ ನಾನು ಹುಷಾರಾಗಿರಬೇಕಾಗಿತ್ತು. ಷೆಡ್ ಗ್ರಾಸ್ ಮತ್ತು ಬಾಟಮ್ ನನ್ನ ವಾಚ್‌ವರ್ಡ್ಸ್.

ಹೆಬ್ಬೂರಿನಲ್ಲಿ ಆಡಿಯನ್ಸ್‌ನ ತೃಪ್ತಿ ಪಡಿಸೋದರಲ್ಲಿ ನನಗೆ ಯಾವ ಅನುಮಾನವೂ ಇರಲಿಲ್ಲ. ಅವರಿಗೆ ನನ್ನ ಪರಿಚಯ ಚೆನ್ನಾಗಿತ್ತು. ಭಾಗೀರತೀ ಚಿಕ್ಕಮ್ನ ಅಥಾರಿಟಿ ನನ್ನ ಧೈರ್ಯಾನ ಮತ್ತೂ ಭದ್ರಪಡಿಸಿತ್ತು. ಎಲ್ಲಕ್ಕೂ ಮೇಲಾಗಿ ಹೆಬ್ಬೂರಿನ ಅಡಿಗೆ ಶಾಮಣ್ಣ ತಯಾರಿಸಿದ್ದ ನನ್ನ ಫೇವರಿಟ್ ಘಮಘಮ ತುಪ್ಪದ ಮೈಸೂರ್‌ಪಾಕ್ ಡಿಟೋ ವಾಂಗೀಭಾತ್ ಕ್ಯಾಪ್ಸಿಕಮ್ ಬೋಂಡ-ಕಾಫಿ-ನನ್ನನ್ನ ಪ್ರೈಮ್ ಫಾರಮ್‌ನಲ್ಲಿ ಇಟ್ಟಿತ್ತು. ನಾನು ಹಿಂದೆ ನಮ್ಮ ಮೈಗಳ್ಳರ ಸಂಘದಲ್ಲೇ ಭಾಷಣ ಮಾಡಿದ್ದೇನೆ ಸಾಕಷ್ಟು ಸಲ. ಸಭೆ ಮುಗಿದ ಮೇಲೆ ನಾನು ಮಾತನಾಡಿದ್ದು ಏನು ಯಾವ ವಿಷಯ ಅಂತ ಜ್ಞಾಪಕವಿರೋಲ್ಲ. ಲಾರ್ಡ್ ಬಕ್ಲೀತರಹ ಅಥವಾ ಲಾರ್ಡ್‌ಬರ್ಕ್‌ನ್‌ಹೆಡ್ಡೋ-ಫೇಮಸ್ ಫೆಲೋಸ್!

ಹೆಬ್ಬೂರಿನ ರಾಜ್ಯೋತ್ಸವ ಅಂದರೆ ಹೆಬ್ಬೂರಿನಲ್ಲಿ ನಡೆದ ಕನ್ನಡ ರಾಜ್ಯೋತ್ಸವ ದಟೀಸ್ ಕರ್ನಾಟಕ ರಾಜ್ಯೋತ್ಸವ ಆ ದಿನ ಕೂಡ ಹಾಗೇ ಆಯ್ತು. ಶಾಮಣ್ಣನ ಸೇವೆ ಆದ ತಕ್ಷಣ ನನ್ನನ್ನ ಸಭೆಗೆ ಕರ್ಕೊಂಡು ಹೋದ್ರು. ಆಮೇಲೆ ಶೌರೀ ಭಾಗೀರತೀ ಚಿಕ್ಕಮ್ಮ ನನ್ನನ್ನ ಹೆಬ್ಬೂರು ಮನೆ ಉಪ್ಪರಿಗೆ ರೂಮಿಗೆ ಕರ್ಕೊಂಡು ಬಂದ್ರು. ಈ ಮಧ್ಯೆ ಏನು ನಡೀತು ಅಂತ ನನಗೆ ಗೊತ್ತೇ ಆಗಲಿಲ್ಲ ಭಾಗೀರತಿ ಚಿಕ್ಕಮ್ಮ ರೂಮಿಂದ ಹೊರಟುಹೋದಮೇಲೆ ಶೌರಿ ನನಗೇನೋ ಕುಡಿಯೋಕೆ ಕೊಟ್ಟ. ಪೂರ್ತಿ ಜ್ಞಾನ ಬಂದ ಹಾಗಾಯ್ತು.

''ಶೌರಿ ನನ್ನನ್ನ ನೀನೂ ಭಾಗೀರತಮ್ಮನೋರು ಇಲ್ಲಿಗೆ ಕರ್ಕೊಂಡು ಬರೋಕೆ ಮೊದ್ಲು ಏನು ನಡೀತು ಅಲ್ಲಿ?'' ಕೇಳಿದೆ.

''ಜನ ಕೂತಲ್ಲೇ ನಿಂತ್ರು, ಸರ್ ಬೆಂಚ್‌ಮೇಲೆ ಹತ್ತಿ ಸ್ಟೇಜಿಗೆ ಕಾಗದದ ಏರೋಪ್ಲೇನ್‌ಗಳನ್ನು ಎಸೆದರು ಸರ್. ಅದೇ ಸಮಾರಂಭದ ಚೀಟಿಗಳದ್ದು- ಭಾಗೀರತಮ್ಮನೋರು ಜನಗಣಮನ ಹಾಡಿಸಿಬಿಟ್ರು. ಇನ್ನೂ ಹಾಡ್ತಾ ಇದ್ದಾಗಲೇ ನಿಮ್ಮನ್ನ ಸ್ಟೇಜಿಂದ ಇಳ್ಸಿ....''

''ಸ್ಟಾಪ್!'' ಅಂದೆ.

ಲೋಟದಲ್ಲಿದ್ದದ್ದನ್ನ ಖಾಲಿ ಮಾಡಿದೆ.

''ಮೊದ್ಲಿಂದ ಏನು ನಡೀತು ಹೇಳು ಪ್ಲೀಸ್...''

''ಆಗಲಿ ಹೇಳ್ತೀನೆ ಸರ್ ಮೊದಲು ಪ್ರಾರ್ಥನೆ...''

''ಕಾಮಾಕ್ಷಿಯಿಂದ.....''

''ಸ್ವಾಗತ.....''

'' ಒಬ್ಬ ಮೇಷ್ಟರಿಂದ...''

''ಸುಬ್ರಾಯಪ್ಪ ಸರ್.... ಆಮೇಲೆ ನಿಮ್ಮನ್ನ ಪರಿಚಯ ಮಾಡಿಸಿದರು...''

''ಯಸ್ ಸ್ಟೂಡೆಂಟು ಶಶಿಧರ ಅಂತ..''''

''ಸರಿಸರ್ ಆಮೇಲೆ ನಿಮ್ಮ ಭಾಷಣ.....''

''ಏನು ಹೇಳಿದೆ ನಾನು?''

''ಕರ್ನಾಟಕ ರಾಜ್ಯವಾಗಿದ್ದು ಭಾರತದ ಚರಿತ್ರೇಲಿ ಒಂದು ವಾಟಷೆಡ್ ಅಂದ್ರಿ''

''ಸರಿತಾನೆ?''

''ಬಿಲ್‌ಖುಲ್ ಸರ್. ನಾವೆಲ್ಲೂ ಗ್ರಾಸ್‌ರೂಟ್ಸ್‌ಸ ಲೆವಲ್ ವರ್ಕರ್ಸ್‌ಥರ ಶ್ರಮಿಸಬೇಕು....''

''ಸರಿತಾನೆ?''

''ಬಿಲ್‌ಕುಲ್ ಸರ್. ಸಮಾಜಸೇವೆ ದೇಶದ ಸೇವೆ ನಮ್ಮ ಮುಂದಿರುವ ಬಾಟಮ್ ಲೈನ್....''

''ಸರಿತಾನೆ?''

''ಬಿಲ್‌ಕುಲ್‌ಸರ್. ಮುಂದೆ ಕಂಟಿನ್ಯೂ ಮಾಡಿ ನಮ್ಮನ್ನಾಳ್ತಾ ಇದ್ದಾರಲ್ತಾ ಎಲ್ಲಾ ಕ್ರಿಮಿನಲ್ಸು ಹವಾಲಿಗಳು ಅವರುಗಳು ಎಲೆಕ್ಟಾಗಿ ಬಂದಿದ್ದು. ಅವರ ಜೀವನದಲ್ಲಿ ಒಂದು ವಾಟರ್‌ಷೆಡ್ ಅಂತ ಮುಂದುವರಿಸಿದ್ರಿ..''

''ನಿಜ್ವೆ?''

ಬಿಲ್‌ಖುಲ್‌ಸರ್ ಅವರೆಲ್ಲೂ ಗ್ರಾಸ್‌ರೂಟ್ ಲೆವೆಲ್ ಠಕ್ಕರು - ಪಕ್ಕಾ ಚೋರರು ಅಂಥ ಹೇಳಿದಿರಿ''

''ನಿಜ್ವೆ?''

''ಬಿಲ್‌ಖುಲ್‌ಸರ್. ಹಾಗೇ ಮುಂದುವರಿಸಿ ನಾವು ಸುಮ್ನೆ ಕೂತಿರಬಾರ್ದು. ವಿವೇಕಾನಂದರ ಹಾಗೆ ಎದ್ದೇಳಬೇಕು ಅವರುಗಳನ್ನೆಲ್ಲಾ ಅಂಡಮಾನ್ ಐಸ್‌ಲೆಂಡ್‌ಗಳಿಗೆ ಗಡೀಪಾರ್ ಮಾಡಿಬಿಡಬೇಕು ಅದೇ ನಮ್ಮ ಮುಂದೇ ಇರೋ ಬಾಟಮ್ ಲೈನ್ ಅಂದ್ರಿ. ತುಂಬಾ ಕರತಾಡನವಾಯ್ತು ಜನ ಎದ್ದು ನಿಂತ್ರು.''

''ನಿಜ್ವೆ?''

''ಬಿಲ್‌ಖುಲ್‌ಸರ್- ಅಷ್ಟಕ್ಕೇ ನೀವು ನಿಲ್ಲಿಸಲಿಲ್ಲ ಟೇಬಲ್ ಮೇಲಿಟ್ಟಿದ್ದ ಗ್ಲಾಸ್ ಖಾಲಿಮಾಡ್ತಾ ನಿಮ್ಮ ಮಾತನ್ನ ಮುಂದುವರಿಸಿದಿರಿ ನಮ್ಮ ನಾಯಕರುಗಳನ್ನೆಲ್ಲಾ ಮೊದಲಿಂದ ಒಳಗೇ ಇದ್ದೋರನ್ನ ಹೊರಗೆ ತೊಲಗಿ ಹೋಗಿದ್ದೋರು ಪುನಃ ಪ್ರವೇಶ ಮಾಡಿರೋರನ್ನ ಇದೇ ಹೆಬ್ಬೂರು ಬಫೆಲೊ ಷೆಡ್ಡುಗಳಲ್ಲಿ ಸೇರಿಸಿ ಒಣಗಿದ ಗ್ರಾಸ್‌ನ ಫೀಡ್‌ಮಾಡಿ ಅವರುಗಳ ಬಾಟಮ್ಸ್‌ನ ಕಿಕ್ ಮಾಡಬೇಕು ಅಂದ್ರಿ...''

''ಭಗವಂತಾ...''

ಬಿಲ್‌ಖುಲ್‌ಸರ್- ಆಗ್಴ೇ ಏರೋಪ್ಲೇನುಗಳು ಸ್ಟೇಜಿನ ಮೇಲೆ ಬಂದಿದ್ದು. ನಿಮ್ಮನ್ನು ಇಲ್ಲಿಗೆ....''

''ಸ್ಟಾಪ್‌ಶೌರಿ ಟೇಬಲ್ ಮೇಲೆ ಗ್ಲಾಸ್‌ನಲ್ಲಿ ಇದ್ದಿದ್ದು ನೀರು ತಾನೆ?''

''ಸಮಾರಂಭವಾದ ಮೇಲೆ ನಿಮಗೆ ಕೊಡೋಣಾಂತ ರೂಮಿನಲ್ಲಿ ಜಿನ್‌ಲೆಮನ್‌ಕಾರ್ಡಿಯಲ್ ಗ್ಲಾಸ್‌ನಲ್ಲಿಟ್ಟಿದ್ದೆ. ಹಾಗೂ ಇಲ್ಲಿಗೆ ತರೋಕೆ ಬಾಯಿಲ್ಡ್ ವಾಟರ್ ಗ್ಲಾಸ್‌ನಲ್ಲಿಟ್ಟಿದ್ದೆ''

''ಎರಡೂ ಕಲರ್‌ಲೆಸ್''

''ಬಿಲ್‌ಖುಲ್ ಸರ್- ಅದೇ ಅದುಲುಬದಲಾಗೋಯ್ತು''

''ಮುಂದೆ ನಾನು ಚಿಕ್ಕಮ್ಮನಿಗೆ ಹೇಗೆ ಮುಖ ತೋರಿಸ್ಲಿ ಶೌರಿ?''

''ಉಜ್ಜನಪ್ಪ ನಿಮ್ಮ ಲಗೇಜ್‌ನ ಕಾರ್‌ನಲ್ಲಿಟ್ಟು ಬಿಟ್ಟಿದ್ದಾನೆ. ನೀವು ಈ ಶಾಲು ಹೊದ್ದಿಕೊಂಡು ಹೋಗಿ ಕಾರಲ್ಲಿ ಕೂರಿ ಸರ್...''

''ಗಾಗಲ್ಸ್ ಬೀಯಡ್ರ್ಟು..''

''ಒಂದೂ ಬೇಡ ನಡೀರಿ ಸರ್- ಎಲ್ರೂ ನಿಮ್ಮ ಭಾಷಣಾನ ಎಂಜಾಯ್ ಮಾಡಿದ್ದಾರೆ ಸರ್- ಇದು ವರ್ಗೂ ಈ ಥರಾ ಸ್ಪೀಚ್‌ನ ಅವರು ಕೇಳಿರಲಿಲ್ಲ.''

''ಆದರೆ .... ನಮ್ಮ ಆಂಟು ಭಾಗೀರತಮ್ಮನೋರು...''

''ಅವರೂ ಎಂಜಾಯ್ ಮಾಡಿರಬೆಕು ಸರ್.. ಒಳ್ಗೊಳ್ಗೇ ನಗ್ತಾ ಇದ್ರು ನಾನೂ ಉಜ್ಜನಪ್ಪ ಘಂಟಾಘೋಷದಲ್ಲಿ ಒಳ್ಳೆ ರಿಪೋರ್ಟ್ ಕೊಡ್ತೇವೆ....''

''ಸರಿ ನಡಿ ಶೌರಿ'' ಅಂದೆ.

# ಭೂ-ಕೈಲಾಸವಿದು

- ಶಿವರಾಮ ಕಾರಂತ

ಭೂ ಕೈಲಾಸದಲಿ ಮೆರೆದವನೆ ಭೂತ
ಎಲ್ಲಿ ನೋಡಿದೆಂತಲ್ಲಿ ಆವನ ಪ್ರತಾಪ!
ಬಿರುದು ಬಾವಲಿಗಳಿರದೆ ಹೊಗಲಾರೆ ನೀ ಸಗ್ಗ
ಅವನು ಕಲ್ಪಿಸಿದ ರೇಕೆ- ಬಲ್ಲೆಯಾ ಎಗ್ಗ?
ಇಂದಿಗಿಂತಲು ಜಾಣ ಜನತೆಯಿದ್ದಿತ್ತು ಹಿಂದೆ
ಮನಸಿನಾ ಮಂಡಿಗೆಯ ಮೆಲುವ ಜನರೆಂದೆ
ಸುತ್ತುವರಿದಿರೆ ಜನತೆ- ಜಾಣ ಬಾಳುವದಾರಿ
ಜಾಣನಾಳುವ ದಾರಿ- ಆಗಿತ್ತು ಸಿಂಹಸವಾರಿ।
ಮೇಲೇರಿದನ ಕಂಡು ತಾಲೂವರು ಹೊಟ್ಟೆಯುರಿ
ಅದಕಿಂತ ಬೇರೊಂದು-ನಡೆಯಿಲ್ಲ ಪರಿಪರಿ।
ಹಳೆಗಾಲದಾ ಮಂದಿ ನಿಮ್ಮಜ್ಜ ಪಜ್ಜ
ಕಂಗಾಣದಯೆ ಬದುಕಿ- ಸತ್ತೊಡನೆ ಬೊಳ್ಳ
ಸಾಯದೆಯು ವಿಧಿಯಿಲ್ಲ- ಮುಂದೇನು ಕಜ್ಜ?
ಅಳಿದ ಮೆಲೆ ಉಳಿಯಲ್ಕೆ- ಇಹುದೇನು ದಾರಿ?
ಆಸೆಯಂಬುದು ಅದಕೆ ಬಯಕೆ, ಹೆದ್ದಾರಿ
ತಣಿಸಲಾರದ ಆಸೆ ಹೊತಾತತನೇ ಜಾಣ
ದಣಿಯಲೊಲ್ಲದ ಬಯಕೆ- ನೀಡಲಿದೆ ತ್ರಾಣ
ಜಿಗಿ ಮುಂದೆ ನೆಗೆ ಮುಂದೆ- ಅದೊಂದೆ ದಾರಿ
ಗೊತ್ತಿರಲಿ, ಇರದಿರಲಿ- ಹಾರು ಹೌಹಾರು-
ದಣಿವು ಅನಿಸಿದ ಹೊತ್ತು, ಕೆಳಗೆ ದಿಟ್ಟಿಯ ಬಿತ್ತು
ಎಲ್ಲಿ ನೋಡಿದೊಡಲ್ಲಿ-ಬೆಪ್ಪುಗಳು ಸುತ್ತುಮುತ್ತು
ಕುರಿಮಂದೆಯೇ ಮಂದಿ-ಭ್ರಮ ಮತ್ತು ಮತ್ತು
ಹಿರಿತನದ ಮೆರೆಸಲ್ಕೆ ಇದುವೆ ಕಾಲವು ನೋಡು;
ಮೆರೆಯುತಲಿ ಹಾರಾಡು- ಸಂತಸದಿ ಈಡಾಡು

# ಸಂಸ್ಕೃತಿ - ಸಂಘರ್ಷ

- ಕಮಲಾ ರಾಮಸ್ವಾಮಿ

ಬಾಗಿಲಲ್ಲಿ ನಿಂತು ಬೆಲ್ ಒತ್ತಿದೆ. ಕರೆಂಟು ಇದ್ಯೋ ಇಲ್ವೋ ಅಂತ ಅನುಮಾನ ಪಡುವಷ್ಟರಲ್ಲೇ ಅಚ್ಚಕ್ಕ ಬಾಗಿಲು ತೆರೆಯಲು ಬಂದರು.

''ಪಮ್ಮೀನೇ ಬಾ. ಸುಶೀ ಅಂದ್ಲು ನೀ ಬರ್‍ತೀಂತ ಎಲ್ಲಾ ನಿನಗೋಸ್ಕರ ಕಾಯ್ತಾ ಇದ್ದಾರೆ'' ವಾತ್ಸಲ್ಯದಿಂದ ಸ್ವಾಗತ ಬಯಸಿದರು.

''ನೀವು ಚೆನ್ನಾಗಿದ್ದೀರಾ ಅಚ್ಚಕ್ಕ?''

''ಹೂಂ ಕಣಮ್ಮಾ; ನಿಮ್ಮಮ್ಮ ಹೇಗಿದ್ದಾರೆ? ಎಲ್ಲಿದ್ದಾರೆ?''

''ಹುಷಾರಾಗಿದ್ದಾರೆ, ಅಣ್ಣನ ಮನೇಲಿ ಮೈಸೂರಿನಲ್ಲಿದ್ದಾರೆ.''

''ಸುಶೀ, ಸುಚಿ, ಸುನಂದಾ ಪಮ್ಮಿ ಬಂದ್ಲು ಬನ್ರೇ?'' ಅಚ್ಚಕ್ಕ ಗಟ್ಟಿಯಾಗಿ ಕೂಗಿ ಹಾಲಿನಲ್ಲಿನ ಸೋಫಾ ಮೇಲೆ ನನ್ನ ಪಕ್ಕದಲ್ಲೇ ಕೂತರು.

''ಎಲ್ಲಾರು ಒಟ್ಟಿಗೆ ಬಂದು ತುಂಬಾ ದಿನ ಆಯ್ತು. ನಿಮ್ಮ ಷಷ್ಠಿಪೂರ್ತಿ ಶಾಂತಿ ಮಾಡಬೇಕೂಂತ ಎಲ್ಲಾ ಸೇರಿದ್ದಿವಿ ಅಂದ್ಲು ಸುಶೀ....''

''ಹೂಂ ಬೇಡಾಂದ್ರೆ ಕೇಳ್ತಾರ್ಯೆ; ವಯಸ್ಸಿಗೇನು, ಓಡಿ ಹೋಗುತ್ತೆ. ಒಂದು ನೆಪ ಎಲ್ರೂ ಸೇರುಕ್ಕೆ, ಒಳ್ಳೆಯದಾಯ್ತು ಅಂದ್ಕೊಂಡೆ,'' ಅಚ್ಚಕ್ಕ ಸ್ವಲ್ಪ ಸಂಕೋಚದಿಂದ ನುಡಿದರು.

ಒಳಗಿನಿಂದ ಮಗುವೊಂದರ ಚೀರಾಟ, ಸಮಾಧಾನದ ಮಾತುಗಳು ಅಸ್ಪಷ್ಟವಾಗಿ ಕೇಳಿಬರುತ್ತಿತ್ತು. ''ಅಯ್ಯೋ ನೋಡಿ, ಒಬ್ಬೊಬ್ರು ಒಂದೊಂದು ದಿಕ್ಕಿನಿಂದ ಬಂದಿದ್ದಾರೆ. ಆ ಮಕ್ಕಳಿಗೆ ಈ ಊರು, ಜನ ಜಾಗ, ಎಲ್ಲಾ ಹೊಸದು. ಅದನ್ನ ಸುದಾರ್‍ಸೊ ಹೊತ್ಗೆ ಅವಕ್ಕೆ ಸಮಾಧಾನ ಮಾಡೋದ್ರಲ್ಲೇ ಟೈಂ ಕಳೆಯುತ್ತೆ'' ಒಳಗಿನಿಂದ ಸುನಂದ ಬಂದ್ಲು ''ಏನೇ ಪಮ್ಮಿ, ಎಷ್ಟು ದಪ್ಪ ಆಗಿದ್ದೀಯಾ?'' ಶಶಿಯನ್ನು ಅಕ್ಕರೆಯಿಂದ ತಬ್ಬಿಕೊಂಡ್ಳು.

''ಸುಚಿ ಮಗು ಅಳು ನಿಲ್ಲಿಸ್ತೇನೇ?'' ಅಚ್ಚಕ್ಕ ಕೇಳಿದರು.

''ಹೂಂ ಸ್ವಲ್ಪ ನಿಲ್ಸಿದೆ. ಆದರೆ ಸುಚೀನ ರೂಂನಿಂದ ಆಚೆ ಬಿಡ್ತಾ ಇಲ್ಲಾ'' ಅಂದ್ಲು.

''ಯಾಕೆ ಏನಾಯ್ತು?'' ಅಂದೆ.

''ಯಾಕ್ಹೇಳ್ತಿ ಬೆಳಗಿನ ಹಗರಣನಾ! ನಿಂಗೊತ್ತಿಲ್ಲಾ ಸುಚಿ ಇರೋದು ಸ್ವಿಟ್ಸ್‌ರ್‌ಲ್ಯಾಂಡ್‌ನ ಹತ್ರ ಯಾವುದೋ ಸಣ್ಣ ಹಳ್ಳೀಲಿ. ಮನೇಲಿ ತಾಯಿ, ಮಗು, ತಂದೆ ಬಿಟ್ಟರೆ ಕೆಲಸಕ್ಕೆ ಬರೋ ಯೋರೋಪಿಯನ್ ಹುಡುಗಿ. ನಾವೆಲ್ಲಾ ಹೀಗೆ ಕೆಂಪು, ಹಸಿರು ಬಣ್ಣಬಣ್ಣದ ಸೀರೆ ಉಟ್ಟು, ಗಟ್ಟಿಯಾಗಿ ಕನ್ನಡ ಮಾತಾಡಿದ್ರೆ, ಹೆದ್ರಿ ಅತ್ತು ಅಮ್ಮನ

ಮಡ್ಕಲ್ಲಿ ಕೂತುಬಿಡುತ್ತೆ. ಇವತ್ತು ಬೆಳಿಗ್ಗೆ ಅಡಿಗೆಗೆ ಬಂದಿರೋ ಗೌರಮ್ಮ, ಕಾಫಿ ತಗೊಂಡು ಸುಚೀಗೆ ಕೊಡಕ್ಕೆ ಹೋದ್ರು, ವರ್ಷಾವರೆ ಆ ಹುಡುಗ ''ಕಿಟ್ಟಿ'' ಅಂತ ಕಿರುಚಿ ಅಮ್ಮನ ನೈಟೀಲಿ ಮುಖ ಹುದುಗಿಸಿಕೊಂಡಿತು. ''ಏನಾಯ್ತು'' ಅಂತ ವಿಚಾರಿಸಿದ್ರೆ ""Something is there behind that women mom" ಎಂದು ಗೋಳಾಡ್ತು. ನನಗಂತೂ ಭಯವೇ ಆಯ್ತು. ಪುಟ್ಟ ಮಕ್ಕಳಿಗೆ ಅಗೋಚರ ವಾದದ್ದೆಲ್ಲಾ ಕಾಣಿಸುತ್ತಂತೆ. ಏನು ಕಾಣುತ್ತೋ ಅಂತ ಹೆದ್ರಿದ. ''ಕೇಳೇ ಏನದು ಅಂತ'' ಸುಚೀನ ಮೆಲ್ಲಗೆ ಕೇಳ್ದೆ. ""What's it honey" ಅಂತ ಸಮಾಧಾನ ಮಾಡ್ತಾ ಕೇಳಿದ್ಲು. ಅಷ್ಟು ಹೊತ್ತಿಗೆ ಗೌರಮ್ಮ ಕಾಫಿ ಲೋಟ ತಗೊಂಡು ಹೊರಟ್ರು. ಮಗು ಬೆದರುತ್ತಾ ಅವರ ಕಡೆ ತಿರುಗಿ ""See mom Something is hanging behind her" ಅಂತ ತೋರಿಸ್ತು. ಗೌರಮ್ಮ ಅರೆನರೆತ ಕೂದಲಿನ ಉದ್ದ ಜಡೆ ಬೆನ್ನ ಮೇಲೆ ಓಡಾಡ್ತಾ ಇದ್ದದ್ದು ಕಂಡು ಹೆದರಿ ಕೂಗಾಲಾಯ್ತು ಆ ಮಗು. ಪಾಪ ಹುಟ್ಟಿದಾಗಿನಿಂದ, ತಂದೆ, ತಾಯಿ ಅವರ ಅಕ್ಕ ಪಕ್ಕ ಎಲ್ಲಾ ಬಾಬ್‌ಕಟ್ಟಿನವರೇ, ಇನ್ನೂ ಸಮಾಧಾನ ಮಾಡ್ಕೊತಾ ಇದೆ: ನೀವೆಲ್ಲಾ ಮಾತಾಡ್ತ ಇರಿ, ನಾನು ಅಡಿಗೆ ಮನೆಗೆ ಹೋಗಿ ಬರ್ತೀನಿ'' ಅಚ್ಚಕ್ಕ ನಗುತ್ತಾ ಎದ್ರು.

ಸುನಂದಾ ಸ್ನಾನ ಮುಗಿಸಿಕೊಂಡು ಬಂದ್ಲು. ''ಹಾಯ್ ಪಮ್ಮಿ, ಹೌ ನೈಸ್ ಮೀಟಿಂಗ್ ಎನ್ ಓಲ್ಡ್ ಫ್ರೆಂಡ್'' ಅಂತ ಹೇಳ್ತಾ ಕೂತಳು. ಹರಟೆ ಶುರುವಾಗಬೇಕು. ಅಷ್ಟೊತ್ತಿಗೆ ಅಣ್ಣಯ್ಯ ಬಂದ್ರು. ಅಚ್ಚಕ್ಕ, ಅಣ್ಣಯ್ಯ ಹೇಳಿ ಮಾಡಿದ ಜೋಡಿ. ಈ ಲಕ್ಷ್ಮಿದೇವಮ್ಮ, ಸುಬ್ಬರಾಯರು ಮೂರು ಹೆಣ್ಣು ಎರಡು ಗಂಡು ಮಕ್ಕಳಿಂದ ತುಂಬಿದ ಸಂಸಾರದಲ್ಲಿ ಈಸಾಡಿ ಸಂಸಾರ ನೌಕೆಯನ್ನು ಅಚ್ಚುಕಟ್ಟಾಗಿ ದಡ ತಲುಪಿಸಿ, ಎಲ್ಲಾ ಮಕ್ಕಳು ಸರಿಯಾಗಿ ಸೆಟ್ಲಾದ ಮೇಲೆ ನಿರಂತರವಾಗಿ ಕಾಲು ಚಾಚಿ ಕುಳಿತವರು.

ಅಣ್ಣಯ್ಯನ ಜೊತೆ ಸುಶೀಯ ಮೂರು ವರ್ಷದ ಮಗಳು ಸುಮಾ ಬಂದಳು, ಬಲು ಮುದ್ದಾದ ಹುಡುಗಿ.'' ಬಾರೇ ಸುಮಾ, This is my friend" ಅಂತ ಮಗಳನ್ನು ಹತ್ತಿರ ಕರೆದಳು.

''ಮಕ್ಕಳಿಗೆ ದೇಶ, ಪರಿಸರ, ನಡೆ-ನುಡಿ, ಸಂಸ್ಕೃತಿ ಎಂಥಾ ಪರಿಣಾಮ ಬೀರುತ್ತೆ ಅಂತ'' ಅಲ್ಲೇ ಇದ್ದ ಕುರ್ಚಿ ಎಳೆದುಕೊಂಡು ಅಣ್ಣಯ್ಯ ನಮ್ಮೊಂದಿಗೆ ಕೂತರು.

''ಹೌದು ಅಣ್ಣಯ್ಯ! ನೀವು ಹೇಳೋದು ನಿಜ'' ಅಂದೆ.

''ನಿನಗೆ ಇದನ್ನ ಹೇಳಲೇ ಬೇಕು ಪಮ್ಮಿ! ಅದೇ ಇವಳ ಷಷ್ಠಿಪೂರ್ತಿಗೆ ಅವಳ ತಮ್ಮಂದಿರನ್ನು ಕರೆದು ಬರೋಣ ಅಂತ ಬೆಳಿಗ್ಗೆ ಹೊರಟೆ. ಒಬ್ನೆ ಶುಭಕಾರ್ಯಕ್ಕೆ ಹೋಗ್ಬಾರ್ದು ಅಂತ ಸುಮಾನ್ನ ಕರ್ಕೊಂಡು ಹೋದೆ. ಅಲ್ಲೇ ಆ ಬಸವನಗುಡಿ ಹಳೇ ಮನೆ ಡೆವಲಪರ್ಸ್‌ಗೆ ಕೊಟ್ಟು 'ಮೂರೂ ಜನ ಒಂದೇ ಬಿಲ್ಡಿಂಗ್‌ನಲ್ಲಿದ್ದಾರೆ. ಎಲ್ಲಾರ ಮನೆನೂ ಒಂದೇ ಸಾರ್ತಿ ಮುಗಿಸಿಬಿಡಬಹುದು ಅಂತ ಹೊರ್ಟೆ, ಕೊನೆದಾಗಿ ರಾಜು ಮಾಮನ ಮನೆಗೆ ಹೋದಾಗ ನಿನ್ನ ಮಗಳು ಅಲ್ಲೇ ತಗಲುಹಾಕಿದ್ದ ನಮ್ಮ ಮಾವನವರ

ಫೋಟೋ ನೋಡಿದಳು. ಎಲ್ಲಾರ ಮನೆಯಲ್ಲೂ ಈ ಫೋಟೋ ಅದಕ್ಕೊಂದು ಹಾರ ಕಂಡು ಅವಳಿಗೆ ಸೋಜಿಗ ಎನ್ನಿಸಿರಬೇಕು ""Why thatha, the same photo is here also" ಅಂದ್ಲು. ರಾಜು ಅದಕ್ಕೆ ""Oh! That is my father, your great grand father. He is no more. He was 98' when he died" ಅಂದ. ಪಟಕ್ ಅಂತ ಸುಮಾ ಕೇಳಿದ್ಲು ""Who shot him?" ಸೌದಿಯಲ್ಲಿದ್ದ ಆ ಮಗುವಿಗೆ ಮರಣ ಎಂದರೆ ಬಂದೂಕಿನಿಂದಲೇ ಎಂದುಕೊಂಡಿದೆ. ತುಪಾಕಿ ಸಂಸ್ಕೃತಿಯ ನಾಡದು'' ಅಣ್ಣಯ್ಯ ಮಾತು ಮುಗಿಸುವಷ್ಟರಲ್ಲಿ ಅಚ್ಚಕ್ಕ ಕಾಫಿ ತಂದಿದ್ದರು. ''ಅಯ್ಯೋ ಪಮ್ಮಿ! ಮೊನ್ನೆ ಆದ ವಿಚಾರನ ನಿಂಗೆ ಹೇಳಲೇ ಬೇಕು, ನೀವೇ ಹೇಳಿಂದ್ರೆ'' ಅಚ್ಚಕ್ಕ ಅಣ್ಣಯ್ಯನಿಗೆ ಹೇಳಿದ್ರು.

ಅಣ್ಣಯ್ಯ ಕಥೆ ಹೇಳುವುದರಲ್ಲಿ ನಿಸ್ಸೀಮರು. ''ಈಗಿನ ಕಾಲದ ಮಕ್ಕಳು ಬಹಳ ಬುದ್ಧಿವಂತರು. ಬೇರೆ ಬೇರೆ ದೇಶಗಳಲ್ಲಿ ಬೆಳದ ಅವರ ಮನೋಭಾವ, ಮಾತುಕಥೆ ಎಲ್ಲಾ ನಮಗೆ ಹೊಸದು. ನಮ್ಮ ರವೀಗೆ ಎರಡು ಹೆಣ್ಣು ಮಕ್ಕಳು. ಬಹಳ ಪ್ರಚಂಡರು. ಅಮೇರಿಕಾದಲ್ಲೇ ಹುಟ್ಟಿ ಬೆಳೆದಿದ್ದು, ಈ ಷಷ್ಠಿಪೂರ್ತಿಗೆ ರಜಾ ಶುರುವಾದಾಗಲೇ ಬಂದವು. ಪಾಪಣ್ಣ, ಅದೇ ನನ್ನ ಹಿರೀಮಗನೂ ಕೀನ್ಯಾಯಿಂದ ಬಂದಿದ್ದ. ಅವನು, ನಿನಗೆ ಗೊತ್ತಲ್ಲ ತಮಾಷೆ, ಹಾಸ್ಯ, ಎಲ್ಲಾ ವಿಪರೀತ, ರವಿಯ ಹಿರೀ ಮಗಳು ಸಹನಾ ಅವನ್ನ family tree ಕೇಳುಕ್ಕೆ ಹೋದಳು ಅವನು ಸ್ವಲ್ಪ ನಾಟಕ ಆಡಿದ. ''ನಾನೂ ಆಫ್ರಿಕಾದಲ್ಲಿ ಒಬ್ಬ ಯುವರಾಜನಾಗಬೇಕಿತ್ತು. ನನ್ನ ಅಣ್ಣ ನನ್ನ ರಾಜ್ಯ ಕಿತ್ತುಕೊಂಡು ನನ್ನನ್ನು ಓಡಿಸಿಬಿಟ್ಟ. ನಾನು ಹೀಗೆ Ordinary Scientist ಆಗಿದ್ದೇನೆ'' ಎಂದು ಹೇಳಿದ. ಸಹನಾಳಿಗೆ ಆಶ್ಚರ್ಯ ''ನಮ್ಮ ತಂದೆ ಯಾವಾಗಲೂ ನಾವಿಬ್ಬರೇ ಅಣ್ಣತಮ್ಮಂದಿರು ಅಂತಿದ್ದರಲ್ಲಾ'' ಎಂದು ಯೋಚಿಸಿದಳು. ಬಗೆಹರಿಯಲಿಲ್ಲ. ಮಾರನೇ ದಿನ ಬೆಳಿಗ್ಗೆ ಅಚ್ಚಕ್ಕ ತುಳಸಿ ಪೂಜೆ ಮುಗಿಸುವವರೆಗೂ ಕಾದಿದ್ದು, ಕೊಟ್ಟ ದ್ರಾಕ್ಷಿ ಪ್ರಸಾದ ತಿಂದು ''ಅಜ್ಜಿ Can I ask now a very personal question" ಎಂದಳಂತೆ. ಅಜ್ಜಿಗೆ ಆಶ್ಚರ್ಯ. ''ಅದಕ್ಕೇನು ಕೇಳು'' ಅಂಥ ಸೀಬೆ ಗಿಡದ ಕೆಳಗೆ ಕಲ್ಲು ಬೆಂಚಿನ ಮೇಲೆ ಕುಳಿತರು.

''ನಿಮಗೆ ಎಷ್ಟು ಜನ ಗಂಡು ಮಕ್ಕಳು''

''ಇಬ್ಬರೇ ಯಾಕಮ್ಮಾ?'' ಅಚ್ಚರಿಯಿಂದ ಅಚ್ಚಕ್ಕ ಕೇಳಿದರು.

''ಖಂಡಿತಾನಾ, ನೀವೇನೂ ಬಚ್ಚಿಟ್ಟಿಲ್ಲವಲ್ಲಾ, ನಾನು ಯಾರಿಗೂ ಏನೂ ಹೇಳಲ್ಲ'' ಅಂದಳು.

''ಬಚ್ಚಿಡಕ್ಕೆ ಏನಿದೆ'' ಗಾಭರಿಯಾಯಿತು ಅಚ್ಚಕ್ಕನಿಗೆ

''ಏನಿಲ್ಲ; ಗ್ರಾಂಪಾ ಅಣ್ಣಯ್ಯನಿಗೆ ತಿಳಿಯದಂತೆ, ನಿನಗೊಬ್ಬ ಮಗ ಇದ್ದಾನೆಯೇ?''

ಅರವತ್ತರ ಪ್ರಾಯದಲ್ಲೂ ಅಚ್ಚಕ್ಕನ ಮುಖ ಕೆಂಪೇರಿತು ಥೂ, ಎಂಥಾ ಮಾತೇ ನೀನಾಡೋದು ಅಂತಾದೆಲ್ಲಾ ನಮ್ಮ ದೇಶದಲ್ಲಿ ಆಗಲ್ಲ.

''ಹುಂ'' ನಕ್ಕಳು ಸಪನಾ ''ಯಾಕಾಗಿಲ್ಲ; ಮೊನ್ನೆ ತಾನೇ ಹೇಳಲಿಲ್ಲವಾ ಕುಂತಿ ಕರ್ಣನ ಕಥೆನಾ'' ಕಪಾಳಕ್ಕೆ ಹೊಡೆದ ಹಾಗೆ ಹೇಳಿ ಒಳಗೆ ಹೋದಳು.

ಅನುಮಾನ ಸರಿಯಾಗಿ ಪರಿಹಾರವಾಗಲಿಲ್ಲ. ಸಂಜೆ ನನ್ನನ್ನು ''ಗ್ರ್ಯಾಂಪಾ Do you have any other son apart from my father & Doddappa ಅಂದ್ಲು. ""of course, without Ajji's knowing it?" ಅಂದ್ಲು.

ಆವಾಗ ಈ ಪಾಪಣ್ಣ ಹೇಳಿದ ಕಥೆಯ ವಿಚಾರ ತಿಳೀತು. ಇದಕ್ಕೆ ಅನ್ನೋದು ನಾವು ಸಂಸ್ಕೃತಿಯ - ಸಂಘರ್ಷ ಅಂತ.

---



ನಮ್ಮ ಹೊಸ ಯೋಜನೆ

**ನಿಮ್ಮ ಅಪರಂಜಿಯನ್ನು ನೀವೇ ರೂಪಿಸಿ**

ಅಪರಂಜಿಯ ತಿರುಳು ಈಗಾಗಲೇ ನಿಮಗೆ ಪರಿಚಯವಾಗಿದೆ. ಇದರಲ್ಲೇನಾದರೂ ಬದಲಾವಣೆ, ಹೊಸ ಅಂಕಣಗಳನ್ನು ಸೇರಿಸಬಹುದೆಂದು ನಿಮಗೆ ಅನ್ನಿಸಿದರೆ, ಖಂಡಿತಾ ಬರೆದು ತಿಳಿಸಿ. ಕಳೆದ ಒಂದೂವರೆ ದಶಕಗಳಿಂದ ನಡೆದುಬಂದ ಪರಂಪರೆ, ಈಗಿನ ಕಾಲಕ್ಕೆ ತಕ್ಕಂತೆ ಸ್ಪಂದಿಸಿ, ಅಪರಂಜಿ ಸದಾಕಾಲ ಜನಪ್ರಿಯವಾಗಬೇಕೆಂದು ನಮ್ಮೆಲ್ಲರ ಆಶೆ. ನಿಮ್ಮ ಮುಕ್ತ ಸಹಕಾರಕ್ಕೆ ಆದರದ ಸ್ವಾಗತ.

**- ಸಂಪಾದಕ**

# ಸೆಕ್ಸ್ ಅವಶ್ಯಕವೇ?

**- ಎಂ.ಎಸ್.ಕೆ. ಪ್ರಭು**

ಇದೆಲ್ಲಾ ಡಾಲಿ★ಯಿಂದ ಶುರುವಾಯಿತೆಂದು ಕಾಣುತ್ತದೆ. (ಸಾಲ್ವಡೋರ್ ಡಾಲಿ ಅಲ್ಲ)

ಆಗಸ್ಟ್ 1996ರಲ್ಲಿ ಅಮೆರಿಕಾದ ಒರೆಗಾನ್ ರೀಜನಲ್ ಪ್ರೈಮೇಟ್ ರಿಸರ್ಚ್ ಸೆಂಟರ್‌ನಲ್ಲಿ ಕ್ಲೋನಿಂಗ್ ವಿಧಾನದಿಂದ ಸೃಷ್ಟಿಸಿದ ಒಂದು ಜೊತೆ ರ್ಹಿಸಸ್ ಮಂಗಗಳ ಫೋಟೋ ಇತ್ತೀಚೆಗೆ ಪತ್ರಿಕೆಗಳಲ್ಲಿ ಬಂದದ್ದನ್ನು ನೀವೆಲ್ಲಾ ಕಂಡಿರಬಹುದು. ಮನುಷ್ಯ ಸಂತತಿಯ ಮೇಲೆ ಇಂತಹ ಕ್ಲೋನಿಂಗ್ ಸಂಶೋಧನಾ ಪ್ರಯೋಗಗಳನ್ನು ನಿಷೇಧಿಸಿ, ಇಂಥದಕ್ಕೆಲ್ಲಾ ಸರಕಾರದ ಹಣ ದೊರಕುವುದಿಲ್ಲ ಎಂದು ಅಧ್ಯಕ್ಷ ಕ್ಲಿಂಟನ್ ಎಚ್ಚರಿಕೆ ನೀಡಿದ್ದಾರೆ. ಮಂಗನವರೆಗೂ ಚೆನ್ನ. ಮುಂದಕ್ಕಲ್ಲ, ಎಂದಿರಬಹುದು ಅವರ ಎಣಿಕೆ. ಮಂಗನ ನಂತರದ ಸರದಿ ಮಾನವನದ್ದು ಎಂಬ ಡಾರ್ವಿನ್ ಪ್ರಣೀತ ವಿಕಾಸ ತತ್ತ್ವ ಅವರಿಗೆ ತಿಳಿದಿದೆ. ಅಮೆರಿಕದ ವಿದ್ಯಮಾನಗಳೇನೇ ಇರಲಿ, ಬೆಲ್ಜಿಯಂನ ಒಂದು ಫರ್ಟಿಲಿಟಿ ಕ್ಲಿನಿಕ್‌ನಲ್ಲಿ 'ಅಕಸ್ಮಾತ್' ಸೃಷ್ಟಿಯಾದ ಮಾನವ ಅವಳಿ ಜವಳಿ ಕ್ಲೋನ್ ವಿಷಯ, ಮಂಗಗಳ ಸುದ್ದಿಯ ನಂತರ ಪ್ರಕಟವಾಗಿ ಕೋಲಾಹಲವನ್ನೇ ಸೃಷ್ಟಿಸಿದೆ. ನೈತಿಕತೆಯ ಮಾತಂತೂ ಸರಿಯೇ ಸರಿ. ಲೈಂಗಿಕತೆಯ ಆಯಾಮವೂ ಕಮ್ಮಿ ಪ್ರಾಧಾನ್ಯತೆಯದೇನಲ್ಲ. ಮನುಷ್ಯ ಮತ್ತೆ ಮತ್ತೆ ಬಯಸುವ ಸುಖ, ಉನ್ಮಾದ, ರೋಮಾಂಚನ, ನಿರರ್ಥಕತೆಯ ಪ್ರಜ್ಞೆ ಹಲವಾರು ದಾರ್ಶನಿಕರು, ಸಂತರು, ಲೋಕೋದ್ಧಾರಕರು ಎಷ್ಟೇ ಎಚ್ಚರಿಕೆ ನೀಡಿದ್ದರೂ, ಡಾಕ್ಟರು ಎಚ್ಚರಿಕೆ ನೀಡುವವರೆಗೂ ಮನುಷ್ಯ ಅನುಭವಿಸಲೇಬೇಕೆಂದು ತವಕಿಸುವ ಸುಖ ಇದು. ಇದಕ್ಕೆ ಪ್ರತಿಫಲ ರೂಪವಾಗಿ ಪಡೆಯುವ ಮಕ್ಕಳ ಹದರಿಕೆಯೂ ಅವನಿಗಿಲ್ಲ (ಅದನ್ನು ನಿವಾರಿಸಲು ಉಪಾಯಾಂತರಗಳನ್ನು ಅವನು ಕಂಡುಹಿಡಿದುಕೊಂಡಿರಬಹುದು, ಅದು ಬೇರೆ ಮಾತು). ಫರ್ಟಿಲಿಟಿ ಕ್ಲಿನಿಕ್‌ನ ಮಾರ್ಟೈನ್‌ನಿಜ್ಸ್ ಎಂಬ ಸಂಶೋಧಕಿಯ ಹೇಳಿಕೆಯ ಪ್ರಕಾರ, ಈ ಥರದ ನಕಲು ಜೀವಗಳ ಸೃಷ್ಟಿ ಮಾಡಬೇಕೆಂದು ಯಾರಾದರೂ ಬೇಡಿಕೆ ಸಲ್ಲಿಸಿದರೆ ಅದೇನೂ ಅಸಾಧ್ಯವಲ್ಲವಾದರೂ ಗ್ಯಾರಂಟಿ ಮಾತ್ರ ಕೊಡಲು ಬರುವುದಿಲ್ಲ. ಒಮ್ಮೊಮ್ಮೆ ಪ್ರಯೋಗಗಳು ವಿಫಲವಾಗುತ್ತವೆಂಬುದನ್ನು ಗಮನದಲ್ಲಿಟ್ಟುಕೊಂಡರೆ, ನಿಜ್ಸ್‌ನ ಮಾತು ನಿಜವಿರಬೇಕು. ಈ ಪ್ರಯೋಗದಲ್ಲಿ, ಸಂಶೋಧಕರು ಏನು ಮಾಡಿದರೆಂದರೆ, ಅಕಸ್ಮಾತ್ ಫಲಿತ ಅಂಡವೊಂದನ್ನು, ಅಕಸ್ಮಾತ್ತಾಗಿಯೇ ತಾಯಿಯ ಗರ್ಭಾಶಯದಲ್ಲಿಟ್ಟು, ಒಂದು ಗಾಜಿನ ಕಡ್ಡಿಯಿಂದ ಅದನ್ನು ಅಕಸ್ಮಾತ್ತಾಗಿ ಉಜ್ಜಿದಾಗ, ಅದು ಅಕಸ್ಮಾತ್ತಾಗಿ ಎರಡಾಗಿ ಒಡೆದು, ಅಕಸ್ಮಾತ್ ನಕಲು ಸೃಷ್ಟಿಗೆ ಕಾರಣವಾಯಿತಂತೆ. ಯಾಕಾದರೂ ಅದನ್ನು ಅಕಸ್ಮಾತ್ತಾಗಿ ಉಜ್ಜಲು ಹೋಗಿದ್ದರೋ, ಹೇಗೆ ಉಜ್ಜಿದರೋ, ಉಜ್ಜಿದಾಗ ಅವರಿಗೆ ಅಕಸ್ಮಾತ್ತಾಗಿ ಎಂಥೆಂಥಾ ಅನುಭವಗಳಾದವೋ ಅದೆಲ್ಲಾ ಗೊತ್ತಿಲ್ಲ. ಅಂತೂ ಉಜ್ಜಿದರು, ಒಂದು ಜೀವ ಇದ್ದದ್ದು ಎರಡಾಯಿತು. ಅದು ನಿಜ.

'ನಿದ್ರಾಹಾರಭಯ ಮೈಥುನಂ ಸಮಾನಮೇತತ್ ಪಶುಭಿರ್ನರಾಣಾಂ' ಎಂಬ ಸನಾತನ ಹೇಳಿಕೆಯಲ್ಲಡಗಿರುವ, ನಾಲ್ಕು ಮೂಲ ಪ್ರವೃತ್ತಿಗಳಲ್ಲಿ ಒಂದನ್ನು, ಎಂದರೆ, ಮೈಥುನವನ್ನು ಹೊರತುಪಡಿಸಬೇಕಾದ ಸಂದರ್ಭ ಇಂದು ಒದಗಿದೆ (ಸಂತಾನಕ್ಕೋಸ್ಕರ ಮೈತುನ ಎಂಬ ತತ್ತ್ವ ಇಲ್ಲಿ ಅಧ್ಯಾಹಾರ). ಮನುಷ್ಯನನ್ನೂ ಇತರ ಪಶುಗಳನ್ನೂ ಒಂದೇ ತಕ್ಕಡಿಯಲ್ಲಿಟ್ಟು ತೂಗುವ ಪರಿಪಾಠಕ್ಕೆ ಆಂಶಿಕವಾಗಿ ಈಗ ಸುಧಾರಣೆಯಾಗಿದೆ ಎಂದು ಯಾರಾದರೂ ಸಮಾಧಾನ ಪಟ್ಟುಕೊಂಡಾರು. ಮನುಷ್ಯನನ್ನು ಪಾಶವೀ ಪ್ರವೃತ್ತಿಯಿಂದ ಮುಕ್ತಗೊಳಿಸುವ ಒಂದು ವಿಧಾನದ ಆವಿಷ್ಕಾರವಾಗಿದೆಯೆಂದೂ, ಇದು ಮನುಷ್ಯ ದೇವತ್ವದತ್ತ ಇಟ್ಟ ಒಂದು ಪ್ರಗತಿಪರ ಹೆಜ್ಜೆಯೆಂದೂ ಕ್ಲೋನಿಂಗ್ ತಂತ್ರಜ್ಞಾನವನ್ನು ಕೆಲವು ಶ್ಲಾಘಿಸಲೂಬಹುದು. ಇದೊಂದು 'ಇಕೋ ಫ್ರೆಂಡ್ಲಿ' ವಿಧಾನವೆಂದು ಯಾರಾದರೂ ಸಾಬೀತುಪಡಿಸಿಯಾರು ಮನುಷ್ಯನ ಜೀವನದಲ್ಲಿ ಕಾಮ ಪ್ರೇಮಗಳ ಸ್ಥಾನದ ಬಗ್ಗೆ ಫ್ರಾಯ್ಡ್‌ನ ನಂತರ ಮತ್ತೊಮ್ಮೆ ವಿಚಾರ ಕ್ರಾಂತಿಯಾಗಬಹುದು. ಕಾಮಪ್ರೇಮಗಳನ್ನು ತಮ್ಮ ಮೆಚ್ಚಿನ ವಸ್ತುವಾಗುಳ್ಳ ಸಾಹಿತ್ಯ ಮತ್ತು ಇತರ ಹಲವಾರು ಅಭಿಜಾತ ಕಲಾ ಪ್ರಕಾರಗಳ ಭವಿಷ್ಯವೇನೆಂದು ವಿಶ್ವವಿದ್ಯಾಲಯಗಳು, ಅಕಾಡೆಮಿಗಳು, ಸಂಘ ಸಂಸ್ಥೆಗಳು ಸೆಮಿನಾರುಗಳನ್ನು ಏರ್ಪಡಿಸಬಹುದು.

ಅದು ಹೇಗಾದರೂ ಆಗಲಿ, ಮದುವೆಯೆಂಬ ಸಾಮಾಜಿಕ, ಧಾರ್ಮಿಕ, ಭಾವನಾತ್ಮಕ ವ್ಯವಸ್ಥೆಯ ಮೇಲೆ ಕ್ಲೋನಿಂಗ್ ತಂತ್ರಜ್ಞಾನ ಎಂತಹ ಪ್ರಚಂಡ ಪ್ರಭಾವ ಬೀರಬಹುದು ಊಹಿಸಿಕೊಳ್ಳಿ. 'ಪ್ರಜಾಯೈ ಗೃಹ ಮೇಧಿನಾಂ' ಎಂಬ ಸೂತ್ರಕ್ಕನುಗುಣವಾಗಿ ಸೂರ್ಯವಂಶದ ರಘು, ದಿಲೀಪ, ದಶರಥ, ರಾಮ ಮುಂತಾದ ಪೂರ್ವ ಯುಗದ ರಾಜರು ನಂಬಿದ್ದರಂತೆ. ಬಹುತೇಕ ಪ್ರಪಂಚದ ಎಲ್ಲಾ ಜನಾಂಗಗಳಲ್ಲೂ ಸಂತತಿ ಸಾತತ್ಯವೇ ಮದುವೆಯ ಮೂಲ ಉದ್ದೇಶ. ಆದರೆ ಸಮಾಜದಲ್ಲಿ ಏನೇನೋ ಬದಲಾವಣೆಗಳಾಗಿ, 'ಸೆಕ್ಸ್'ನ ಜೈವಿಕ ಅವಶ್ಯಕತೆ, ಅದನ್ನು ಪೂರೈಸುವ ಕ್ರಿಯೆಯಿಂದ ದೊರಕುವ ಸುಖ, ರಿಲೀಫ್‌ಗಳು ಪ್ರಾಧಾನ್ಯತೆ ಪಡೆದು ಸೆಕ್ಸ್ ವರ್ಕರ್ಸ್ ಎಂಬ ವಿಶಿಷ್ಟ ವರ್ಗವೇ ಅಸ್ತಿತ್ವಕ್ಕೆ ಬರಲು ಕಾರಣವಾಗಿರಬಹುದು. ಇಷ್ಟಾಗಿ, ಸೆಕ್ಸ್ ಎಂದರೇನು? ಅದರ ಭೌತಿಕ, ಜೈವಿಕ ಲಕ್ಷಣಗಳೇನು? ಇದು ಸಂತಾನೋತ್ಪತ್ತಿಗೆ ನಿಜವಾಗಲೂ ಅವಶ್ಯಕವೇ? ಜೀವಿಗಳ ಲಕ್ಷಣ ಹೇಳುವಾಗ ವಿಜ್ಞಾನಿಗಳು, ತನ್ನಂತೆಯೇ ಇರುವ ಜೀವಿಗಳನ್ನು ಸೃಷ್ಟಿಸಬಲ್ಲ ಶಕ್ತಿಯುಳ್ಳದ್ದು ಎಂದು ಗುರುತಿಸಿದ್ದಾರೆ. ಪ್ರಜನನ ಪ್ರಕ್ರಿಯೆ ಅತ್ಯಂತ ಸಂಕೀರ್ಣವೂ ಮೂಲಭೂತ ಪ್ರವೃತ್ತಿಯದೂ ಆಗಿದ್ದರೂ ಅದನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗಿಲ್ಲ ಎಂದು ಹ್ಯಾವ್‌ಲಾಕ್ ಎಲ್ಲಿಸ್ ಹೇಳಿದ್ದಾನೆ. ಪ್ರಜನನ ಕ್ರಿಯೆಗೂ ಸೆಕ್ಸ್‌ಗೂ ಅನಿವಾರ್ಯವಾದ ಸಂಬಂಧವೇನೂ ಇಲ್ಲ ಎಂದು ಹೇಳುವ ಜೀವಶಾಸ್ತ್ರದ ಬಾಲ ಹಿಡಿದು ಹೋದರೆ, ನಾವು XX, XY ಕ್ರೋಮೋಸೋಮ್‌ಗಳ, ಅಂಡಾಣು, ಡಿಂಭಾಣು, ಜೈಗೋಟ್‌ಗಳ ಪ್ರಪಂಚದಲ್ಲಿ ದಾರಿ ತಪ್ಪಿಸಿಕೊಳ್ಳುವ ಸಂಭವವೇ ಹೆಚ್ಚು. ಇಲ್ಲಿ ಸೆಕ್ಸ್ ಎಂಬುದು ನಿಮಿತ್ತ ಮಾತ್ರ ತಂತ್ರ

ಎಂದೂ ಬೆಲ್ಜಿಯಂನ ಫರ್ಟಿಲಿಟಿ ಕ್ಲಿನಿಕ್‌ನ ವಿಜ್ಞಾನಿ ನಿಜ್ಸ್ ಕಂಡುಹಿಡಿದ ಉಜ್ಜುವ ತಂತ್ರಕ್ಕೂ ಇದಕ್ಕೂ ಮೂಲಭೂತವಾಗಿ ತಾತ್ತ್ವಿಕವಾಗಿ ವ್ಯತ್ಯಾಸವಿಲ್ಲವೆಂದೂ ತಿಳಿದುಕೊಂಡರೆ ಸಾಕು.

ಅಮೆರಿಕದ ಕಾದಂಬರಿಕಾರ ಕರ್ಟ್‌ವಾನೆಗಟ್ (ಜೂನಿಯರ್) ತನ್ನ 'ಬ್ರೇಕ್‌ಫಾಸ್ಟ್ ಆಫ್ ದಿ ಚಾಂಪಿಯನ್ಸ್' ಎಂಬ ಹೆಸರಿನ ಕಾದಂಬರಿಯಲ್ಲಿ ಕಲ್ಪಿಸಿರುವ ಹೊಸ ರೀತಿಯ ಉಜ್ಜುವ ತಂತ್ರ ಇಲ್ಲಿ ಸಹಜವಾಗಿ ನೆನಪಾಗುತ್ತದೆ ಕಾದಂಬರಿಯ ನಾಯಕ ಒಂದು ದಿನ ಲಿಫ್ಟ್‌ನಲ್ಲಿ ನಿಂತು ತನ್ನ ಅಪಾರ್ಟ್‌ಮೆಂಟಿಗೆ ಹೋಗುತ್ತಿರುವಾಗ ಒಂದು ಸಲ ಬೆರಳು ಚೀಪುತ್ತಾನೆ ಒಂದು ಮಗು ಹುಟ್ಟುತ್ತದೆ. 'ಅಕಸ್ಮಾತ್' ಆದ ಈ ಸಂಶೋಧನೆಯಿಂದ ಚಕಿತನಾದ (ಪುಳಕಗೊಂಡ, ರೋಮಾಂಚಿತನಾದ) ಅವನು ವೈಜ್ಞಾನಿಕ ಮನೋಭಾವದಿಂದ ಪರೀಕ್ಷಿಸಲು ಮತ್ತೊಮ್ಮೆ ಬೆರಳು ಚೀಪುತ್ತಾನೆ. ಮತ್ತೊಂದು ಮಗು. ಮತ್ತೆ ಮತ್ತೆ ಚೀಪುತ್ತಾನೆ. ಮತ್ತೆ ಮತ್ತೆ ಅದೇ ಫಲಿತಾಂಶ. ಅವನು ಬೆರಳು ಚೀಪುವ ಚಟಕ್ಕೆ ಬಲಿಯಾಗುತ್ತಾನೆ. ಕಥೆಯ ನೀತಿಯನ್ನು ನಿಮ್ಮ ಊಹೆಗೆ ಬಿಡಲಾಗಿದೆ. ಚೀಪುವುದೂ ಒಂದು ಬಗೆಯ ಉಜ್ಜುವಿಕೆಯೇ. ಹೀಗೆ ಬಾಯಲ್ಲಿ ಬೆರಳಿಟ್ಟು ಚೀಪುವ ಉಜ್ಜುವ ಆಟ ಅವನಿಗೆ ಅದೆಷ್ಟು ಆಪ್ಯಾಯಮಾನವಾಗಿ ತೋರಿತೋ. ಕೆಲವರು ಬ್ಯಾಂಕ್ ಕ್ರೆಡಿಟ್ ಕಾರ್ಡುಗಳನ್ನು ಉಜ್ಜಿಸಿ ಬೇಕು ಬೇಡಾದ ಕನ್ಸ್ಯೂಮರ್ ಗುಡ್ಸ್ ಕೊಳ್ಳುವುದಿಲ್ಲವೇ? ಹಾಗೆ. ಇಲ್ಲಿ ಅಂಗಡಿಯವನು ಕಾರ್ಡನ್ನು (ನಮ್ಮ ಪರವಾಗಿ) ಎಷ್ಟು ರಭಸವಾಗಿ ಉಜ್ಜುತ್ತಾನೆಂದರೆ, ಅದೆಲ್ಲಿ ಮುರಿದು ಹೋಗುತ್ತದೋ, ಆ ಸಾಧನವಿಲ್ಲದೆ ನಾವು ಶಕ್ತಿಹೀನರಾಗಿ ಎಷ್ಟು ಪರದಾಡಬೇಕಾಗುತ್ತದೋ ಎಂದು ಭಯ ಪಡುವಂತಾಗುತ್ತದೆ. (ಬೆಟ್ಟು ಚೀಪುವ ಮಕ್ಕಳು ಮಾನವನಲ್ಲಿ ಮೂಲಭೂತವಾಗಿ ಅಂತರ್ಗತವಾಗಿರುವ Primacy of the phallus ಸಿದ್ಧಾಂತವನ್ನೇ ಸಂಕೇತಿಸುತ್ತಾರೆಂದು ಮನೋವಿಜ್ಞಾನಿಗಳ ಅಭಿಮತ. ಇದೆಲ್ಲಾ ತಿಳಿಯದಿದ್ದರೂ ಮಕ್ಕಳು ಬೆಟ್ಟು ಚೀಪುವುದನ್ನು ತಂದೆ ತಾಯಿಗಳು ದುಶ್ಚಟವೆಂದು ಪರಿಗಣಿಸಿ ಬಲವಂತವಾಗಿ ಬಿಡಿಸಲು ಹೆಣಗುತ್ತಾರೆ. ಬಹುಶಃ ಸಾಮಾನ್ಯ ಆರೋಗ್ಯ ದೃಷ್ಟಿಯಿಂದಿರಬೇಕು).

ಈಗ ಅಸಲಿ ಪ್ರಶ್ನೆಯನ್ನು ಎತ್ತಬಹುದು: Is sex necessary? ದಶಕಗಳಷ್ಟು ಹಿಂದೆಯೇ ಈ ಪ್ರಶ್ನೆಯನ್ನು ಸಮರ್ಥವಾಗಿ ಎತ್ತಿದ ಜೇಮ್ಸ್ ಥರ್ಬರ್ ಮತ್ತು ಈ. ಬಿ. ವೈಟ್, ಈಸ್ ಸೆಕ್ಸ್ ನೆಸೆಸರಿ, ಎಂದು ವೈಜ್ಞಾನಿಕ ಉತ್ತರವನ್ನು ಕೊಟ್ಟು ಉಪಕಸಿದ್ದಾರೆನ್ನಿ.

---

*ರ್ಥಿಸಸ್‌ಮಂಗಗಳ ಕ್ಲೋನಿಂಗ್ ಸಾಧ್ಯವಾಗುವುದಕ್ಕೂ ಮೊದಲು, ಸ್ಕಾಟ್‌ಲೆಂಡಿನ ರೋಸ್ಲಿನ್ ಇನ್‌ಸ್ಟಿಟ್ಯೂಟ್‌ನಲ್ಲಿ, ಆಯಾನ್ ವಿಲ್ಮಟ್ ಎಂಬ ವಿಜ್ಞಾನಿಯ ನೇತೃತ್ವದಲ್ಲಿ ಒಂದು ಕುರಿಮರಿಯ ನಕಲು ಸೃಷ್ಟಿಯಾಯಿತು. ಅದಕ್ಕೆ 'ಡಾಲಿ' ಎಂದು ನಾಮಕರಣ ಮಾಡಲಾಯಿತು.*

# ನೀವು ನೋಡಲಾಗದ ಪತ್ರಿಕಾ ಶೀರ್ಷಿಕೆಗಳು

ಹೆಚ್ಚು ಮಕ್ಕಳನ್ನು ಹಡೆಯಲು ಪ್ರೋತ್ಸಾಹ ವೇತನ

ಭಾರತಕ್ಕೆ ಹದಿನೆಂಟು ಒಲಂಪಿಕ್ ಚಿನ್ನ-ಬೆಳ್ಳಿಯ ಲೆಕ್ಕ ಸಿಕ್ಕಿಲ್ಲ

ರಾಜ್ಯಶಾಸ್ತ್ರದ ಪರಿಚಯವಿಲ್ಲದೇ ಮಂತ್ರಿಯಾಗಲಾರೆ - ಹೇಳಿಕೆ

ಮೀಸಲಾತಿ ಇಲ್ಲ - ಪ್ರತಿಭೆಗೆ ಮಾತ್ರ ಅವಕಾಶ

ಚುನಾಯಿತ ಶಾಸಕರಿಗೆ ವಿತ್ತಶಾಸ್ತ್ರದಲ್ಲಿ ರಾತ್ರಿ ಕಾಲೇಜು

ಪಾಟ್‌ಹೋಲ್‌ನಲ್ಲಿ ಜಖಂ ಆದ ಕಾರಿಗೆ, ಕಾರ್ಪೊರೇಷನ್‌ನಿಂದ ತಪ್ಪುದಂಡ.
- ಸರ್ಕಾರದ ಹಣ ನನಗೆ ಬೇಡ: ಕಾರ್ ಚಾಲಕ

NORTH - WEST

INDIA'S MOST RADICAL RANGE OF ELECTRICAL DEVICES.



MINIATURE CIRCUIT BREAKERS WITH TECHNICAL KNOW-HOW FROM VYNCKIER, BELGIUM
SINGLE PHASE MOTOR STARTERS
PALM SWITCHES
MODULAR SWITCHES, SOCKETS, PLATES AND REGULATORS



NORTH - WEST

AUTHORISED DEALERS:
SESHADRI & COMPANY
ELECTRICAL CONSULTANTS & CONSTRUCTION ENGINEERS
15/2. XI MAIN ROAD. MALLESHWARAM, BANGALORE-560 003.
PHONE: 341764, 341997, 348547

# ಲಂಚೋಪಾಖ್ಯಾನ

-ಕುಮುದಾ ಪುರುಷೋತ್ತಮ್

''ಹೇ ಮಾಧವ, ಈಗ ಎಲ್ಲೆಲ್ಲೂ ಲಂಚ ಲಂಚ ಎಂಬುವುದೇ ಜಪಿತವಾಗುತ್ತಿದೆ ಪತ್ರಿಕೆಗಳಲ್ಲಿ, ಟಿ.ವಿ. ಯ ಪ್ರೈವೇಟ್ ಛಾನಲ್‌ಗಳಲ್ಲಿ, ಸಿ.ಬಿ.ಐ. ವಲಯದಲ್ಲಿ, ಉಚ್ಚನ್ಯಾಯಾಲಯಗಳಲ್ಲಿ ಅದನ್ನು ಛಿದ್ರ ಛಿದ್ರ ಮಾಡಿ ಚರ್ಚಿಸಲಾಗುತ್ತಿದೆ. ಲಂಚ ವೆಂದರೇನು? ಅದರ ಉಗಮವೆಲ್ಲಿ? ಅದಕ್ಕೆ ಅಂತ್ಯ ಉಂಟೇ? ಅದು ಎಲ್ಲಿ ಯಾರಿಗಾಗಿ ಜನ್ಮತಾಳುತ್ತದೆ? ಅದರ ಸ್ವರೂಪ ವೆಂತಹುದು?'' ಹೀಗೆಲ್ಲಾ ಪ್ರಶ್ನೆಮಾಡಿದ್ದು ಅರ್ಜುನ. ಗೀತೋಪದೇಶ ವಾದಂದಿನಿಂದ ಕೃಷ್ಣ ಎದುರಾದೊಡನೆ ಬಿಲ್ಲು ಬಾಣ ಕೆಳಗೆಸೆದು ಕೈಕಾಲು ಕಂಪಿಸುತ್ತಾ ಗದ್ಗದ ಸ್ವರದಲ್ಲಿ ತನ್ನ ಸಂದೇಹ ಮುಂದಿಟ್ಟು ಬಿಡುವ ದುರಭ್ಯಾಸ ಅವನಿಗೆ ಬಂದು ಬಿಟ್ಟಿತ್ತು. ಪಾರ್ಥಸಾರಥಿ ಕುರುಕ್ಷೇತ್ರದಲ್ಲಿ ಮಾಡಿದಂತೆಯೇ ರಥದ ಮುಂಭಾಗದಲ್ಲಿ ಕುಳಿತು ಉವಾಚಿಸಿದ.

''ವತ್ಸ, ಪಾರ್ಥ, ಸೃಷ್ಟಿಕಾಲದ ಹಿರಣ್ಯಗರ್ಭದಲ್ಲಿ ಅಣುರೂಪದಲ್ಲಿದ್ದ ಲಂಚದ ಕಾಲಕ್ರಮದಲ್ಲಿ ಸ್ವಲ್ಪ ಸ್ವಲ್ಪವಾಗಿ ಬೆಳೆಯುತ್ತಾ ಮೂರುಲೋಕ ವ್ಯಾಪಿಸಿ ಇನ್ನೂ ಬೆಳೆಯುತ್ತಲೇ ಇದೆ. ಅದು ನನ್ನಂತೆ ಸರ್ವವ್ಯಾಪಿ. ಅದಕ್ಕೆ ಹುಟ್ಟು ಸಾವಿಲ್ಲ. ಆತ್ಮದಂತೆ ಅಮರ. ಎಲ್ಲ ಕಾಲ ದೇಶಕ್ಕೆ ಅನ್ವಯವಾಗುವಂತಹುದಾದರು ಭರತ ವರ್ಷದಲ್ಲಿ ಅದರ ಆರಾಧಕರು ಅತ್ಯಧಿಕ ಸಂಖ್ಯೆಯಲ್ಲಿದ್ದು ಅದಿಲ್ಲಿ ತಾಂಡವ ನೃತ್ಯವಾಡುತ್ತಿದೆ. ಹೆಚ್ಚೇಕೆ ಅದರ ವಿಧ್ವಂಸಕ್ಕಾಗಿ ಇರುವ ಸಂಸ್ಥೆಗಳನ್ನು ಕಂಡೇ 'ಬೇಲಿಯೇ ಹೊಲವ ಮೇಯ್ದಂತೆ' ಎಂಬ ನಾಣ್ನುಡಿ ಹುಟ್ಟಿ ಭಾರತೀಯ ಭಾಷೆಗಳಲ್ಲೊಂದಾದ ಕನ್ನಡ ಭಾಷೆ ಶ್ರೀಮಂತ ಗೊಂಡಿದೆ.''

ಪಾರ್ಥ: ಹೇ ಮಧುಸೂಧನ ಅದರ ಸ್ವರೂಪ ದರ್ಶನ ಕಿಂಚಿತ್ ಮಾಡಿಸು. ಅದರ ಸ್ವರೂಪ ತೋರುವುದು ಬಾಯಿಮಾತೇ? ವಿಶ್ವರೂಪ ತೋರಿದಾಗಲೂ ಕೃಷ್ಣ ಇಷ್ಟು ತಿಣಕಾಡಿರಲಿಲ್ಲ. ಪಾಠ ಮಾಡಲು ಬಾರದ ಅಧ್ಯಾಪಕ ಟೈಪುಹೊಡೆದ ನೋಟ್ಸ್‌ನ್ನಿತ್ತು ವಿದ್ಯಾರ್ಥಿಗಳೇ ಓದಿಕೊಳ್ಳಲು ಹೇಳುವಂತೆ ಕೃಷ್ಣನೂ ಹಲವಾರು ಪತ್ರಿಕೆಗಳಿಂದ ಹರಿದಿಟ್ಟ ಹಗರಣಗಳ ಪ್ರಕರಣಗಳನ್ನು ಓದಿಕೊಳ್ಳುವಂತೆ ಹೇಳಿದ. ಅದೆಲ್ಲಾ ಕ್ಷಣ ಮಾತ್ರದಲ್ಲಿ ಓದಿದ ಅರ್ಜುನನ ಮುಖ ಕ್ರೋಧದಿಂದ ಕೆಂಪಾಯಿತು. ಅದೇ ಸ್ಥಿತಿಯಲ್ಲಿ ತರಾಟೆಗೆ ತೆಗೆದು ಕೊಂಡ.

ಪಾರ್ಥ: ಹೇ ವಾಸುದೇವ ಓಟಿಗಾಗಿ ಬಂದಾಗ ನೀಡಿದ ಆಶ್ವಾಸನೆಗಳೆಲ್ಲಾ ಅಧಿಕಾರ ಬಂದಾಗ ಮರೆಯುವ ರಾಜಕಾರಣಿಯೇ ನೀನಾಗಿದ್ದಿ. 'ಯದಾ ಯದಾ ಹಿ ..... ತದಾತ್ಮಾನಂ ಸೃಜಾಮ್ಯಹಂ' ಎಂದು ಹನ್ನೊಂದು+ಏಳು ಅಕ್ಷೋಹಿಣಿಯ ಮುಂದೆ ನೀನಾಡಿದ್ದೇನು ಈಗ ಮಾಡುತ್ತಿರುವುದೇನು? ಲಂಚವೆಂಬ ಅಧರ್ಮವನ್ನು

ಯೊಸಕಿಹಾಕಲಿಕ್ಕೆ ನಿನಗೇನಡ್ಡಿ?

ಕೃಷ್ಣನ ಹಸನ್ಮುಖ ಹಾಲಿನಂತೆ ಚೆಲ್ಲಾಡಿತು. ''ಕೌಂತೇಯ, ತಥಾಸ್ತು, ನಿನ್ನಿಚ್ಛೆಯಂತೆ ಲಂಚ ನಿರ್ಮೂಲ ಮಾಡಿದ್ದೇನೆ. ಬೇಕಿದ್ದರೆ ಭರತ ವರ್ಷದಲ್ಲಿ ಅಲೆದಾಡಿ ತನಿಖೆ ನಡೆಸು.'' ಕೃಷ್ಣ ಅಂತರ್ಧಾನವಾದೊಡನೆ ಅರ್ಜುನ ಭುವಿಗಿಳಿದ.

★★★

ಇಂಜನಿಯರಿಂಗ್ ಡಿಪ್ಲೊಮಾ ಪಡೆದು ಮೂರು ವರ್ಷಗಳಾಗಿದ್ದರೂ ರಾಮಕೃಷ್ಣ ನಿರುದ್ಯೋಗಿ. ಕೆಲಸಕ್ಕೆ ಅರ್ಜಿ ಹಾಕಿ ಕಾಯುತ್ತಾ ಕಾಯುತ್ತಾ ಅದರಲ್ಲೇ ಅರ್ಧ ತಲೆ ನುಣ್ಣಗಾಗಿ ಇನ್ನರ್ಧ ಬೆಳ್ಳಿಯಾಗಿತ್ತು. ಆ ಬೆಳ್ಳಿಯನ್ನು ಕಪ್ಪಾಗಿಸುವ ಸಾಧನ ಖರೀದಿಸುವುದಕ್ಕೂ ತಾಕತ್ತಿಲ್ಲದ ಪರಿಶೋಚನೀಯ ಪ್ರಾಣಿ. ಆಗ ಬಂದದ್ದು ಗಜಿಯಾ ಬಾಗ್‌ನಿಂದ ಸಂದರ್ಶನಕ್ಕೆಂದು ಆಶಾವಾದ ಹೊತ್ತು ಬಂದ ಪತ್ರ. ಹದಿನೈದು ದಿನಕ್ಕೆ ಮುಂಚೆ ರವಾನೆ ಯಾಗಿದ್ದ ಪತ್ರ ಅಂಚೆ ಇಲಾಖೆಯ ಅತಿ ದಕ್ಷತೆಯಿಂದಾಗಿ ಸಂದರ್ಶನಕ್ಕೆ ಕೇವಲ ಎರಡು ದಿನಕ್ಕೆ ಮುಂಚೆ ತಲುಪಿತ್ತು. ಕೈಗೆ ಬಂದದ್ದು ಬಾಯಿಗಿದಲ್ಲದ ಪರಿಸ್ಥಿತಿ. ಧೃತಿಗೆಡದೆ ಅಲ್ಲಲ್ಲಿ ಕಡ ತಂದು ಹೇಗೋ ಟಿಕೆಟ್ ದೊರಕಿಸಿ ರಿಸರ್ವೇಶನ್ ಇಲ್ಲದೆಯೇ ಡಬ್ಬಿ ಹತ್ತಿದ. ಕಪ್ಪು ಕೋಟಿನವ ತನಿಖೆ ಮಾಡ ಬಂದಾಗ ತನ್ನ ಪರಿಸ್ಥಿತಿ ವಿವರಿಸಿ ಕೈಕಾಲು ಹಿಡಿದರೂ ಆತನ ಹೃದಯ ಬರ್ಫಿನಂತೆ ಶೀತಲವಾಗಿಯೇ ಇತ್ತು. ಅಭ್ಯಾಸ ಬಲ ಬಿಡಲಾರದ ರಾಮಕೃಷ್ಣ ಜೇಬಿನಿಂದ ಐವತ್ತರ ನೋಟನ್ನು ಮುಂದೆ ಹಿಡಿದ. ಕಪ್ಪುಕೋಟಿನವ ಜ್ವಾಲೆ ಕಕ್ಕಿದ. ಜೇಬಿನಿಂದ ಕೃಷ್ಣನ ಪಟ ತೆಗೆದು ತೋರಿಸಿದ. ಯುವ ಗಾಂಧಿಯನ್ನು ದಕ್ಷಿಣ ಆಫ್ರಿಕಾದಲ್ಲಿ ರೈಲಿನಿಂದ ಪ್ಲಾಟ್‌ಫಾರ್ಮಿಗೆ ತಳ್ಳಿದಂತೆ ಇವನನ್ನೂ ಓಡ ಆರಂಭಿಸಿದ್ದ ರೈಲಿನಿಂದ ಕೆಳಗೆ ತಳ್ಳಿದ. ಸಿಗಬೇಕಾಗಿದ್ದ ಉದ್ಯೋಗವೂ ತಪ್ಪಿ ಕೈಕಾಲನ್ನೂ ಮುರಿದು ಕೊಂಡ ರಾಮಕೃಷ್ಣ ಲಂಚ ನಿರ್ಮೂಲನಕ್ಕೆ ಕಾರಣವಾಗಿದ್ದ ಮಹಾನುಭಾವನನ್ನು ಮನಸಾರೆ ಶಪಿಸಿದ. ತಗ್ಗಿಸಿದ ತಲೆ ಮೇಲೆತ್ತದೆ ಅರ್ಜುನ ಮುಂದಕ್ಕೆ ನಡೆದ.

ವೆಂಕಟ ನರಸಯ್ಯ ಘನ ಸರ್ಕಾರದ ಅತಿ ಕಿರಿಯ ಅಧಿಕಾರಿ. ಹತ್ತು ವರ್ಷಕ್ಕೂಹೆಚ್ಚು ಸರ್ವೀಸಾದವ. ಭ್ರಷ್ಟಚಾರ ನಿರ್ಮೂಲನಕ್ಕೆ ಮುಂಚೆಯೇ ಸಾಕಷ್ಟು ಮೇದು ಅಜೀರ್ಣವಾಗಿದ್ದವನು. ಕೋರಮಂಗಲದಲ್ಲಿ ಅರಮನೆ ನಾಚಿಸುವ ಭವ್ಯ ಬಂಗಲೆ ಕಟ್ಟಿಸಿದ. ಮನೆ ಕಾಯಲು ಘೂರ್ಕ. ಅವನನ್ನು ಕಾಯಲು ಆಲ್‌ಸೇಷನ್ ನಾಯಿ. ತನ್ನ ವರ್ಚಸ್ಸಿನಿಂದ ಹೆಂಡತಿಗೆ ಟ್ರ್ಯಾವಲ್ ಏಜೆನ್ಸಿಯಲ್ಲಿ ಕೆಲಸ ಕೊಡಿಸಿದ. ಮಕ್ಕಳಿಗೆ ಪ್ರತಿಷ್ಠಿತ ಶಾಲೆಯಲ್ಲಿ ಪ್ರವೇಶ. ಪೋರ್ಟಿಕೋದಲ್ಲಿ ಒಂದು ಮಾರುತಿ ಎಸ್‌ಟೀಮ್ ಜೊತೆಗೆ ಎರಡು ಸ್ಕೂಟರು. ಸಿಬ್ಬಂದಿಯವರಾಗಿ ಆಳುಕಾಳು, ಅಡಿಗೆಯವ ಇತ್ಯಾದಿ. ಇದ್ದಕ್ಕಿದ್ದಂತೆ ಕೃಷ್ಣಪರಮಾತ್ಮನ ಆದೇಶ ಜಾರಿಗೆ ಬಂದು ಬಿಡ್ತು. ಸಂಸಾರ ನೌಕೆಯಲ್ಲಿ ರಂಧ್ರವಾಗಿ ಮುಳುಗುವ ಸ್ಥಿತಿ ಬಂತು. ಅವನಿಗೆ ಬರುತ್ತಿದ್ದ ಸಂಬಳ ಬಂಗಲೆಯ ಲೈಟ್ ಬಿಲ್ಲಿಗೆ ಸಾಲುತ್ತಿರಲಿಲ್ಲ. ಘೂರ್ಕನ ಉಚ್ಚಾಟನೆ, ನಾಯಿ

ಪ್ರಾಣಿದಯಾ ಸಂಘಕ್ಕೆ ರವಾನೆಯಾಯ್ತು. ಇತರೇ ಸಿಬ್ಬಂದಿ ಕಛೇರಿ ಕೆಲಸಕ್ಕೆ ವಾಪಸ್ಸಾದರು. ಕಾರು, ಸ್ಕೂಟರ್ ಸಾಕಲಾರದೆ ಮಾರಹೋದರೆ ಕೊಳ್ಳುವವರೇ ಇಲ್ಲದ ಪರಿಸ್ಥಿತಿ. (ಎಲ್ಲರಿಗೂ ಗಿಂಬಳದ ಅಭಾವ!) ಮಕ್ಕಳ ಸರ್ಕಾರಿ ಶಾಲೆಗೆ ಸೇರ್ಪಡೆ. ಒಪ್ಪತ್ತಿನ ಊಟ, ರಾತ್ರಿಗೆ ಹೊಟ್ಟೆಯ ಮೇಲೆ ಒದ್ದೆ ಬಟ್ಟೆ ಅದೂ ಹೆಂಡತಿ ಟ್ರ್ಯಾವೆಲ್ ಏಜೆನ್ಸಿಯಿಂದ ತರುತ್ತಿದ್ದ ವರಮಾನದ ದಯವಷ್ಟೆ. ಈ ಕುಟುಂಬದ ದೀನ ಸ್ಥಿತಿ ಕಂಡು ಅರ್ಜುನ ತಮ್ಮ ಹನ್ನೆರಡು ವರ್ಷ ವನವಾಸದ ದಿವಸಗಳನ್ನು ನೆನೆದು ಕಣ್ಣೊರೆಸಿಕೊಂಡು ಮುಂದಕ್ಕೆ ನಡೆದ.

ಅದೊಂದು ಪ್ರಜಾತಂತ್ರ. ಆಡಳಿತ ನಡೆಸುವವರನ್ನು ಚುನಾಯಿಸಲು ಚುನಾವಣೆ ಘೋಷಿಸಲಾಗಿತ್ತು. ಉಮೇದುದಾರರು ಅರ್ಜಿಕೊಡಲು ಕೊನೇದಿನವನ್ನು ಮೂರುಬಾರಿ ಮುಂದೂಡಿದ್ದರೂ ಒಂದು ನರಪಿಳ್ಳೆಯೂ ಕಛೇರಿಯ ಮುಂದೆ ಸುಳಿಯದೆ ಇದಕ್ಕಾಗೆ ನಿಯಕ್ತರಾಗಿದ್ದ ಅಧಿಕಾರಿಗಳು ನೊಣ ಸಿಕ್ಕರೆ ನೊಣ, ಇಲ್ಲದಿದ್ದರೆ ಸೊಳ್ಳೆ ಹೊಡೆಯುತ್ತಾ ಸರ್ಕಾರಿ ಸಂಬಳ ತೆಗೆದು ಕೊಳ್ಳುತ್ತಿದ್ದರು. ಆಳುವವರೇ ಸಿಗದಿದ್ದರೆ ಆಡಳಿತದ ಗತಿ? ಅರಾಜಕತೆ ಉಂಟಾಗಿ ಬಿಡುವುದೇನೋ ಎಂಬ ಭಯ ಅರ್ಜುನನಿಗೆ. ಹಿಂದೆಲ್ಲಾ ಎಷ್ಟೋಬಾರಿ ಚುನಾಯಿತರಾಗಿ ಅಧಿಕಾರ ಹೊಂದಿ, ಕಳೆದು, ಪಕ್ಷಾಂತರ ಮಾಡಿ ಮತ್ತೆ ಗದ್ದುಗೆ ಏರಿ ಅನುಭವಿಸಿದ್ದ ಹಳೇ ಹುಲಿಗಳನ್ನು ಭೇಟಿ ಮಾಡಿ ಚುನಾವಣೆಗೆ ನಿಲ್ಲುವಂತೆ ತಾನೇ ಮನವಿ ಮಾಡಿಕೊಂಡ.

''ಚುನಾವಣೆಗೆ ನಿಲ್ಲೋಂತೀರಾ? ಯಾಕೆ, ಮಣ್ಣು ತಿನ್ನೋಕ್ಕಾ? ಠೇವಣಿಗೆ ಇಟ್ಟಷ್ಟು ಹಣಾನೂ ತಿರುಗಿ ಸಂಪಾದಿಸೋ ಗ್ಯಾರಂಟಿ ಇಲ್ದಿದ್ದ ಮೇಲೆ ಯಾರಗ್ರಿ ಬೇಕು ಈ ನಾಯಕ ಅನ್ನೋ ಪದವಿ? ಅಧಿಕಾರ ನೀವೆ ಇಟ್ಕೊಳ್ಳಿ ಇದ್ರ ಬದ್ಲು ಬ್ಯಾಂಕೋ, ಬಂಕೊ ದರೋಡೆ ಮಾಡೋದು ಎಷ್ಟೋ ಮೇಲು''

''ಜನ ಸೇವೆಗಾಗಿ ಅಂತಂದ್ರಾ? ಹ್ಹ.... ಹ್ಹ ... ಯಾರ ಕಣ್ಣಗ್ರೀ ಮಣ್ಣೆರಚ್ತೀರಾ? ಇಷ್ಟು ವರ್ಷ ಮಾಡಿದ್ದು ಅದೇಯ. ಇನ್ನು ಸಾಕು ಬಿಡ್ರಿ. ಎಮ್ ಎಲ್ ಏ ಸಂಬ್ಳ ನನ್ನ ಬೀಡಿ ಖರ್ಚಿಗೆ ಸಾಲ್ದು. ಸೇವೆನಂತೆ ಸೇವೆ. ಎದ್ಹೋಗ್ರಿ. ಸುಂಕೆ ಸೇವೆ ಮಾಡಾಕ್ಕೆ ನಂಗೇನು ತಲೆ ಕೆಟ್ಟೈತಾ?'' ರೇಗಿದ ಪ್ರಾಣಿ ಅರ್ಜುನನನ್ನು ಓಡಿಸಿಕೊಂಡು ಹೋಯ್ತು.

ಅವನಿಂದ ತಪ್ಪಿಸಿಕೊಂಡು ಬಂದ ಅರ್ಜುನ ಕೃಷ್ಣನ ಪದತಲದಲ್ಲಿದ್ದ.

ಅರ್ಜುನ: ಹೇ ಕೃಷ್ಣ ನಿನ್ನ ಲಂಚ ನಿರ್ಮೂಲ ಸಾಕು ಮಾಡು ಪ್ರಭೋ. ಅದರ ಸವಲತ್ತಿಲ್ದೆ ನಾಡಿನ ಜನ ಪಡುತ್ತಿರೋ ಪಾಡು ನನ್ನ ಹೃದಯವನ್ನು ಇರಿಯುತ್ತಿದೆ. ಲೋಕೋದ್ಧಾರಕ್ಕಾಗಿ ಅದನ್ನು ಪುನಶ್ಚೇತನ ಗೊಳಿಸು.

ಕೃಷ್ಣ ಪ್ರೇಮದಿಂದ ಅವನ ಮೈತಡವಿದ.

ಕೃಷ್ಣ: ಹೆದರದಿರು ಫಲ್ಗುನಿ ಲಂಚಕ್ಕೆಂದೂ ನಾಶವಿಲ್ಲ. ನೀನು ನೋಡಿದ್ದೆಲ್ಲಾ

ಕೇವಲ ಭ್ರಮೆ. ಚಂಚಲಗೊಂಡಿದ್ದ ನಿನ್ನ ಮನಸ್ಸನ್ನು ಮಾಯೆ ಕವಿದಿತ್ತಷ್ಟೇ. ಅಗೋ ನೋಡು ರಾಮಕೃಷ್ಣ ಐವತ್ತರ ನೋಟು ಕೊಟ್ಟು ಗಜಿಯಾಬಾದ್ ತಲಪಿ ನೌಕರಿ ದಕ್ಕಿಸಿಕೊಂಡಿದ್ದಾನೆ. ವೆಂಕಟನರಸಯ್ಯ ಕೈ ತುಂಬಾ ಗಿಂಬಳ ಪಡೆದು ಆದಾಯ ತೆರಿಗೆ ಇಲಾಖೆಗೆ ಮಣ್ಣೆರೆಚಿ ಇನ್ನೂ ವೈಭವೋಪೇತ ಜೀವನ ನಡೆಸುತ್ತಿದ್ದಾನೆ. ಚುನಾವಣಾ ಪ್ರಚಾರ ಭರದಿಂದ ನಡೆದಿದೆ ನೋಡು. ಒಂದೊಂದು ಕ್ಷೇತ್ರದಲ್ಲೂ ನೂರಕ್ಕೂ ಮೇಲ್ಪಟ್ಟು ಅಭ್ಯರ್ಥಿಗಳು ಮತ ಚೀಟಿ ಸಮಾಚಾರ ಪತ್ರಿಕೆಯಷ್ಟು ಅಗಾಧವಾಗಿದೆ ವೀಕ್ಷಿಸು.''

ಅರ್ಜುನ ಶಾಂತಿ ಹೊಂದಿ ಹೊರಡಲು ಅಣಿಯಾಗಿ ಗಾಂಡೀವ ಕೈಗೆತ್ತಿದ.

ಕೃಷ್ಣ: ತಾಳು ವಿಜಯ ಲಂಚೋಪಾಖ್ಯಾನದ ಕಡೆಯ ಅಧ್ಯಾಯ ಇನ್ನೂ ಬಾಕಿ ಇದೆ. ಲಂಚ ಕೊಡಲು ಯಾ ಸ್ವೀಕರಿಸಲು ಹಲವು ನಿಯಮಗಳುಂಟು. ಇದು ಸದಾ ಮೇಜು ಕೆಳಗಿನ ವ್ಯವಹಾರ. ಸರ್ವವ್ಯಾಪಿಯಾಗಿ ಸರ್ವವಿದಿತ ವಾದ್ದಾಗ್ಯೂ ಗೌಪ್ಯತೆ ಕಾಯ್ದು ಕೊಳ್ಳುವುದು ಇದರ ವಿಶೇಷ ಗುಣ. ಇದರಲ್ಲಿ ತೊಡಗಲು ಕಾಲಾ ಕಾಲ ವಿವೇಚನೆ ಎಲ್ಲರ ಹಿತ ದೃಷ್ಟಿಯಿಂದ ಒಳ್ಳೆಯದು. ಹೀಗೆ ಈ ಕಲಿಯುಗದಲ್ಲಿ ಇದರ ಸ್ವರೂಪ ತಿಳಿದು ಸ್ವತ: ತಿಂದು ಪರರಿಗೂ ತಿನ್ನಿಸುವವನೇ ನಿಜವಾದ ಯೋಗಿ. ಹೆಚ್ಚೇಕೆ. ಹಿಂದೆ ಪತ್ರಂ ಪುಷ್ಪಂ ಫಲಂ ತೋಯಂ ಎಂದಿದ್ದ ನಾನೇ ಇದರಿಂದ ಹೊರತಾಗಿಲ್ಲ. ಯಾವುದೇ ಆಲಯಕ್ಕೆ ಹೋಗಿ ನೋಡು. ಎಷ್ಟೆಲ್ಲಾ ನೈವೇದ್ಯಗಳು, ಹಾಲು ಜೇನಿನ ಅಭಿಷೇಕಗಳು, ವಜ್ರ ವೈಢೂರ್ಯದ ಕವಚಗಳು, ನೋಟಿನ ಕಟ್ಟುಗಳಿಂದ ತುಂಬಿದ ಹುಂಡಿಗಳು - ಎಲ್ಲಾ ನನಗಾಗಿ, ನನ್ನ ಕೃಪೆಗಾಗಿ. ಹೇ ಪಾರ್ಥ ಜ್ಞಾನ, ಭಕ್ತಿ, ಕರ್ಮಕ್ಕಿಂತಾ ಮಿಗಿಲಾದ ಈ ಯೋಗವನ್ನು ಅಭ್ಯಾಸ ಮಾಡಿ ನೀನೂ ಸುಖಿಸು.

ಕೃಷ್ಣ ರಥದಿಂದಿಳಿದ. ಅರ್ಜುನ ಖುಷಿಯಿಂದ 'ಲಂಚ ಚಿರಾಯುವಾಗಲಿ' ಎಂದು ಘೋಷಿಸುತ್ತಿದ್ದಂತೆ ಪಾಂಚಜನ್ಯ ಹಿನ್ನೆಲೆಯಲ್ಲಿ ಮೊಳಗಿತು.

---

**ಕಂಬಾರರಿಗೆ**
**ವರುಷ**
**ವಿಮರ್ಶಕರಿಗೆ**
**ನಿಮಿಷ**

**- ಶಂಸ**

# ಬೋಫೋರ್ಸ್ ಬಣ್ಣದ ಪುಸ್ತಕ

ಚಿತ್ರ: ಜಯರಾಮ ಉಡುಪ

ಇದು ಬೋಫೋರ್ಸ್ ಗನ್ನು
ಇದಕ್ಕೆ ಹಸಿರು ಬಣ್ಣ ಚೆಂದ
ಡಾಲರಿನ ಬಣ್ಣವೂ
ಹಸಿರೇ ಅಲ್ಲವೇ






ಇದು ವಿನ್ ಛಡ್ಡಾ. ಇವನು ಗನ್ ದಲ್ಲಾಳಿ. ದಲ್ಲಾಳಿ ಅಂದಮೇಲೆ
Dull ಆಗಿರಲು ಸಾಧ್ಯವೇ ಇಲ್ಲ
ಹಾಗಾಗಿ ಇವನಿಗೆ Bright pink ಹಚ್ಚಿ



ಇವರು ಹಿಂದೂಜಾ ಸಹೋದರರು ಸ್ವಿಸ್ ಬ್ಯಾಂಕ್‌ನಲ್ಲಿ ಇವರಿಗೆ ಲಕ್ಷ್ಮಿ ತಾನೇ ತಾನಾಗಿ ಪ್ರತ್ಯಕ್ಷಳಾದಳಂತೆ ಹಾಗೆಂದಮೇಲೆ ಇವರಿಗೆ ಚಿನ್ನದ ಮುಲಾಮೇ ಸರಿ



ಇವನು ಕ್ವಾಟ್ರಾಚ್ಚಿ
ಇವನು ನಮ್ಮ
ಇಟಾಲಿಯನ್ ಕನೆಕ್ಷನ್
ವಿಚಾರಣೆಗೆ ಹೆದರಿ
ಭಾರತ ಬಿಟ್ಟು
ಪಾರಾರಿಯಾದ.
ಹೆದರಿಕೆಯ ಬಣ್ಣ
ಹಳದಿ. ಇವನ
ಮುಖಕ್ಕೂ ಅದೇ ಸರಿ.



ಇದು ಚಿತ್ರಾ
ಸುಬ್ರಮಣ್ಯಂ. ಕೆದಕಿ
ಕೆದಕಿ, ಅತೀವ
ತಾಳ್ಮೆವಹಿಸಿ ಕೊನೆಗೂ
ಉತ್ತರ ಪಡೆದ ಧೀರೆ.
ತಾಳ್ಮೆಯ ಪ್ರತೀಕವಾದ
ಭೂದೇವಿಯಂತೆ
ಈಕೆಗೂ ಅಕ್ಕರೆಯಿಂದ
ಹಸಿರುಡುಗೆ ತೊಡಿಸಿ



ಜ್ವಾಲಾ ಮುಖಿಯ ಮೇಲೆ
ಕುಳಿತಿರುವ ಈಕೆ ಸೋನಿಯಾ
ಒಂದೇ ಸಮಾಧಾನವೆಂದರೆ,
ಭಾರತದಲ್ಲಿನ
ಜ್ವಾಲಾಮುಖಿಗಳೆಲ್ಲಾ
ಎಂದೋ ತಣ್ಣಗಾಗಿವೆ. ಸದಾ
ಸ್ಫಿಂಕ್ಸ್ ಮುಖಭಾವ
ಹೊಂದಿರುವ ಈಕೆಗೆ ಕಲ್ಲಿನ
ಬೂದಿ ಬಣ್ಣ ಅತಿ ಸೂಕ್ತ.



ಈತ ಜೋಗೀಂದರ್ ಸಿಂಗ್
ಅವನ ಕೈಲಿರುವ ಪೆಟ್ಟಿಗೆ
ಪ್ಯಾಂಡೋರಾಳ ಪೆಟ್ಟಿಗೆಯನ್ನೇ
ಹೋಲುತ್ತದಲ್ಲವೆ. ಆದರೆ
ಅದರಲ್ಲಿರುವುದು
ಬೋಫೋರ್ಸ್ ಪತ್ರಗಳು.
ಪೆಟ್ಟಿಗೆಯನ್ನು ಈತ
ತೆಗೆಯಲೂ ಆರ, ಮುಚ್ಚಲೂ
ಆರ. ಸದಾ ಅಪಾಯದಲ್ಲಿರುವ
ಈತನಿಗೆ ಡೇಂಜರ್ ಬಣ್ಣವಾದ
ಕೆಂಪು



ಇವರು ಕಾಂಗ್ರೆಸ್ಸೇತರ ರಾಜಕಾರಣಿಗಳು. ಬೋಫೋರ್ಸ್ ಹಗರಣ ಇವರಿಗೆ
ಓಕುಳಿ ಆಟದಂತೆ. ಮನಸ್ಸಿಗೆ ಬಂದ ಬಣ್ಣ ಎರಚಿ ಇವರಿಗೆ



ಇದು ಭಾರತದ ಬಡ ಜನತೆ ಬಿಹಾರದ ಮೂರು ಸಾವಿರ ಕೋಟಿ ಮೇವಿನ ಹಗರಣಕ್ಕೆ ಹೋಲಿಸಿದರೆ ಬೋಫೋರ್ಸ್‌ನ ಜುಜುಬಿ ಅರವತ್ನಾಲ್ಕು ಕೋಟಿಗೆ ಇಷ್ಟೆಲ್ಲಾ ಗಲಾಟೆ ಏಕೆ ಎಂದು ಆಶ್ಚರ್ಯ ಚಿಕಿತರಾಗಿದ್ದಾರೆ ಈ ಜನ. ಇವರ ಭವಿಷ್ಯದ ಪ್ರತೀಕವಾದ ಕರಾಳ ಕಪ್ಪು ಇವರಿಗೆ ತಕ್ಕ ಬಣ್ಣ. ಸಂತಸದಿಂದ ಬಳಿಯಿರಿ.

# ಗೃಹಸ್ಥ ಧರ್ಮ

- ಹಾ.ರಾ.

ಮೊನ್ನೆ ಹಬ್ಬದ ದಿನ ತರಕಾರಿ, ಹಣ್ಣು, ಹೂವು ಮುಂತಾದುವನ್ನು ಚೀಲಕ್ಕೆ ತುಂಬಿಕೊಂಡು ಮನೆಕಡೆ ನಡೆದು ಬರುತ್ತಿದ್ದೆ. ಕೈಲಿ ಎರಡು ಬಾಳೆ ಕಂದು ಬೇರೆ. ಸಾಲದ್ದಕ್ಕೆ ಸೋನೆ ಮಳೆ. ನನ್ನಂತೆಯೇ ಪೇಚಿಗೆ ಸಿಕ್ಕಿಹಾಕಿಕೊಂಡಿದ್ದ ಮಧ್ಯ ವಯಸ್ಸಿನ ಗೃಹಸ್ಥರೊಬ್ಬರು ಆ ಜನಜಂಗುಳಿ ಮಧ್ಯೆ ನನ್ನನ್ನು ಗುರ್ತಿಸಿ ಮಾತನಾಡಿಸಿದಾಗ ನನ್ನ ಮನಸ್ಸಿನಲ್ಲಿ ಸ್ವಲ್ಪ ಶಾಂತಿ ಮೂಡಿತು. ಕಷ್ಟಸುಖ ಗೊತ್ತಿರುವವರೊಬ್ಬರು ಜೊತೆಗೆ ಸಿಕ್ಕಿದರೆ ಎಂಥವರಿಗಾದರೂ ಸ್ವಲ್ಪ ಧೈರ್ಯ ಮೂಡುತ್ತಲ್ಲವೆ? ಅವರು ನನ್ನ ಚೀಲವನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತ ಅಳಿಯಂದರ ಯೋಗಕ್ಷೇಮವನ್ನೂ ವಿಚಾರಿಸಿದರು. ನಾನು ಉಬ್ಬಿಹೋದೆ! ''ಈ ಹಬ್ಬ ಹರಿದಿನಗಳು ಯಾಕಾರ ಬರುತ್ತವೋ.... ನಮ್ಮಂಥ ಗೃಹಸ್ಥರನ್ನು ಕಾಡಲು ಈ ಬೆಲೆಗಳು, ಕಾಲಸ್ಥಿತಿ, ಈ ಮಳೇಲಿ ಇದನ್ನೆಲ್ಲಾ ಹೊತ್ಕೊಂಡು, ಹಣೆಬರಹ'' ಎಂದರು. ಆಗಲೇ ನೋಡಿ ನನಗೆ ಕರಳು ಚುರ್ ಅಂದಿದ್ದು! ''ಏನು ಮಾಡೋದು, ಸ್ವಾಮಿ, ಗೃಹಸ್ಥ ಧರ್ಮ ಅನ್ನೋದು ಒಂದಿದೆಯಲ್ಲ'' ಎಂದೆ, ನನ್ನದೂ ಅದೇ ಹಣೆಬರಹ ಎಂದು ಹೇಳುವ ಬದಲು ಇಂಥ ಪರಿಸ್ಥಿತಿಯಲ್ಲಿ ಆ ಕ್ಯಾಮರ ಕಣ್ಣುಗಳು ನಮ್ಮನ್ನೇ ದುರುಗುಟ್ಟುಕೊಂಡು ನೋಡಬೇಕೆ? ನಮ್ಮ ಚೀಲ, ವೇಷ ಭೂಷಣಗಳನ್ನು ನೋಡಿ ಅವಕ್ಕೆ ತುಂಬ ಖುಷಿಯಾಗಿರಬೇಕು. ಹಬ್ಬದ ಸಂಜೆ ಟಿ.ವಿ. ಆಕೆ ''ನಗರದಲ್ಲಿ ಹಬ್ಬವನ್ನು ಸಾಂಪ್ರದಾಯಕ ಶ್ರದ್ಧಾಭಕ್ತಿಗಳಿಂದಾಚರಿಸಲಾಗುತ್ತಿದೆ. ನಮ್ಮ ಕ್ಯಾಮರ ಈ ಸಂಜೆ ಮಾರ್ಕೆಟ್ ಬಳಿ ಸೆರೆಹಿಡಿದ ಒಂದು ದೃಶ್ಯವನ್ನು ನಮ್ಮ ವೀಕ್ಷಕರಿಗೆ ಈಗ ತೋರಿಸುತ್ತೇವೆ'' ಅಂತ ಹೇಳಿ ತೋರಿಸಿದ ದೃಶ್ಯವನ್ನು ನೀವೂ ನೋಡಿರಬೇಕಲ್ಲ! ಅವತ್ತು ಸೆರೆಹಿಡಿಯಲ್ಪಟ್ಟ ನತದೃಷ್ಟ ಗೃಹಸ್ಥರು ನಾವೇ. ಗೃಹಿಣಿ ಬರೆದು ಕೊಟ್ಟ ಸಾಮಾನು ಪಟ್ಟೀನ ಕೈಲಿ ಝಳಪಿಸುತ್ತ, ಅಂಗಡಿ ಬೀದಿ ಉದ್ದಕ್ಕೂ ಬೆಲೆಗಳನ್ನ ಕೇಳ್ತಾ ಪೆಚ್ಚು ಪೆಚ್ಚಾಗಿ ಇನ್ಯಾರು ಓಡಾಡ್ತಾರೆ! ಪಟ್ಟಿ ಪ್ರಕಾರ ಎಲ್ಲಾ ಸಾಮಾನು ಇತ್ತು. ಎಷ್ಟು ದುಡ್ಡು ಖರ್ಚಾಯ್ತು ಅಂತ ಮನೆಯಾಕೆ ಏನೂ ಕೇಳಲಿಲ್ಲ. ಗೃಹಸ್ಥ ಧರ್ಮವೇ ಹಾಗೆ ಅಂತ ಅಂದುಕೊಂಡು ಮನಸ್ಸಿಗೆ ಸಮಾಧಾನ ತಂದುಕೊಂಡೆ!

ಅಂದಹಾಗೆ 'ಗೃಹಸ್ಥ' ಎಂದರೆ ಯಾರು? 'ಗೃಹಸ್ಥಧರ್ಮ' ಎಂದರೇನು? ಎಂದು ಯಾರಾದರೂ ಕೇಳಬಹುದು. ಗೃಹಸ್ಥಾಶ್ರಮಕ್ಕೆ ಕಾಲಿಟ್ಟವನು ಗೃಹಸ್ಥ ಅಂದರೆ ಏಳಲಾರದಷ್ಟು ಆಳವಾದ ದೊಡ್ಡ ಹಳ್ಳಕ್ಕೆ ಬಿದ್ದಿರುವವನು ಎಂದರ್ಥ. ಇವನನ್ನು ನೋಡೇ ನಿಸ್ಸಾರರು ತಮ್ಮನ್ನೂ ಸೇರಿಸಿಕೊಂಡು 'ಕುರಿಗಳು ಸಾರ್, ನಾವ್ ಕುರಿಗಳು' ಎಂದು ಉದ್ಗಾರವನ್ನು ತೆಗೆದು ಒಂದು ನಿರ್ಧಾರಕ್ಕೆ ಬಂದರು ಅಂತ ಕಾಣುತ್ತೆ. ಆದರೂ ಗೃಹಸ್ಥನಿಗೆ ಕೆಲವು ವಿಶೇಷ ಸವಲತ್ತುಗಳು ಇದ್ದೇ ಇವೆ. ಅವನು ಸಮಾಜದಲ್ಲಿ ಇತರರ ಅನುಕಂಪವನ್ನು ಬೇಗ ಗಿಟ್ಟಿಸುತ್ತಾನೆ. ಅವನಿಗೆ ವಿಶೇಷ ಸ್ಥಾನಮಾನಗಳು! ಅರ್ಹತೆ!

ಅಂದರೆ ವಿಶೇಷ ಕ್ವಾಲಿಫಿಕೇಷನ್ ಎನ್ನಿ. ಉದಾಹರಣೆಗೆ, ಬಾಡಿಗೆ ಮನೆ ಹುಡುಕುವ ಪರದಾಟಕ್ಕೆ ಸಿಕ್ಕಿಹಾಕಿಕೊಂಡರೆ ಅದು ಏನು? ಎನ್ನುವುದು ನಿಮಗರ್ಥವಾಗುತ್ತದೆ. 'ಸಾರ್, ಮನೆ ಬಾಡಿಗೆಗೆ ಇದೆಯೆ?' ಎಂದು ಕೇಳಿದಾಗ ಮನೆಮಾಲೀಕ ಮರುಪ್ರಶ್ನೆ ಹಾಕುತ್ತಾನೆ- 'ಮದುವೆ ಆಗಿದಿಯೇನ್ರಿ ನಿಮಗೆ' ಅಂತ. ಗೃಹಸ್ಥನಿಗಾದರೆ ಬಾಡಿಗೆ ಮನೆ ಸುಲಭವಾಗಿ ಸಿಗುತ್ತದೆ. ಗೃಹಿಣಿ ಜೊತೆಯಲ್ಲಿದ್ದರಾಯಿತು. ಅವನು ಎಂಥ ಹೆಂಗಸರ ಗುಂಪಿನಲ್ಲೂ ನಿರ್ಭಯವಾಗಿ ಓಡಾಡಬಹುದು. ಒಟ್ಟಿನಲ್ಲಿ ಅವನು ಮರ್ಯಾದಸ್ತ. ಗುಂಡುಗೋವಿಯಂತೆ ಕಟ್ಟುಪಾಡುಗಳಿಲ್ಲದ ಸ್ವೇಚ್ಛಾವಿಹಾರಿಯಲ್ಲ. ಇವನದೇ ಒಂದು 'ಸ್ಪೆಷಲ್ ಕ್ಯಾಟಗಿರಿ', 'ಫ್ಯಾಮಿಲಿ ಮ್ಯಾನ್' ಅಂತ ಮಣೆ ಹಾಕಿ ಕೂರಿಸುತ್ತಾರೆ. ಹೀಗಾಗಿ ಇವನ ಕ್ರಿಯೆಗಳಿಗೂ, ನಡವಳಿಕೆಗಳಿಗೂ ಒಂದು 'ಧರ್ಮ' ಅಂಟಿಕೊಂಡಿದೆ. ಅದೇ ಗೃಹಸ್ಥಧರ್ಮ! ಗೃಹಸ್ಥನನ್ನು ಹದಮಾಡಲು ಹುಟ್ಟಿ ಬೆಳೆದಿರುವ ಧರ್ಮ. ಗೃಹಸ್ಥ ಧರ್ಮ ಹೊಸದೇನೂ ಅಲ್ಲ. ಇದು ಕಾಲಕಾಲಕ್ಕೆ ಹೊಸ ಹೊಸ ತಂತ್ರಗಳನ್ನು ಅಳವಡಿಸಿಕೊಳ್ಳುತ್ತಾ ತುಂಬಾ ಸೂಕ್ಷ್ಮವೂ, ನಾಜೂಕು ಆಗುತ್ತಿದೆ. ಇದಕ್ಕೆ ಸಾಕಷ್ಟು ತಿದ್ದುಪಡಿಗಳಾಗುತ್ತವೆ ಗೃಹ ರಾಜ್ಯಾಂಗದಲ್ಲಿ! ಆಧುನಿಕ ಗೃಹ್ಯಸೂತ್ರಗಳನ್ನು ಕ್ರಮಬದ್ಧವಾಗಿ 'ಕೋಡಿಫೈ' ಮಾಡಿ ಈಗ ಹೇಳಬೇಕಾದ ಅಗತ್ಯ ಎದ್ದು ಕಾಣುತ್ತಿದೆ. ಹಿಂದೆ ಪರಾಶರರು ಅಂದಿನ ಗೃಹಸ್ಥಧರ್ಮದ ನೀತಿ ಸಂಹಿತೆಯೊಂದನ್ನು ತಯಾರಿಸಿ ಶೌನಕಾದಿಮುನಿಗಳು, ನಾರದರು ಮುಂತಾದ ಮಹನೀಯರ ಮೂಲಕ ಪ್ರಚುರಪಡಿಸಿದ ಸಂಗತಿ ಇದ್ದಕ್ಕಿದ್ದ ಹಾಗೆ ನನಗೆ ಒಂದು ದಿನ ಜ್ಞಾಪಕಕ್ಕೆ ಬಂದಿತು. ಅಥರ್ವಣ ವೇದದಲ್ಲಿ ಹೇಳಿರುವ ಮಾಹಿತಿಯನ್ನು ಸಂಗ್ರಹಿಸಿ ತಯಾರಿಸಿರುವ 'ಮೆಮರಿಪ್ಲಸ್' ಕ್ಯಾಪ್‌ಸಲ್‌ನ್ನು ಒಂದಾದ ಮೇಲೊಂದು ನುಂಗಿದ್ದೆ ಅವತ್ತು!

ಆಧುನಿಕ ಗೃಹಸ್ಥಧರ್ಮದ ಕೆಲವು ಗಂಭೀರವಾದ ಸೂತ್ರಗಳನ್ನು ಲೋಕಕಲ್ಯಾಣಾರ್ಥವಾಗಿ ಇಲ್ಲಿ ಹೇಳಲು ಪ್ರಯತ್ನಿಸುತ್ತೇನೆ. "Charity begins at home' ಎನ್ನುವಂತೆ ಗೃಹಸ್ಥಧರ್ಮ ಮನೆಯಿಂದಲೇ ಪ್ರಾರಂಭ. ಅದು "Acid Test'ಗೆ ಗುರಿಯಾಗುವುದೂ ಮನೆಯಲ್ಲೆ. ಉದಾಹರಣೆಗೆ ಗೃಹಸ್ಥನಾದವನು, ಮನೆಯವರೆಲ್ಲ ಊಟಮಾಡಿ ಮುಗಿಸಿದ ಮೇಲೆ ಕೊನೆಯಲ್ಲಿ ತಾನು ಊಟಮಾಡಬೇಕು. ಇದು ಪ್ರಾಚೀನ ಕಾಲದಿಂದಲೂ ಬಂದಿರುವ ಗೃಹಸ್ಥಧರ್ಮ. ಇದು ಈಗ ಹೇಗೆ ಸಾಧ್ಯ. ಬೆಳಗಾದರೆ ನಾಲ್ಕಾರು ಟಿಫನ್ ಬಾಕ್ಸ್‌ಗಳು ದಿಕ್ಕು ದಿಕ್ಕಿಗೆ ಚಲ್ಲಾಪಿಲ್ಲಿಯಾಗಿ ಓಡಲು ತಯಾರಾಗುತ್ತದೆ. ಆದುದರಿಂದ ಸದ್ಗೃಹಸ್ಥನಾದವನು ಹೋಟೆಲ್ ಊಟ ತಿಂಡಿಗಳ ನಾನಾ ರುಚಿಗಳಿಗೆ ನಾಲಿಗೆಯನ್ನು ಹೊರಳಿಸದೆ, ಮನೆಯಿಂದ 'ಟಿಫನ್‌ಬಾಕ್ಸ್'ನ್ನು ಮರೆಯದೆ ತೆಗೆದುಕೊಂಡು ಹೋಗುವುದೇ ಆಧುನಿಕ ಗೃಹಸ್ಥಧರ್ಮ. ಹಾಗೆಂದು ಹೋಟಲುಗಳಿಗೆ ಹೋಗಲೇಬಾರದೆಂದು ನಾನೇನೂ ಪ್ರಚಾರ ಮಾಡುತ್ತಿಲ್ಲ. ಹೆಂಡತಿ ಜೊತೆಯಲ್ಲೇ ಹೋಟಲುಗಳಿಗೆ ಭೇಟಿ ಕೊಡುವುದು ಶ್ರೇಯಸ್ಕರ. ಅದೇ ಶ್ರೇಷ್ಠವಾದ ಗೃಹಸ್ಥಧರ್ಮ.

ಗೃಹಸ್ಥನು ಒಂಟಿಯಾಗಿರುವಾಗ ಪರಾನ್ನಕ್ಕೂ, ಹೊಸ ಹೊಸ ರುಚಿಗಳಿಗೂ

ಮಾರುಹೋಗಬಾರದು. ಈಗ ಆಫೀಸರುಗಳಿಗೂ, ಬ್ಯಾಂಕುಗಳಿಗೂ ಲಂಚ್ ತರುವ ನಾರೀಮಣಿಯರು ಬಣ್ಣ ಬಣ್ಣದ ಮ್ಯಾಚಿಂಗ್ ಟಿಫನ್ ಬಾಕ್ಸ್‌ಗಳಲ್ಲಿ ಹೊಸ ಹೊಸ ರುಚಿಗಳನ್ನು ತಂದಿರುತ್ತಾರೆ. ಕಂಪ್ಯೂಟರ್ ಟೇಬಲ್ ಮೇಲೇ ಕೂತು ಬಡಿಸಿಕೊಳ್ಳುತ್ತಾರೆ. ಹಲವಾರು ಗೃಹಸ್ಥ ಉದ್ಯೋಗಿಗಳೂ ತಮ್ಮ ತಮ್ಮ ಆಫೀಸ್ ಟೇಬಲ್‌ಗಳ ಮೇಲೆ ಈ ಕೈಂಕರ್ಯವನ್ನು ನಡೆಸುತ್ತಾರೆ. ವಿಚಾರ ವಿನಿಮಯದೊಂದಿಗೆ ಒಮ್ಮೊಮ್ಮೆ ಲಂಚ್ ಎಕ್ಸ್‌ಚೇಂಜ್ ನಡೆಯುತ್ತದೆ. ಯಾರಾದರೂ ಒಬ್ಬ ನಡುವಯಸ್ಸಿನ ಗೃಹಸ್ಥ ''ಏನ್ರಿ, ಮಂದಸ್ಮಿತ, ನೀವು ಶುಕ್ರವಾರ ತಂದಿದ್ದ ಗೊಜ್ಜು, ಮಜ್ಜಿಗೆಹುಳಿ ನನ್ನ ವಾತ ಪಿತ್ತಗಳನ್ನು ಒಂದೇ ದಿನದಲ್ಲಿ ಹೊಡೆದುಹಾಕಿದೆ. ನಿಮ್ಮ ಯಜಮಾನರಿಗೆ ನನ್ನ ಕೃತಜ್ಞತೆಗಳನ್ನು ತಿಳಿಸಿ. ಎಷ್ಟೊಂದು ಸಮಸಮವಾಗಿ ಉಪ್ಪು, ಖಾರ, ಹುಳಿ ಹಾಕುತ್ತಾರೆ. ಗೃಹಸ್ಥರೆಂದರೆ ಅವರಪ್ಪ'' ಎಂದು ಅಪ್ಪಿತಪ್ಪಿ ಹೇಳಿದರೆ ಅದರಿಂದ ಹೊರಡುವ ದುರ್ದರ್ಶನದ ಸಿಗ್ನಲ್‌ಗಳು ಎಷ್ಟೇ ವೀಕ್ ಆಗಿದ್ದರೂ ಹೋಂಟಿವಿ ಆ್ಯಂಟಿನವನ್ನು ಕ್ಯಾಚ್‌ಮಾಡದೆ ಇದ್ದೀತೆ! ಆಫೀಸಿಗೆ ಬರುವ ಹೆಂಗೆಳೆಯರ ಊಟದ ಕ್ಯಾರಿಯರ್‌ಗಳೊಳಕ್ಕೆ ಮೂಗನ್ನು ಚಾಚಿ, ನಾಲಿಗೆಯನ್ನು ಹೊರಳಿಸುವುದು ಸದಭಿರುಚಿಯ ಗೃಹಸ್ಥ ಧರ್ಮವಲ್ಲ. ಸದ್ಗೃಹಸ್ಥನಾದರೋ ತನ್ನ ಬಾಕ್ಸ್‌ನಲ್ಲಿರುವ ಒಣಗಿದ ಚಪಾತಿಯನ್ನೋ ಸೀದು ತಳಹತ್ತಿದ ಉಪ್ಪಿಟ್ಟನ್ನೋ ತಿಂದು ಆಫೀಸ್ ಫೈಲಿನಿಂದ ಗಾಳಿ ಬೀಸಿಕೊಳ್ಳುತ್ತಾನೆ. ಸಂಜೆ ಮನೆಗೆ ಬಂದ ತಕ್ಷಣ ಟಿಫನ್ ಬಾಕ್ಸನ್ನೂ, ತನ್ನ ನಿಲುವಂಗಿಯ ಒಳಜೇಬನ್ನೂ ಗೃಹಿಣಿಯ ತನಿಖೆಗೆ ಒಳಪಡಿಸುತ್ತಾನೆ. ತಾನು ಮುಂಜಾನೆ ಉಪ್ಪಿಟ್ಟಿಗೆ ಹಾಕಿದ್ದ ಕೆಂಪು ಮೆಣಸಿನಕಾಯಿಯ ಅವಶೇಷಗಳನ್ನು ಟಿಫನ್ ಬಾಕ್ಸ್‌ನಲ್ಲಿ ಕಂಡಾಗ ಆಕೆಗೆ ಆಗುವ ಆನಂದ ಅಷ್ಟಿಷ್ಟಲ್ಲ. ಗಂಡನ ಮೇಲೆ ಅಪಾರ ನಂಬಿಕೆ ವಿಶ್ವಾಸ ಮೂಡುವುದಕ್ಕೆ ಇದು ತುಂಬ ಸಹಕಾರಿ, ತನ್ನ ರುಚಿ ಇವರಿಗೆ ಎಷ್ಟೊಂದು ಹಿಡಿಸಿದೆ ಎನ್ನುವ ಹೆಮ್ಮೆ ಒಂದು ಕಡೆ. ತನ್ನದು ಎಷ್ಟೊಂದು ಪಳಗಿದ ಕೈ ಎಂಬ ಆತ್ಮ ವಿಶ್ವಾಸ ಇನ್ನೊಂದು ಕಡೆ. ಮಧ್ಯಾಹ್ನದ ಊಟ ಮುಗಿದ ಮೇಲೆ ಲಂಚ್‌ನಲ್ಲಿ ಸಿಗುವ ಮೆಣಸಿನ ಕಾಯಿಚೂರು, ಕರಟ, ನಾರು ಮುಂತಾದ ಅವಶೇಷಗಳನ್ನು ಆಫೀಸಿನ ಕಸದ ಬುಟ್ಟಿಗೆ ಫೈಲುಗಳ ಜೊತೆ ಎಸೆಯದೆ ಟಿಫನ್ ಬಾಕ್ಸಿಗೆ ಹಾಕಿಕೊಂಡು ಬರುವುದೇ ಆಧುನಿಕ ಗೃಹಸ್ಥಧರ್ಮ.

ಗೃಹಿಣಿಯ ಹಕ್ಕುಗಳಿಗೆ ಮಾನ್ಯತೆ ಕೊಡುವುದು, ಆಕೆಗೆ ಮೆಚ್ಚಿಗೆಯಾಗುವಂತೆ ನಡೆದುಕೊಳ್ಳುವುದು, ನಾಲ್ಕು ಹೊಗಳಿಕೆಯ ಮಾತುಗಳನ್ನಾಡುವುದು ಗೃಹಸ್ಥಧರ್ಮದ ಮೂಲ ಸೂತ್ರಗಳು. ತನ್ನ ಷರ್ಟಿನ ಜೇಬಿನಲ್ಲಿ ಕೆಲವು ನೋಟುಗಳು, ಗೃಹಿಣಿಯೊಬ್ಬಳೇ ಮನೆಯಲ್ಲಿದ್ದಾಗ ಮಾಯವಾಯಿತೆಂಬುದು ತಿಳಿದಿದ್ದರೂ, ಸದ್ಗೃಹಸ್ಥನು ಕಾರಣವನ್ನು ಕೇಳುವುದಕ್ಕೆ ಹೋಗುವುದಿಲ್ಲ. ಅದರ ಬದಲು ಸಾಸುವೆ ಡಬ್ಬ, ದೇವರ ಮಂದಾಸನ, ಸಹಸ್ರನಾಮದ ಪುಸ್ತಕ, ರೇಷ್ಮೆ ಸೀರೆ ಕೊಂಡಾಗ ಅಂಗಡಿಯನು ಕೊಟ್ಟಿದ್ದ ಗಿಫ್ಟ್ ಪರ್ಸು ಮುಂತಾದವುಗಳನ್ನು ಹುಡುಕಿ ನಷ್ಟವನ್ನು ಅವನು ಉಪಾಯವಾಗಿ ಸರಿತೂಗಿಸಿಕೊಳ್ಳುತ್ತಾನೆ. Give and take policy ಎಂದರೆ ಇದೇ. ನಾವು

ಧರ್ಮವನ್ನು ರಕ್ಷಿಸಿದರೆ ಧರ್ಮವು ನಮ್ಮನ್ನು ರಕ್ಷಿಸುತ್ತದೆ.

ಎಲ್ಲಿ ಗೃಹಿಣಿಯು ಪೂಜಿಸಲ್ಪಡುವುದಿಲ್ಲವೋ ಅಲ್ಲಿ ಕೆಲಸಗಳು ಫಲಹೀನವಾಗುತ್ತವೆ ಎಂಬ ಸ್ಮೃತಿ ವಚನವನ್ನು ಆಧುನಿಕ ಗೃಹಸ್ಥನು ಚೆನ್ನಾ ಅರ್ಥಮಾಡಿಕೊಂಡಿದ್ದಾನೆ. ವಿವೇಚನಾಶಕ್ತಿಯೇ ದೊಡ್ಡದು ಎಂದು ಭಾವಿಸಿ ಗೃಹಿಣಿಗೆ ಬುದ್ಧಿವಾದ ಹೇಳುವುದು ಅವಳ ಕೆಲಸ ಕಾರ್ಯಗಳನ್ನು ಪದೇ ಪದೇ ಟೀಕಿಸುವುದು, ಅವಳು ಹೇಳುವ ಮಾತುಗಳಿಗೆ ಕಿವಿಗೊಡದೆ ಇರುವುದು, ಹಾಕಿದ ಗೆರೆಯನ್ನು ದಾಟುವುದು ಮುಂತಾದ ಗೃಹಭಂಗ ಚಟುವಟಿಕೆಗಳನ್ನು ಆಧುನಿಕ ಗೃಹಸ್ಥ ಧರ್ಮವು ಒಪ್ಪುವುದಿಲ್ಲ. ಮೂರು ಹೊತ್ತೂ ಟಿವಿ ಮುಂದೆ ಕೂತು ಸಂಸಾರದ ಜವಾಬ್ದಾರಿಯ ಹೊಣೆಯನ್ನು ಹಗುರ ಮಾಡಿಕೊಳ್ಳುವ ಗೃಹಿಣಿಗೆ ಯಾವ ಯಾವ ಛಾನಲ್‌ಗಳಲ್ಲಿ ಎಂತೆಂಥ ಭಾಷಾ ಸಿನಿಮಾಗಳು ಬರುತ್ತವೆಂಬುದರ ಬಗ್ಗೆ ಪೂರ್ಣ ಮಾಹಿತಿಯನ್ನೊದಗಿಸುವುದು ಆಧುನಿಕ ಗೃಹಸ್ಥಧರ್ಮದ ಒಂದು ಬಹುಮುಖ್ಯ ಸೂತ್ರ.

ಸ್ವಬುದ್ಧಿಯು ಒಮ್ಮೊಮ್ಮೆ ಎಂಥವರನ್ನೂ ತಪ್ಪು ದಾರಿಗೆ ಎಳೆಯುತ್ತದೆ. ಅದು ಇಲ್ಲದೆ ಇರುವುದೇ ಎಷ್ಟೋ ಮೇಲು- U.F. ಸರ್ಕಾರದಂತೆ! ಗೃಹಸ್ಥನೂ ಒಂದೊಂದು ಸಲ ಮಾಯೆಯಲ್ಲಿ ಸಿಕ್ಕಿಹಾಕಿಕೊಳ್ಳುವುದುಂಟು. ತನ್ನದೇ ಆದ ಒಂದು ಪ್ರತಿಷ್ಠೆಯಿದೆ ಎಂದು ತೋರಿಸುವುದಕ್ಕೆ ಹೋದರೆ ಬೆಂಬಲವನ್ನು ಹಿಂತೆಗೆದುಕೊಳ್ಳುತ್ತೇನೆ ಎನ್ನುತ್ತಾಳೆ ಮನೆಯಾಕೆ. ಮನೆಯಲ್ಲೂ ಅನಿಶ್ಚಿತ ಪರಿಸ್ಥಿತಿ ಎಂದು ನೆಂಟರು ಟೀಕೆ ಮಾಡುತ್ತಾರೆ. ಗೃಹಸ್ಥನಿಗೂ ಅದರಿಂದ ಏನೂ ಫಾಯಿದೆ ಇಲ್ಲ. 'ಗೃಹಿಣಿ ಗೃಹ ಮುಚ್ಚತೆ' ಎಂಬ ಆಧುನಿಕ ಸೂಕ್ತಿಯಂತೆ ಅವನು ಮನೆಗೆ ಬರುವ ಹೊತ್ತಿಗೆ ಅಡಿಗೆಮನೆ ಬಾಗಿಲನ್ನು ಮುಚ್ಚಿ ಸೀಟ್ ರಿಸರ್ವೇಷನ್ ಚಳುವಳಿ ನಡೆಸಲು ಆಕೆ ವಿಧಾನಸೌಧದ ಕಡೆಗೆ ಹೊರಟುಹೋಗಿರುತ್ತಾಳೆ. ಒಟ್ಟಿನಲ್ಲಿ ಹೇಳುವುದಾದರೆ ಬಗ್ಗಿ ನಡೆಯುವುದೇ ಗೃಹಸ್ಥ ಧರ್ಮದ ಸಂಸ್ಕೃತಿ. ನುಸುಳಲು ಜಾಪೆಯೇ ಕಾಣದಾಗ ರಂಗೋಲಿ ಕೆಳಗೆ ನುಸುಳಲೇ ಬೇಕಷ್ಟೆ! 'ಅದೇ ಉಂಡೇನು, ಕದತೆಗಿ' ಎಂಬ ರಾಜಿ ಸೂತ್ರವೇ ಇದಕ್ಕೆಲ್ಲ ಮದ್ದು. ಹೊಟ್ಟೆತುಂಬ ಹಾಕುತ್ತಿದ್ದ ಮೊದಲಿದ್ದವಳೇ ಮೇಲಲ್ಲವೆ? ಇದೆಲ್ಲ ತಿರುಳ್‌ಗನ್ನಡದ ಜಾಣ್ನುಡಿಗಳು ಎಂದೆನಿಸಿದರೂ; ಗೃಹಸ್ಥ ಧರ್ಮವೆಂಬ ಸೌಧದ ತಳಪಾಯದ ಕಲ್ಲುಗಳೆಂದೇ ನಾನು ಅರಿತಿದ್ದೇನೆ.

ಗೃಹಿಣಿಯ ಸಹಕಾರವಿಲ್ಲದೆ ಗೃಹಸ್ಥಧರ್ಮ ಫಲಿಸೀತೆ? ವಿಭಿನ್ನ ಸ್ವಭಾವದ ಸತಿಪತಿಯರು ಸಹಬಾಳ್ವೆಯನ್ನು ಸಲೀಸಾಗಿ ನಡೆಸುವುದನ್ನು ನಾವು ನೋಡಿಲ್ಲವೆ? ಉದಾಹರಣೆಗೆ-ಗಂಡ ಹಸುವಿನಂಥ ಸಾಧುಪ್ರಾಣಿ, ಹೆಂಡತಿ ಸ್ವಲ್ಪ ಜೋರು, ಕೈಮೇಲು, ಗಂಟಲು ದೊಡ್ಡದು. ಆದರೇನಂತೆ? ಅವರ ಸಂಸಾರ ನಂದಗೋಕುಲದಂತಿಲ್ಲವೆ. ಇದರ ರಹಸ್ಯವನ್ನು ತಿಳಿಯಲು ನಾನು ನಿರುದ್ಯೋಗಿಯಾಗಿದ್ದಾಗ ಕೆಲವು ಸಂಶೋಧನೆಗಳನ್ನು ನಡೆಸಿದೆ. ಊರೂರು ತಿರಿಗಿ ಅಂಕಿ ಅಂಶಗಳನ್ನು ಸಂಗ್ರಹಿಸುತ್ತಿದ್ದೆ. ಯಾರೋ ಒಬ್ಬರು ಪುಣ್ಯಾತ್ಮರು ನನ್ನನ್ನು ಒಬ್ಬ ದಕ್ಷ

ಉದ್ಯೋಗಸ್ತನೆಂದು ತಿಳಿದು ಹೆಣ್ಣುಕೊಟ್ಟು ಮದುವೆ ಮಾಡಿದರು. ಅನಂತರವೂ ನಾನು ನನ್ನ ಸಂಶೋಧನೆಗಳನ್ನು ಮುಂದುವರೆಸಿಕೊಂಡೇ ಬಂದೆ. ಕೆಲವು ತಪಸ್ವಿಗಳ ಆಶ್ರಮದಲ್ಲಿ ಸಾಧು ಪ್ರಾಣಿಗಳು ಕ್ರೂರ ಪ್ರಾಣಿಗಳೂ ಒಟ್ಟಿಗೆ ಜಿಗಿದು ಕುಣಿದು ಆಟವಾಡುತ್ತ ಜೀವನ ನಡೆಸುವುದಂತೆ! ಇದರ ಸತ್ಯಾಂಶ ನನ್ನ ಅನುಭವಕ್ಕೂ ಬಂತು! ಗೃಹಸ್ಥಾಶ್ರಮವು ಒಂದು ತಪೋಭೂಮಿ ಎಂದು ಆಗಲೇ ನನಗೆ ಅರಿವಾಗಿದ್ದು! ಇಲ್ಲಿ ಅಂಥ ಪವಾಡ ನಡೆಯುವುದಕ್ಕೆ ಗೃಹಸ್ಥ ಧರ್ಮದ ಪಾಲನೆಯೆ ಕಾರಣ. ಎಚ್ಚರದಿಂದ ಗೃಹಸ್ಥ ಧರ್ಮವನ್ನು ರಕ್ಷಿಸಿಕೊಂಡು ಬರಬೇಕು ಅಷ್ಟೆ!

ಅತಿಥಿ ಸತ್ಕಾರ, ಗೃಹಸ್ಥ ಧರ್ಮದ ಬಹು ಮುಖ್ಯವಾದ ಅಂಗ. ಇದರಲ್ಲಿ ಆಧುನಿಕ ಧರ್ಮ ಸೂಕ್ಷ್ಮವನ್ನು ಗುರುತಿಸಬಹುದು. ಕಾಲಕ್ಕೆ ತಕ್ಕ ವೇಷ, ವೇಷಕ್ಕೆ ತಕ್ಕ ಕ್ಲೇಶ ಇದ್ದೇ ಇರುತ್ತೆ. ಎಲ್ಲ 'ಉದರ ನಿಮಿತ್ತಂ' ತಾನೆ! ಅತಿಥಿದೇವೋಭವ ಅಂತ ಗೃಹಸ್ಥನು ಈಗ ಕೂತುಬಿಟ್ಟರೆ ಮನೆಯವರೆಲ್ಲರ ಹೊಟ್ಟೆಮೇಲೆ ಒದ್ದೆ ಬಟ್ಟೆ ಹಾಕಿಕೊಳ್ಳಬೇಕಾಗುತ್ತದೆ. ನೆಂಟರು, ಸ್ನೇಹಿತರು ದಿನ ಬೆಳಗಾದರೆ ಧಾಳಿ ಮಾಡುತ್ತಲೇ ಇರುತ್ತಾರೆ. ಕಾಷಾಂಬರ ಉಟ್ಟರೂ ಕಷಾಯ ಕೊಡಲೇಬೇಕು, ಬಂದವರಿಗೆ. ಇದರಲ್ಲಿ ಗೃಹಿಣಿಯ ಪಾತ್ರವೇ ಮುಖ್ಯ. ಸಹಧರ್ಮಿಣಿಯಾದ ಆಕೆ ಒಂದು ಉದ್ಧರಣೆ ನೀರು ಹಾಕದರೆ ತಾನೆ ಪುಣ್ಯ, ಪುರುಷಾರ್ಥ! ಕಾಫಿಗೆ ಹಾಲು ಸಾಕಷ್ಟಿಲ್ಲ ಎಂದು ಅರಿವಾದಾಗ ಒಂದು ಉದ್ಧರಣೆ ನೀರು ಯಾವ ಮೂಲೆಗೆ? ಅಂಥ ಸಂದರ್ಭದಲ್ಲಿ ಒಂದು ದೊಡ್ಡ ಡಬರಿ ತುಂಬ ನೀರನ್ನು ಹಾಲಿನ ಪಾತ್ರೆಗೆ ಸಹಧರ್ಮಿಣಿಯ ಕೈಯಿಂದಲೇ ಹಾಕಿಸಿ ಕೃಷ್ಣಾರ್ಪಣಮಸ್ತು ಎನ್ನುವುದು ಗೃಹಸ್ಥಧರ್ಮ. ಸಾಂಸಾರಿಕ ಜಗತ್ತಿನಲ್ಲಿ "C.T.B.T.' ಒಪ್ಪಂದಗಳನ್ನು ಮಾಡಿಕೊಂಡರೆ, ಗೃಹಸ್ಥಧರ್ಮವು 'ಡೈಲ್ಯೂಟ್' ಆಗುವುದಿಲ್ಲ. ನಾನು ಹೇಳುತ್ತಿರುವ "C.T.B.T.'- Coffee Tea Ban Treaty ಅಷ್ಟೆ!

ಎಲ್ಲಾ ಶಾಸ್ತ್ರಗಳಲ್ಲೂ ಆಪದ್ಧರ್ಮವೆಂಬ ಒಂದು ಭಾಗ ಇರುವುದುಂಟು. ದಂಗೆ, ವಿಪ್ಲವ, ಪೀಡೆ ಅರ್ಥಾತ್ ನೆಂಟರು ಮುಂತಾದ ಅನಿಷ್ಟಕಾರಕ ಸಂದರ್ಭಗಳಲ್ಲಿ ಹಳೆ ಕಾಲದ ಗೃಹಸ್ಥಧರ್ಮವನ್ನು ಸ್ವಲ್ಪ ಸಡಿಲ ಮಾಡಿಕೊಂಡರೆ ತಪ್ಪೇನಿಲ್ಲ. ರೈಲು ತಡವಾಗಿ ಬಂತು ಅಂತ ಪೀಠಿಕೆ ಹಾಕಿಕೊಂಡು ಹೊತ್ತಿಲ್ಲದ ಹೊತ್ತಿನಲ್ಲಿ ನೆಂಟರ ತಂಡ ಬಂದಿಳಿದರೆ ಯಾವ ಗೃಹಸ್ಥ ತಾನೆ ನಿಭಾಯಿಸಿಯಾನು. ನಮ್ಮ ಗೃಹಿಣಿಯೇನು ದ್ರೌಪದಿಯೆ ಅವಳ ಬಳಿ ಅಕ್ಷಯ ಪಾತ್ರೆ ಇದೆಯೆ? ಕಡೇಲಿ ಉಳಿದಿದ್ದ ಒಂದು ಅಗಳನ್ನೇ ತಿಂದು ನಾನು ಹೇಗೋ ಗೃಹಸ್ಥ ಧರ್ಮವನ್ನು ಪಾಲಿಸಿಕೊಂಡು ಬರುತ್ತಿದ್ದೇನೆ. ಅದಕ್ಕೂ ಸಂಚಕಾರ ಬಂದರೆ ಗತಿ ಇದನ್ನೆಲ್ಲಾ ಎದುರಿಸುವುದಕ್ಕೆ ಗೃಹಸ್ಥ, ಗೃಹಿಣಿ ಒಟ್ಟಿಗೆ ಕಲೆತು ಒಂದು "Common minimum programme' ನ್ನು ಮನೆಯಲ್ಲಿ ರೂಪಿಸಿಕೊಳ್ಳಬೇಕು. ಆಗ ನೆಂಟರು ಮೆತ್ತಗಾಗುತ್ತಾರೆ. ಬಂದ ನೆಂಟರು ಯಾವ ವರ್ಗಕ್ಕೆ ಸೇರಿದವರು? ಯಾರಿಗೆ ಕಾಫಿ, ಜ್ಯೂಸ್ ಯಾರಿಗೆ, ನೀರು ಯಾರಿಗೆ? ಇವೆಲ್ಲವನ್ನೂ ಮೊದಲೇ ಪರಸ್ಪರ ಬೆಂಬಲದಿಂದ ನಿರ್ಧರಿಸಲು ಸಾಧ್ಯ. "Issue based Support' ಎಂದರೆ ಇಷ್ಟೆ.

ಮಿತ ಆಹಾರ, ಮಿತನಿದ್ರೆ, ಮಿತವ್ಯಯ ಮುಂತಾದ ಗುಣಗಳು ಗೃಹಸ್ಥ ಧರ್ಮಕ್ಕೆ ಶೋಭೆಯನ್ನು ತರುತ್ತದೆ. ಮಿತನಿದ್ರೆ- ಎಂದೆ! ಗೃಹಸ್ಥರು ಕಛೇರಿಗಳಲ್ಲಿ ಮಾಡಬೇಕಾದ ನಿದ್ರೆಗೆ ಇದು ಅನ್ವಯಿಸುವುದಿಲ್ಲ. ಮೂಲವಿಧಿಗೆ ವಿನಾಯಿತಿಗಳು ಇರುತ್ತಲ್ಲ ಹಾಗೆ. ಹಗಲುಗನಸು ಕಾಣುವುದು ಮುಗಿಲು ಮಲ್ಲಿಗೆಗೆ ಹಾತೊರೆಯುವುದು, ತುಂಡು ಷರ್ಟು ಧರಿಸುವುದು ರಸ್ತೆಯ ಮಧ್ಯೆ ಚಪ್ಪಲಿ ಕಿತ್ತುಹೋದರೆ ಪೇಪರ್ ಸುತ್ತಿ ಮನೆಗೆ ತರುವುದು, ಪಕ್ಕದ ಮನೆಗೆ ಪೇಪರ್ ಬರುವುದನ್ನೆ ಕಾಯುವುದು, ಪೇಪರ್ ಓದಿದ ಮೇಲೆ ವಾಪಸ್ ಕೊಡುವುದನ್ನು ಮರೆಯುವುದು, ಮಾರಾಟಗಾರ್ತಿಯರು ಮನೆ ಬಾಗಿಲನ್ನು ತಟ್ಟಿದರೆ ತಕ್ಷಣ ಗೃಹಿಣಿಗೆ ತಿಳಿಸುವುದು. ಯಾವ ಯಾವ ಸಾಮಾನಿಗೆ ಡಿಸ್ಕೌಂಟ್ ಎಷ್ಟು, ಎಲ್ಲಿ ಸಿಗುತ್ತೆ ಅಂತ ನೆರೆಹೊರೆಯವರಿಗೆ ಹೇಳುವುದು- ಇವೇ ಮುಂತಾದ ಸಾರ್ವಜನಿಕ ಹಿತಾಸಕ್ತಿಯ ಚರ್ಯೆಗಳು ಗೃಹಸ್ಥಧರ್ಮವನ್ನು ಎತ್ತಿ ಹಿಡಿಯುತ್ತದೆ. ಇದನ್ನು ಗುರುತಿಸಿ ಅರ್ಥಮಾಡಿಕೊಳ್ಳುವುದೇ ಒಂದು ಭಯಂಕರ ಕಲೆ! ಉದಾಹರಣೆಗೆ ಯಾರಾದರೂ ಗಂಟೆಗಟ್ಟಲೆ ಹೇಳಿದ್ದೇ ಹೇಳುತ್ತ ಬೋರ್ ಮಾಡಿದರೆನ್ನಿ ಆಗ ಸ್ವಲ್ಪವೂ ಬೇಸರಪಟ್ಟುಕೊಳ್ಳದೆ, ಆಕಳಿಕೆ ಮುಂತಾದ ಪ್ರತಿಕ್ರಿಯೆಗಳಿಂದ ಪ್ರತಿಭಟನೆಯನ್ನು ಹೊರಡಿಸದೆ ಆಸಾಮಿ ಹೇಳುವುದನ್ನೆಲ್ಲ ಕಿವಿಗೊಟ್ಟು ಆಲಿಸುವುದೇ ಶ್ರೇಷ್ಠ ಗೃಹಸ್ಥಧರ್ಮ. ವರ್ಷಗಟ್ಟಲೆ ಹೂಗುಟ್ಟುತ್ತ ಭಾರತದ ಕಥೆಯನ್ನು ಕೇಳಿದ ಜನಮೇಜಯರಾಯ ಎಂಥಹ ಸದ್ಗೃಹಸ್ಥ! ಅವನು ಧರಿತ್ರೀಪಾಲನೇ ಸರಿ ಹಾಗೂ ಕನ್ನಡಿಗನೇ ಆಗಿರಬೇಕು ಅವನು ಇಲ್ಲಿ ಒಂದು ಸೂತ್ರ ಹೊರಹೊಮ್ಮುತ್ತೆ- 'ಬೋರ್ ಹೊಡಿಸಿಕೊಳ್ಳುವುದೇ ಗೃಹಸ್ಥಧರ್ಮ'! ಎನ್ನುಬಹುದೆ?

ಗೃಹಿಣಿಯ ಕಲೆಗಾರಿಕೆ, ಸೌಂದರ್ಯೋಪಾಸನೆಗಳನ್ನು ಮೆಚ್ಚಿ ಯಾವ ಗೃಹಸ್ಥ ಹೊಗಳುವುದಿಲ್ಲ. ಆಕೆಯ ಆಶೋತ್ತರಗಳನ್ನು ಈಡೇರಿಸುವುದರಲ್ಲೇ ಅವನಿಗೆ ಹೆಚ್ಚು ಉತ್ಸಾಹ ಹೆಚ್ಚು ಶ್ರದ್ಧೆ. ಶ್ರೀರಾಮನೇ ತನ್ನ ಹೆಂಡತಿಯ ಆಸೆಯನ್ನು ಈಡೇರಿಸಲು ಬಂಗಾರದ ಜಿಂಕೆಯ ಹಿಂದೆ ಬಿದ್ದು ಗೃಹಸ್ಥಧರ್ಮವನ್ನು ಮೊಟ್ಟಮೊದಲಿಗೆ ಆರ್ಯಾವರ್ತದ ದಂಡಕಾರಣ್ಯದಲ್ಲಿ ಬೆಳಗಿದ. ಪರಮಪಾಮರರಾದ ಗೃಹಸ್ಥರಿಗೆ ಇದು ಸೊಗಸಾದ ಮಾದರಿ! ಗೃಹಿಣಿಯು ಚಿನ್ನದ ಬೇಡಿಕೆಯನ್ನು ಕೈ ಬಳೆಗಳ ಅಥವಾ ಕಂಠಾಭರಣದ ರೂಪದಲ್ಲಿ ಮುಂದಿಟ್ಟರೆ ಅದನ್ನು ನಡೆಸಿಕೊಡುವುದು ಗೃಹಸ್ಥಧರ್ಮ. ಇನ್ನೊಂದು ಮಾದರಿಯಿದೆ. ಗಂಡರ ಗಂಡನಾದ ಭೀಮಸೇನನು ಅಡಿಗೆ ಮನೆಯನ್ನು ಸೇರಿ ರುಚಿ ರುಚಿಯಾದ ಖಾದ್ಯಗಳನ್ನಟ್ಟಿದ. ಗದೆಯನ್ನು ಕೆಳಗಿಟ್ಟು ಗೃಹಸ್ಥಧರ್ಮವನ್ನು ಲೋಕಕ್ಕೆ ಸಾರಿದ ಮಹಾನುಭಾವ ಆತ!

ಹೀಗೆ ಗೃಹಸ್ಥಾಶ್ರಮದಲ್ಲಿ ಮಾಡಬೇಕಾದ ಎಲ್ಲಾ ಕರ್ಮಗಳನ್ನೂ, ಕರ್ತವ್ಯಗಳನ್ನೂ ಮಾಡಿ ಮುಗಿಸಿದ ಮೇಲೆ ಗೃಹಸ್ಥ ಏನಾಗುತ್ತಾನೆ? ಮುದುಕನಂತೂ ಆಗುತ್ತಾನೆ. ಮನುಸ್ಮೃತಿಯಲ್ಲಿ ಒಂದು ಶ್ಲೋಕವಿದೆ. ಅದರಲ್ಲಿ ಗೃಹಸ್ಥಾಶ್ರಮವು ಮುಗಿದಮೇಲೆ ವಾನಪ್ರಸ್ಥಾಶ್ರಮಕ್ಕೆ ಹೋಗಬೇಕೆಂದು ಹೇಳಲ್ಪಟ್ಟಿದೆ. ಊರಿನಲ್ಲಿ

ತಿನ್ನಬೇಕಾದ ಆಹಾರವನ್ನು ಬಿಟ್ಟುಬಿಡಬೇಕಂತೆ. ಆಸ್ತಿಪಾಸ್ತಿ ಇದ್ದರೆ ಬಿಟ್ಟುಬಿಡಬೇಕೆಂತೆ! ಭಾರ್ಯೆ ಜೊತೆಯಲ್ಲಿ ಬರಲು ಇಷ್ಟಪಡಿದ್ದರೆ ಅವಳನ್ನು ಮನೆಯಲ್ಲೇ ಬಿಟ್ಟು ಅರಣ್ಯಕ್ಕೆ ಹೋಗಬೇಕಂತೆ? ಯಾವ ಭಾರ್ಯೆ ಅರಣ್ಯಕ್ಕೆ ಹೋಗಲು ಇಷ್ಟಪಡುತ್ತಾಳೆ! ಅಂತೂ ಊರು ಹೋಗು, ಕಾಡು ಬಾ ಎನ್ನುವ ಸ್ಥಿತಿಗೆ ಗೃಹಸ್ಥನು ಬಂದೇ ಬರುತ್ತಾನೆ. ಅಂತೂ ಈ ಸ್ಥಿತಿಗೆ ಗೃಹಸ್ಥನನ್ನು ಬೇಗ ತಲುಪಿಸುವುದೇ ಗೃಹಸ್ಥಧರ್ಮದ ಪರಮಗುರಿ! ಹೆಚ್ಚು ಕಡಿಮೆ, ಇದರ ಪೂರ್ತಿ ಹೊಣೆ ಗೃಹಿಣಿಯದೇ ಎಂದು ಬೇರೆ ಹೇಳಬೇಕಿಲ್ಲವಷ್ಟೆ.

---

ನಮ್ಮ ಹೊಸ ಯೋಜನೆ

## ಆಜೀವ ಚಂದಾ ಸಂಗ್ರಹಣಾ ಯೋಜನೆ



ಕಳೆದ ಒಂದೂವರೆ ದಶಕಗಳಿಂದ ಅಪರಂಜಿ ನಿಮ್ಮನ್ನೆಲ್ಲಾ ರಂಜಿಸುತ್ತಾ ಬಂದಿದ್ದಾಳೆ. ಈಗ ಅಪರಂಜಿಯನ್ನು ಒಂದು ಭದ್ರವಾದ ನೆಲೆ ಗಟ್ಟಿನಲ್ಲಿ ನಿಲ್ಲಿಸುವ ಯತ್ನದಲ್ಲಿ ನಿಮ್ಮ ಸಹಕಾರವನ್ನು ಕೋರುತ್ತಿದ್ದೇವೆ.

1. ನಿಮ್ಮ ವಾರ್ಷಿಕ ಚಂದಾವನ್ನು ಆಜೀವ ಚಂದಾಗೆ ಮಾರ್ಪಡಿಸಿ

2. ಮುಂದಿನ ಹನ್ನೆರಡು ತಿಂಗಳಲ್ಲಿ ಕನಿಷ್ಟ ಇನ್ನೂರು ವಾರ್ಷಿಕ ಚಂದಾಗಳನ್ನು ಸಂಗ್ರಹಿಸುವ ಯೋಜನೆಯಿದೆ. ನೀವು ನಿಮ್ಮ ಬಂಧು-ಮಿತ್ರರ ಮನವೊಲಿಸಿ ಈ ಆಜೀವ ಚಂದಾಗಳನ್ನು ಸಂಗ್ರಹಿಸಬೇಕಾಗಿ ಕೋರಿಕೆ.

3. ಹತ್ತು ಆಜೀವ ಚಂದಾ ಸಂಗ್ರಹಿಸಿದವರಿಗೆ ಒಂದು ಕಟ್ಟು ಹಾಕಿದ ಲಕ್ಷ್ಮಣ್‌ರವರ ವ್ಯಂಗ್ಯ ಚಿತ್ರದ ಪ್ರತಿಯೊಂದನ್ನು ಕೃತಜ್ಞತಾ ಕಾಣಿಕೆಯನ್ನಾಗಿ ಕೊಡಲಾಗುವುದು. ಈ ಕಾಣಿಕೆಯ ವಿತರಣೆ ನಮ್ಮ ವಾರ್ಷಿಕ ಹಾಸ್ಯೋತ್ಸವದಂದು ನಡೆಸುವ ಯೋಜನೆಯಿದೆ ದಯವಿಟ್ಟು ಸಹಕರಿಸಿ.

– ಸಂಪಾದಕ

# ನೂತನ ತಪೋವಿಧಾನ

- ನಾ. ಡಿಸೋಜ

ಮೇಜಿನ ಮೇಲೆ ಮೊಣಕೈಯೂರಿ ಅಂಗೈಯನ್ನು ಕಮಲದ ದಳದಂತೆ ತೆರೆದು ಅಂಗೈ ನಡುವೆ ಗದ್ದವನ್ನು ಇರಿಸಿ, ಕುತ್ತಿಗೆಯನ್ನು ತುಸು ಒಳಗೆ ಸೆಳೆದುಕೊಂಡು, ಭಾರವನ್ನೆಲ್ಲ ಈ ಗದ್ದಕ್ಕೆ ವರ್ಗಾಯಿಸಿ, ಮುಖವನ್ನು ಕೊಂಚ ಕೆಳಗೆ ಬಗ್ಗಿಸಿ, ಕಣ್ಣುಗಳನ್ನು ಮುಚ್ಚಿಕೊಂಡು ಈತ ಕುಳಿತಿದ್ದ. ಇದು ಇವನ ಜನಪ್ರಿಯ ಭಂಗಿಯಾಗಿತ್ತು. ದೇಶದ ಸಹಸ್ರವಲ್ಲ ಲಕ್ಷವಲ್ಲ ಕೋಟಿ ಕೋಟಿ ಜನ ಅವನ ಈ ಭಂಗಿಯನ್ನು ಕಂಡಿದ್ದರು. ಈ ಮಹಾನುಭಾವ ಸಾರ್ವಜನಿಕ ಸಭೆಯಲ್ಲಿರಲಿ, ಪಾರ್ಟಿ ಅಧಿವೇಶನದಲ್ಲಿರಲಿ ಪಾರ್ಲಿಮೆಂಟಿನಲ್ಲಿ ಇರಲಿ ಊಟದ ಮೇಜಿನ ಮುಂದಿರಲಿ, ಎಲ್ಲೇ ಇರಲಿ ಇವನ ಭಂಗಿ ಇದೇ ಆಗಿತ್ತು. ಆರಂಭದಲ್ಲಿ ಇದು ತೀವ್ರ ಟೀಕೆಗೆ ಗುರಿಯಾಯಿತು. ಪತ್ರಿಕೆಗಳವರು ಈ ಅಪೂರ್ವ ಭಂಗಿಯ ಫೋಟೋಗಳನ್ನು ಪ್ರಕಟಿಸಿದರು. ಸಭೆಯಲ್ಲಿ ನಿದ್ರಾ ಸುಖ ಎಂಬ ತಲೆಬರಹ ಕೊಟ್ಟರು. ಜನ ನಕ್ಕರು, ಛೆ ಎಂದರು, ಹೀಗೂ ಉಂಟೆ ಎಂದು ಹುಬ್ಬೇರಿಸಿದರು. ಹೀಗೆ ಆಗಬಾರದು ಎಂದು ಲೊಚಗುಟ್ಟಿದರು. ಇದೆಲ್ಲದರಿಂದ ವಿಚಲಿತನಾಗದ ಈತ ತನ್ನ ಪರವಾಗಿ ಒಂದು ಹೇಳಿಕೆಯನ್ನು ನೀಡುವಂತೆ ತನ್ನ ಕಾರ್ಯದರ್ಶಿಗೆ ಹೇಳಿದ.

''ಏನು ನೀಡಲಿ?''

ಎಂದು ಕಾರ್ಯದರ್ಶಿ ಇವನನ್ನೆ ಕೇಳಿದ.

ನಾನು ನಿದ್ರೆ ಮಾಡುತ್ತಿಲ್ಲ... ದೇಶದಲ್ಲಿರುವ ಕಟ್ಟ ಕಡೆಯ ಪ್ರಜೆಯ ಒಳಿತಿಗಾಗಿ ಸದಾ ಯೋಸಿಸುತ್ತಿರುತ್ತೇನೆ.... ಎಂದು ಹೇಳಿಕೆ ಕೊಡು ಅಂದ.

ಅವನ ಈ ಹೇಳಿಕೆಗೆ ಹಿಂದೆ ಮುಂದೆ ಒಂದಿಷ್ಟು ಸೇರಿಸಿ ಕಾರ್ಯದರ್ಶಿ ಪತ್ರಿಕೆಗಳಿಗೆ ಹೇಳಿಕೆ ನೀಡಿದ.

ಜನ ಇದನ್ನು ಓದಿದರು. ಇದ್ದರೂ ಇರಬಹುದು ಅನಿಸಿತು ಅವರಿಗೆ. ದೇಶದ ಜನ ಸಾಮಾನ್ಯರ ಏಳಿಗೆ ಅಷ್ಟು ಸುಲಭವಾಗಿ ಆಗುವುದಿಲ್ಲ ಅನ್ನುವುದು ಅವರಿಗೆ ತಿಳಿದಿತ್ತಲ್ಲ. ಈ ಹಿಂದೆ ಈ ದೇಶವನ್ನು ಉದ್ಧಾರ ಮಾಡುತ್ತೇವೆ ಎಂದು ಹೇಳಿಕೊಂಡು ಯಾರು ಯಾರೋ ಬಂದಿದ್ದರು. ಅವರು ಯಾರಿಂದಲೂ ಈ ಕೆಲಸ ಆಗಿರಲಿಲ್ಲ. ದೇಶ ಐವತ್ತು ವರ್ಷಗಳ ಹಿಂದೆ ಹೇಗೆ ಇತ್ತೋ ಈಗಲೂ ಹಾಗೆಯೇ ಇದೆ. ಆದರೆ ಈ ಹಿಂದೆ ಬಂದವರು ದೇಶೋದ್ಧಾರದ ಮಾತನ್ನು ಹೇಳಿದ್ದರಷ್ಟೆ. ಯಾರೂ ಇವನಷ್ಟು ಗಾಢವಾಗಿ ಯೋಚಿಕಸುತ್ತಿರಲಿಲ್ಲ. ಈತನ ಈ ಭಂಗಿಯಿಂದ ಈ ದೇಶದ ಕನಿಷ್ಠರ ಜೀವನ ಲಾಭ ಹೆಚ್ಚುವುದಾದಲ್ಲಿ ಹೆಚ್ಚಲಿ ಎಂದು ಜನ ಬಯಸಿದರು, ಹಾರೈಸಿದರು.

ಈ ಹಿಂದೆ ತಾವು ಇವನ ಭಂಗಿ ಕಂಡು ನಕ್ಕದ್ದಕ್ಕೆ, ಹಾಸ್ಯದ ಮಾತನಾಡಿದ್ದಕ್ಕೆ ಗಲ್ಲ

ಬಡಿದುಕೊಂಡರು. ಬೇಗನೆ ಈತನ ಪ್ರಯತ್ನಗಳು ಫಲಕಾರಿಯಾಗಲಿ ಎಂದು ಪ್ರಾರ್ಥಿಸತೊಡಗಿದರು.

ಹೀಗಾಗಿ ಇವನ ಈ ತಪೋಭಂಗಿಗೊಂದು ಸಾರ್ವತ್ರಿಕ ಗೌರವ ಮನ್ನಣೆ ಸಿಗತೊಡಗಿತ್ತು. ಜನ ಇದನ್ನು ಭಯ ಭಕ್ತಿಯಿಂದ ಕಾಣತೊಡಗಿದರು. ಭಾರತೀಯ ಪರಂಪರೆಯಲ್ಲಿ ಋಷಿಮುನಿಗಳು ಹಿಮಾಲಯದ ತಪ್ಪಲಲ್ಲಿ ಕಮಂಡಲ ಹಿಡಿದು ತಪಸ್ಸಿಗೆ ಕುಳಿತು ಆ ಮೂಲಕ ಲೋಕಶಾಂತಿಯನ್ನು ಆತ್ಮ ಕಲ್ಯಾಣವನ್ನು ಜನಹಿತವನ್ನು ಸಾಧಿಸುತ್ತಿದ್ದುದು ಜನರಿಗೆ ತಟ್ಟನೆ ನೆನಪಿಗೆ ಬಂದು, ನಮ್ಮ ಪರಂಪರೆ ಹೊತ್ತ ಮತ್ತೊಂದು ತಪೋ ವಿಧಾನ ಇದಾಗಿರಬಹುದು ಅನ್ನುವ ತೀರ್ಮಾನಕ್ಕೆ ಜನ ಬಂದರು.

ಪದ್ಮಾಸನ ಹಾಕಿ ಕುಳಿತು ದೃಷ್ಟಿಯನ್ನು ಮೂಗಿನ ತುದಿಗೆ ಕೇಂದ್ರೀಕರಿಸಿ ಬಾಯಲ್ಲಿ ಪರಮಾತ್ಮನ ನಾಮವನ್ನು ಉಚ್ಚರಿಸುತ್ತ ತಪಸ್ಸನ್ನು ಆರಂಭಿಸುವ ತಪಸ್ವಿಗಳು ಕ್ರಮೇಣ ಇಡೀ ಪ್ರಪಂಚವನ್ನೇ ಮರೆತು ಭಗವಂತನ ಇಲ್ಲವೆ ಭಗವತಿಯ ಧ್ಯಾನದಲ್ಲಿ ಲೀನರಾಗಿ ಹೋಗಿ ಆ ಮೂಲಕ ಈ ಲೋಕಕ್ಕೆ ಸಕಲ ಸನ್ಮಂಗಳಗಳನ್ನು ದೊರಕಿಸಿಕೊಟ್ಟಂತೆಯೇ ಈ ಆಧುನಿಕ ತಪಸ್ಸು ಕೂಡ ಅದ್ಭುತವನ್ನು ಸಾಧಿಸಬಹುದು ಅನ್ನುವುದು ಜನರಿಗೆ ಖಚಿತವಾಯಿತು.

ಇಂದು ಹಿಮಾಲಯ ಗುಹೆ ಗಹ್ವರಗಳಿಗೆ ಹೋಗಿ ತಪಸ್ಸು ಮಾಡುವಂತಿಲ್ಲ. ಅಲ್ಲಿಯೂ ನಾನಾ ಬಗೆಯ ಪ್ರದೂಷಣಗಳು, ಗೊಂದಲಗಳು, ಕಾಡು-ಕೊಡಚಾದ್ರಿಗಳಿಗೆ ಹೋಗುವುದರಲ್ಲೂ ಅರ್ಥವಿಲ್ಲ. ನಾವು ಎಲ್ಲಿದ್ದೇವೆ ಅಲ್ಲಿಯೇ ತಪ್ಪಸ್ಸು ಮಾಡುವುದು ಸೂಕ್ತ ಮತ್ತು ನ್ಯಾಯ. ಗೋರಕುಂಬಾರ ಮಣ್ಣನ್ನು ತುಳಿಯುತ್ತಲೇ ಭಗವಂತನನ್ನು ಕಾಣಲಿಲ್ಲವೆ? ಕಬೀರದಾಸ ಮಗ್ಗ ಹೆಣೆಯುತ್ತಲೇ ದೇವರ ಉಪಾಸನೆ ಮಾಡಲಿಲ್ಲವೆ? ಬೇಡರ ಕಣ್ಣಪ್ಪ ಏನು ಮಾಡಿದ? ಇಷ್ಟೆಲ್ಲ ಉದಾಹರಣೆಗಳು ನಮ್ಮಲ್ಲಿರುವಾಗ ಈ ಮಹಾನುಭಾವ ಸಭೆಯಲ್ಲಿ ಪಾರ್ಲಿಮೆಂಟಿನಲ್ಲಿ ವಿದೇಶ ಅತಿಥಿಗಳ ಸಮ್ಮುಖದಲ್ಲಿ. ಈ ತಪೋ ಭಂಗಿಯನ್ನು ತಾಳುವುದರಲ್ಲಿ ಏನು ತಪ್ಪಿದೆ ಎಂದು ಪರಸ್ಪರ ಚರ್ಚೆ ಮಾಡಿ, ಇದರಲ್ಲಿ ತಪ್ಪು ಇಲ್ಲ ಅನ್ನುವ ನಿರ್ಧಾರಕ್ಕೆ ಬಂದರು ಸಾವಿರಾರು ವರ್ಷಗಳ ಧಾರ್ಮಿಕ ಪರಂಪರೆ ಇರುವಂತಹ ಈ ದೇಶದ ಮಹಾಜನ.

ಈ ನಿರ್ಧಾರದ ಹಿಂದೆಯೆ ಕೆಲವೊಂದು ನಿಯಮಗಳನ್ನು ಕೂಡ ತಮಗೆ ತಾವೇ ವಿಧಿಸಿಕೊಂಡರು.

ಯಾರೂ ಕೂಡ ಈ ಮಹಾನುಭಾವನ ತಪೋಭಂಗಮಾಡಬಾರದು.

ಇದನ್ನು ನೋಡಿ ನಗುವುದು, ಕೇಕೆ ಹಾಕುವುದು ಫೋಟೋ ತೆಗೆಯುವುದು ಮಾಡಬಾರದು. ಈ ಬಗ್ಗೆ ಟೀಕೆ ಮಾಡುವುದು, ಚುಟುಕಿ ಬರೆಯುವುದು, ಕತೆ, ಕವಿತೆ, ನಾಟಕ ಹೆಣೆಯುವುದು ನಿಲ್ಲಿಸಬೇಕು.

ಈ ಕುರಿತು ಯಾರೂ ಯಾರ ಹತ್ತಿರವೂ ಮಾತನಾಡಬಾರದು.

ಈ ಎಲ್ಲ ನಿಬಂಧನೆಗಳನ್ನು ತಮಗೆ ತಾವೇ ವಿಧಿಸಿಕೊಂಡ ಜನ ಆ ಮಹಾನುಭಾವನ ತಪೋ ವಿಧಾನವನ್ನು ಅಪ್ರತ್ಯಕ್ಷವಾಗಿ ಬೆಂಬಲಿಸಿ ಮೆಚ್ಚಿ ನಿಧಾನವಾಗಿ ಅದಕ್ಕೇನೆ ಮಾರುಹೋಗ ತೊಡಗಿದರು. ಈ ಕನಿಷ್ಠರಿಗೆ ಸಕಲ ಸೌಭ್ಯಾಗಳನ್ನು ತಂದು ಕೊಡಲು ಈ ದೇಶದ ಕೋಟಿ ಕೋಟಿ ರೈತರ ಕಷ್ಟ ಪರಿಹರಿಸಲು ಈ ದೇಶದ ಎಲ್ಲ ಸಮಸ್ಯೆಗಳಿಗೆ ಪರಿಹಾರ ದೊರಕಿಸಿಕೊಡಲು ತಟ್ಟನೆ ಒಂದು ಮಾರ್ಗ ಕಂಡುಬಿಟ್ಟಿತು.

ಗುಡಿ ಮಸೀದಿ ಇಗರ್ಜಿಗಳಲ್ಲಿ ಪೂಜಾರಿ ಮೌಲ್ವಿ ಪಾದರಿಗಳು ಗಲ್ಲಕ್ಕೆ ಕೈಕೊಟ್ಟು ಕುಳಿತರು.

ಶಾಲೆ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಅಂಗೈಮೇಲೆ ಗಡ್ಡ ಊರಿದರು.

ಸರಕಾರಿ ಕಛೇರಿಗಳಲ್ಲಿ ಅಧಿಕಾರಿ ನೌಕರರೂ ಹೀಗೇ ಕುಳಿತರು ಆಸ್ಪತ್ರೆಯ ಸಿಬ್ಬಂದಿ, ಬ್ಯಾಂಕಿನ ಸಿಬ್ಬಂದಿ, ರೈಲು, ಬಸ್ಸು, ವಿಮಾನದ ಚಾಲಕರು, ಸೇನೆ, ಪೋಲೀಸರು, ಕೊನೆಗೆ ಅಡಿಗೆ ಮಾಡುವವರು, ಬೀದಿ ಗುಡಿಸುವವರು, ನೀರು ಬಿಡುವವರು ಎಲ್ಲರೂ ಹೀಗೇ ಕುಳಿತಾಗ...

ಆ ಜಗನ್ನಿಯಾಮಕನಾದ ಪರಮಾತ್ಮನು ಈ ದೇಶದ ಸಕಲ ಜನರ ತಪಸ್ಸಿಗೆ ಮೆಚ್ಚಿದವನಾಗಿ ಗಾಂಧೀಜಿ ಬಯಸಿದ ರಾಮರಾಜ್ಯವು ಇಲ್ಲಿ ಉದಯವಾಗಲಿ ಎಂದು ಹರಸಿದನು. ಎಂಬಲ್ಲಿಗೆ ಈ ಪುಣ್ಯ ಕತೆಯು ಮುಕ್ತಾಯವಾಗುತ್ತದೆ.

---



ಗೋಳಿನ ಜೀವನಾನ ಪುನಃ ಬೆಳಗ್ಗೆ ಎಷ್ಟು ಹೊತ್ತಿಗೆ ಪ್ರಾರಂಭಿಸ್ತೀಯಾ?

– ಪಂಚ್ ಕೃಪೆ

# ಕಂಪ್ಯೂಟರ್ ಮೆಡಿಸನ್

-ಡಾ|| ಪ್ರಕಾಶ್

ನಂ ದೇಶದಲ್ಲಿ, ವೈದ್ಯರು ಕೆಲಸ ಮಾಡೋದು ಸಾಮಾನ್ಯವಾಗಿ ಸ್ಟಾಂಡರ್ಡೈಸ್ಡ್ ರೀತಿ. ರೋಗೀನ ಪ್ರಶ್ನೆ ಕೇಳೋದು, ಅವನ(ಳ) ಉತ್ತರಗಳನ್ನು ಕೇಳಿ, ಒಂದು ಸುಮಾರು ಡಯಾಗ್ನೋಸಿಸ್‌ಗೆ ಬರೋದು. ನಂತರ, ರೋಗೀನ ಪರೀಕ್ಷೆ ಮಾಡಿ, ಅವನನ್ನ ಲ್ಯಾಬ್/ಎಕ್ಸ್‌ರೇಗಳಿಗೆ ಕಳಿಸಿ, ಫೈನಲ್ ಡಯಾಗ್ನೋಸಿಸ್ ಮಾಡಿ, ಚಿಕಿತ್ಸೆ ಶುರು ಮಾಡೋದು. ಇದೇ ಬಹು ವರ್ಷಗಳಿಂದ ಬಂದಿರೋ ಪದ್ಧತಿ. ಮೊನ್ನೆ ನನ್ ಖಾಸಾ ಗೆಳೆಯ ಚಂದು ಅಮೆರಿಕಾದಿಂದ ಬಂದಿದ್ದ, ರಜಕ್ಕೆ. ಅವನು ಕಂಪ್ಯೂಟರ್ ಕಂಪೆನಿಯಲ್ಲಿ ಸಾಫ್ಟ್‌ವೇರ್ ತಜ್ಞ. ಮೈಸೂರಿನಲ್ಲಿ ಮೆಡಿಕಲ್ ಡಿಗ್ರಿ ಪಡೆದಿದ್ರೂ, ಅಮೆರಿಕದಲ್ಲಿ ತನ್ನ ವೃತ್ತೀನೆ ಬದಲಾಯಿಸಿಬಿಟ್ಟಿದ್ದ.

''ಇದೇನೋ, ನೀವಿನ್ನೂ ಕಂದಾಚಾರದ ಪದ್ಧತಿ ಉಪಯೋಗಿಸ್ತ ಇದೀರ? ನಾನೊಂದು ಸಿಸ್ಟಂ ತಯಾರು ಮಾಡಿದೀನಿ! ಅದು ಬಹಳ ಯೂಸರ್ ಫ್ರೆಂಡ್ಲಿ! ಒಂದು ನಿಮಿಷದಲ್ಲಿ ಡಯಾಗ್ನೋಸಿಸ್ ಗೊತ್ತಾಗುತ್ತೆ! ಒಂದು ಸ್ಯಾಂಪಲ್ ತಂದಿದೀನಿ, ಆದರೆ ಯಾರಿಗೂ ಹೇಳಬೇಡ; ಇದಿನ್ನೂ ಪೇಟೆಂಟ್ ಆಗಿಲ್ಲ'' ಅಂತ ಒಂದು ಮೂರುವರೆ ಅಂಗುಲದ ಫ್ಲಾಪಿನ ನನ್ ಪಾಪಿ ಕೈಗಳಿಗೆ ಕೊಟ್ಟ. ನನಗೋ ಸ್ವರ್ಗಕ್ಕೆ ಮೂರೇ ಫ್ಲಾಪಿ, ಅಲ್ಲ ಗೇಣು! 'ನಾಳೇನೇ ಇದನ್ನ ಉಪಯೋಗಿಸಿ ನೋಡ್ತೀನಿ ಕಣೋ! ರಿಸಲ್ಟು ನಿನಗೆ ಹೇಳ್ತೀನಿ' ಅಂದೆ. 'ಇಲ್ಲ ಕಣೋ, ನಾನೂ ನಿನ್ ಜತೇಲೇ ಕೂತ್ಕೊಂಡು, ಈ ಸಿಸ್ಟಂ ಹೇಗಿದೆ ಅಂತ ನೋಡ್ತೀನಿ!' ಅಂದ, ಚಂದು. 'ಸರಿ!' ಅಂದೆ.

ಮರುದಿನ ಸಂಜೆ, ನಾಲ್ಕು ಗಂಟೆ. ನಾನೂ, ಚಂದು ನನ್ ಆಫೀಸಲ್ಲಿ ಕೂತಿದ್ವಿ, ಕಂಪ್ಯೂಟರ್ ಜತೇಲಿ, ರೆಡಿಯಾಗಿ. ಮೊದಲ ಪೇಶೆಂಟು, ಭಾರೀ ಗಾತ್ರದ ಐವತ್ತು ವರ್ಷದ ಮಹಿಳೆ. ಡಯಟ್ ಅನ್ನೋ ಪದದ ಸ್ಪೆಲಿಂಗೂ ಪಾಪ ಅವರಿಗೆ ಗೊತ್ತಿರಲಿಲ್ಲ! ನಾನು, ರೋಗಿ ಹೆಸರು, ವಯಸ್ಸು, ಅಡ್ರೆಸ್ ಇತ್ಯಾದಿ ಎಂಟರ್‌ಮಾಡಿ, 'ನಿಮಗೇನು ತೊಂದರೆ?' ಅಂದೆ. ಆಕೆ. ಮುಖದಲ್ಲಿ ವೇದನೆ ತೋರಿಸುತ್ತಾ, ಬಲಗೈಯಲ್ಲಿ ತನ್ನ ಉದರ (ಬಹು ಗಾತ್ರದ)ದ ಮೇಲೆಲ್ಲಾ ಕೈಯಾಡಿಸುತ್ತ, 'ಇಲ್ಲೆಲ್ಲ ಸಂಕಟ ಡಾಕ್ಟರೇ!' ಅಂದಳು. ನಾನು ತಬ್ಬಿಬ್ಬಾದೆ. ಸಂಕಟ ಅನ್ನೋ ಪದಕ್ಕೆ ಇಂಗ್ಲಿಷ್‌ನಲ್ಲಿ ಯಾರೂ (ಇನ್ನೂ) ಈಕ್ವಿಲೆಂಟ್ ತಯಾರಿಸಿಲ್ಲ! ನಾನು ಡೆಸ್ಪರೇಟಾಗಿ, 'ನೋವೇನಮ್ಮ?' ಅಂದೆ. 'ಇಲ್ಲ ಡಾಕ್ಟ್ರೆ, ನೋವು ನನಗೆ ಗೊತ್ತಿಲ್ವ, ಸಂಕಟ!' ಅಂದಳು. ನಾನು ಚಂದು ಕಡೆ ನೋಡಿ, "Dis comfort' ಅಂತ ಎಂಟರ್ ಮಾಡಲೇನೋ ಅಂದೆ. ರೋಗಿಯ ಮಗ, ಅಬ್ಜೆಕ್ಷನ್ ತೆಗೆದ. ಡಾಕ್ಟ್ರೇ, ನಂ ತಾಯಿ ಹೇಳ್ತಿರೋದು 'ಸಂಕಟ' ಅಂತ! ಸಿಂಪ್ಟಂ ರಾಂಗಾಗಿ ಅರ್ಥ ಮಾಡ್ಕೋಬಾರದಲ್ಲ!' ಅಂದ. ಟೆಂಪೊರರಿಯಾಗಿ ಕಂಪ್ಯೂಟರ್ ಆರಿಸಿ, ರೋಗೀನ ನೋಡಿ, ಔಷಧಿ ಬರೆದು ಕಳಿಸಿದೆ.

ಮುಂದಿನ ಪೇಶೆಂಟು, ಹಳ್ಳಿಯ ಭಾರೀ ರೈತನ ಮಡದಿ. ಆವಳು ತನ್ನ ಹೆಸರು ಹೇಳಿದಳು. 'ವಯಸ್ಸು?' ಅಂದ ಕೂಡಲೆ, ಅವಳು ಪತಿಯ ಕಡೆ ನೋಡುತ್ತ, ಅದೆಲ್ಲ ಯಾರು ಬರೆದಿಟ್ಟವ್ರೆ ಬುಡಿ!' ಅಂತ ನಕ್ಕಳು, ಈ ಹಾಳು ಕಂಪ್ಯೂಟರ್ರೋ, Age enter ಮಾಡೋತನಕ ಮುಂದುವರಿಯಕ್ಕೆ ಬಿಡಲ್ಲ ನಮ್ಮನ್ನ! ಅಂದಾಜು ವಯಸ್ಸು ಹಾಕಿದೆ!

ಮೂರನೇ ಪೇಶೆಂಟು ಬಂದು ಕುಳಿತ.

'ಡಾಕ್ಟರೆ, ನನ್ನ ತಲೇಲೆಲ್ಲ ಏನೋ ತುಂಬಿ, ತುಳುಕಾಡಿದ ಹಾಗಾಗುತ್ತೆ!' ಅಂದ. ಈ ತುಂಬದ ಕೊಡದ ಕತೆ ಕೇಳಿ ನಾನು ನಡುಗಿದೆ! ಈ ಸಿಂಪ್ಟಂನ ಹೇಗೆ ತರ್ಜುಮೆ ಮಾಡಲಿ? ಚಂದು ಕಡೆ ನೋಡಿದೆ. ಅವನು ತಲೆ (ತುಳುಕದಂತೆ) ಕೆಳಗೆ ಮಾಡಿಕೊಂಡು ಕುಳಿತಿದ್ದ. ಕಂಪ್ಯೂಟರ್ ಹಾಗೇ ಬಿಟ್ಟು ರೋಗೀನ ನೋಡಿ ಕಳಿಸಿದೆ.

ನಾಲ್ಕನೇ ಪೇಶೆಂಟು ಬರುಕ್ಕೆ ಮುಂಚೆ ಚಂದು 'ನಾನು ಕಾಫಿ ಕುಡಿದು ಬರ್ತೀನಿ ಅಂತ ಎದ್ದ. ನಾನು ಇಲ್ಲಿ, ಇದೊಂದು ನೋಡು, ಆಮೇಲೆ ಕಾಫಿ' ಅಂದೆ. ಒಬ್ಬ ಯುವಕ ಬಂದು ಕುಳಿತ. ಕಂಪ್ಯೂಟರ್‌ನ ನೋಡಿ ಚಕಿತನಾದ. 'ಏನ್ರೀ ನಿಮಗೆ ತೊಂದ್ರೆ?' ಅಂದೆ. 'ಡಾಕ್ಟ್ರೆ, ಒಂದು ತಿಂಗಳಿಂದ ಬೆಳಿಗ್ಗೆ ಎದ್ದ ಮೇಲೆ, ಮುಖ ಎಲ್ಲಾ ಚುಮ ಚುಮ ಅನ್ನತ್ತೆ, ಆಮೇಲೆ, ಮೈಯಲ್ಲೆಲ್ಲ ನರಗಳು ಜುಮಾ, ಜುಮಾ, ಅಂತ ಎಳೆಯುತ್ವೆ! ನನಗೆ ಹೊಟ್ಟೇಲಿ ಸಂಕಟ (ಚಂದು ಬೆಚ್ಚಿ, ಬೆವರಿದ!) ಆಗಿ, ಜೀವ ಹೋದ ಹಾಗೇ ಆಗುತ್ತೆ! ನಾನು (ಶಾಂತನಾಗಿ) ಕಂಪ್ಯೂಟರ್‌ಗೆ ಎಂಟರ್ ಮಾಡಿದೆ. "Chuma chuma on Face, All nerves pulling - Juma Juma" ಅಂತ ಬರೆದು ಎಂಟರ್ ಬಟನ್ ಒತ್ತಿದೆ! ಕಂಪ್ಯೂಟರ್ ಗರ್ಭದಿಂದ ಒಂದು ಆರ್ತನಾದ ಕೇಳಿಬಂತು. ಚಂದು ಹೌಹಾರಿದ. ಸ್ಕ್ರೀನ್ ಮೇಲೆ ಉತ್ತರ ಬಂತು. "Unknown Disease; Try Japanese Version of software!" ನಾನು ಚಂದು ಕಡೆ ನೋಡಿ, ''ಅಲ್ಲ ಕಣೋ, ಈ ಅಪದ್ಧಾನ ಜಪಾನ್‌ಗೂ ರವಾನಿಸ್ತಿದೀಯಲ್ಲೋ?'' ಅಂದೆ. ಜಪಾನಿನ ಡಾಕ್ಟರುಗಳು ಈ ಪ್ರೋಗ್ರಾಂ ಜತೆ ಸೆಣಸಾಡುವ ದಾರುಣ-ದೃಶ್ಯ ನನ್ನ ಮನಸ್ಸಿಗೆ ಬಂದು ನಾನು ಮಮ್ಮಲ ಮರುಗಿದೆ!

ಆ ಕ್ಷಣದಲ್ಲಿ ಎಂಟರ್ ಕೆ.ಇ.ಬಿ.! ಕರೆಂಟು ಹೊರಟುಹೋಯಿತು! ಚಂದು ಮುಖ ಅರಳಿತು! "UPS ಇಲ್ಲವೇನೋ' ಅಂದ. ನಾನು 'ಇಲ್ಲ, ಇಲ್ಲಿ ಬರೀ IPS!' ಅಂದೆ. ಅವನ ಹುಬ್ಬುಗಳೇರಿದವು. Interrupted Power ಅಂತ ನಕ್ಕೆ.!

ಆ ಪಾಪಿ ಫ್ಲಾಪಿ ತಗೊಂಡು ಚಂದು ಊರಿಗೆ ಹೋಗಿದಾನೆ, ಇದನ್ನೆಲ್ಲ ಯಾರಿಗೂ ಹೇಳಬೇಡ ಅಂತಿದಾನೆ. ಆದರೆ ನಾನು ದೇಶಪ್ರೇಮದಿಂದಾಗಿ ಇದನ್ನೆಲ್ಲ ಭಾರತದ ಓದುಗರಿಗೆ ಹೇಳಿದೀನಿ!

# ಸ್ವಚಲಿತ ರಥ ರಹಸ್ಯಂ

ಅ.ರಾ.ಸೇ.

(ನಾಗವರ್ಮನ ಒಂದು ಪದ್ಯದ ಅರ್ಥ)

ಶುಭಸ್ಯ ಶೀಘ್ರಂ ಎಂಬ ಆರ್ಯೋಕ್ತಿಯೂ, the sooner the better ಎಂಬ ಮ್ಲೇಚ್ಛೋಕ್ತಿಯೂ ಈ ಲೇಖನವನ್ನು ಬರೆಯಲು ಕಾರಣವೆಂದರೆ ನಮಗೆ ಯಾವ ರೀತಿಯ ಕಳಂಕವೂ ತಟ್ಟದು. ಏಕೆಂದರೆ ಐನ್‌ಸ್ಟೀನ್, ನಾವು ಇಂತಹವರು ಸ್ವಪ್ರತಿಭೆಯಿಂದ ಸಂಶೋಧನೆ ಮಾಡುವವರೇ ಹೊರತು, ಸಂಶೋಧನೆಯ ಹೆಸರಿನಲ್ಲಿ ಅಪ್ರಸ್ತುತ ವಿಚಾರಗಳನ್ನು ಕೆದಕಿ, ಜನತೆಯನ್ನು ಗಾಸಿ ಪಡಿಸುವವರಲ್ಲ. ಐನ್‌ಸ್ಟೀನ್‌ರ ಬಾಯಿ ಹೇಗೋ ಅರಿಯೆವು. ಆದರೆ ನಮ್ಮ ಬಾಯಿ ಬೊಂಬಾಯಿಯಾದುದರಿಂದ, ಕಾಲ ದೇಶ ವರ್ತಮಾನ ಶ್ರೋತೃಗಳು ಮೊದಲಾದವರನ್ನು ಗಮನಿಸದೆ ಮಾತನ್ನು ಆಡುತ್ತಿರುತ್ತೇವೆ. ಅದರ ತುಣುಕುಗಳನ್ನು ಕದ್ದು ನಮ್ಮದೇ ಈ ಸಂಶೋಧನೆ ಎಂದು ಮೀಸೆ ತಿರುವುವವರು ಬಹಳ.

ನಮ್ಮ ಶಾಸ್ತ್ರಿಗಳನ್ನೇ ತೆಗೆದುಕೊಳ್ಳಿ. ಅವರದು ಆಳವಾದ ವ್ಯಕ್ತಿತ್ವ. ಅವರ ಜುಬ್ಬದ ಜೋಬೂ ವ್ಯಕ್ತಿತ್ವದಷ್ಟೇ ಆಳವಾದದ್ದು ಅದರ ತಳದಲ್ಲಿ ಹತ್ತರಿಂದ ಐದುನೂರರವರೆಗಿನ ನೋಟುಗಳು ಅಡಗಿರುತ್ತವೆಯೆಂಬುದು ನಮ್ಮ ಗುಮಾನಿ. ಅವರ ತಲೆಯಲ್ಲಿ ಅಮೂಲ್ಯವಾದ ನೆನಪುಗಳು, ಅಳಲುಗಳು, ಹತಾಶೆಗಳು, ನಿರ್ಲಿಪ್ತತೆ ಇತ್ಯಾದಿಗಳು ಅಡಗಿರಲೇ ಬೇಕು.

ಅವರು 'ಆರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂಬುದನ್ನು ಕರಿತು ಸಂಶೋಧನೆ ಮಾಡಿ ಆರು ಎಂದರೆ ಹಲಸು, ಅಂಕುಸಮಿಟ್ಟೊಡೆ ಎಂದರೆ ಹೂಬಿಟ್ಟರೆ, ಆಗ ನನ್ನ (ಪಂಪನ) ಮನಂ ಎಂದರೆ ಮನಸ್ಸು ಬನವಾಸಿ ದೇಶವನ್ನು ನೆನೆಸುತ್ತದೆ ಅಂತ ಭಾಷಣ ಬಿಗಿದರು. ಅಲ್ಲಿದ್ದವರೊಬ್ಬರು ಹೋಗಿ ಅದು ನನ್ನದೇ ಸಂಶೋಧನೆ ಅಂತ ಲೇಖನ ಬರೆದರಂತೆ. ನನ್ನನ್ನು ಕೇಳಿದರೆ ಪಂಪ ಅಂಕುಶದಿಂದ ತಿವಿಸಿಕೊಳ್ಳುವಂತಹ ಕೆಲಸಮಾಡಿರ ಬೇಕು ಅಂತ ಹೇಳುತ್ತೇನೆ. ಪಂಪ ತನ್ನ ನೆನಪುಗಳನ್ನು ಬರೆದಿಡಲಿಲ್ಲ. ಹೋಗಿ ಕಾವ್ಯ ಗೀವ್ಯ ಅಂತ ಬರೆದುಬಿಟ್ಟ. ಶಾಸ್ತ್ರಿಗಳು ನಿರ್ಲಿಪ್ತರಾದರೂ ಈ ಘಟನೆಯಿಂದ ಅವರ ಮನಸ್ಸು ಘಾಸಿಗೊಂಡಿದೆ. ಅದಕ್ಕೇ ಅದಕ್ಕೇನೇಯೇ, ನಾವು ಸಂಶೋಧನೆ ಮಾಡದಿದ್ದನ್ನು ಕೂಡಲೇ ಬರೆದು ಬಿಡುತ್ತೇವೆ. ಹೊಗಳಿಕೆ ಉಗುಳಿಕೆಗಳು ನಮ್ಮ ಲೆಕ್ಕಕ್ಕಿಲ್ಲ. ನಾಯಕನಂತೆ, ಈ ಯೊಂದು (ಈ ಒಂದು) ವಿಷಯದಲ್ಲಿ ನಾವು ನಿರ್ಲಿಪ್ತರು. ಉಗಿಯುವವರು ಉಗಿಯಲಿ; ನಮ್ಮ ಸಂಶೋಧನೆ ತಪ್ಪೆಂದು ತೋರಿಸಲಿ.

ಅರ್ವಾಚೀನ ಸಾಹಿತಿಗಳನ್ನು ಕುರಿತು ಬರೆ ಎಂಬ ಒತ್ತಾಯ ನಮ್ಮ ಮೇಲೆ

ಬಂದಿದೆ. ಅದಕ್ಕಾಗಿ ಒಬ್ಬ ಖ್ಯಾತ ಕವಿಗಳ ಒಪ್ಪಿಗೆ ಕೇಳಿದೆವು. ಅವರು ಏಕ್ದಂ ಗಾಬರಿಯಾಗಿ ಬೇಡ ಬೇಡ ಎಂದು ತೊದಲಿದರು ಈಗ ಅದು ಅಗತ್ಯವಿಲ್ಲ. ಲೇಖಕರೇ ಒಬ್ಬರ ಮೇಲೊಬ್ಬರು ಜಾತಿಯನ್ನು ಹೆಸರಿಸಿ ಧೂಳು ರಾಡಿ ಎರಚುತ್ತಿದ್ದಾರೆ. ಅಲ್ಲದೆ ಈಗ ಲೇಖಕರೆಂದರೆ ಮೊದಲಿನಷ್ಟು ವಜನ್ ಇಲ್ಲ. ಇದು ಸಬ್ಸಿಡಿ ಯುಗ ನಮ್ಮ ಪೂರ್ವ ಸೂರಿಗಳ ಹಿರಿಮೆ, ಗರಿಮೆ, ಮಾನವೀಯ ದೌರ್ಬಲ್ಯಗಳೇ ನಮಗೆ ಹೆಚ್ಚು ಪ್ರಿಯ.

ಸಾಲ್ಗುಮೀ ಪೀಠಿಕಾ ಪ್ರಸಂಗಂ

ಈ ಹಿಂದೆ ನಾವು 'ನಾಗವರ್ಮನ ಮರಣ' ಎಂಬ ಲೇಖನ ವೊಂದನ್ನು ಬರೆದಿದ್ದೆವು..[1]

ಅದರಲ್ಲಿ, 'ಅರಸಂ ರಕ್ಕಸ ಗಂಗಂ....'

'ಗುರುವೊಂದಾರಿಯೊಳುತ್ಪಲಂ' ಎಂಬ ಪದ್ಯಗಳು ಈಗ ನಾಗವರ್ಮನ ಛಂದೋಂಬುಧಿಯಲ್ಲಿದ್ದರೂ, ಅವು ಆ ಗ್ರಂಥದ ಪದ್ಯಗಳಲ್ಲ. ನಾಗವರ್ಮನು ಬರೆದ 'ಸ್ವಚಲಿತರಥ ರಹಸ್ಯಂ' ಎಂಬ ಪುಸ್ತಕದ ಪದ್ಯಗಳು ಎಂದು ಸಂಶಯಕ್ಕೆಡೆಯಿಲ್ಲದಂತೆ ನಿರ್ಧರಿಸಿದ್ದೆವು. (ನೋಡಿ-ಪರಿಶಿಷ್ಟ 1). ಈ ವಿಷಯದಲ್ಲಿ ಸಂಶೋಧಕರಾರೂ ಯತ್ನ ಮಾಡಲಿಲ್ಲ. ನಾವೂ ಮರೆತಿದ್ದೆವು.

ಇತ್ತೀಚೆಗೆ ಒಂದು ಸಭೆಗೆ ಹೋದೆವು. ಅಲ್ಲಿಂದ ಬರುವ ವೇಳೆಗೆ ಬಸ್ಸಿರಲಿಲ್ಲ. ಸಭೆಯಲ್ಲಿ ನಮಗೆ ಕೊಟ್ಟ ನೆನಪಿನ ಕಾಣಿಕೆ ಒಂದು ಪುಸ್ತಕ. ಅದನ್ನು ಆವರಿಸಿದ್ದ ಹೊದಿಕೆಯನ್ನು ಹರಿದು ಪುಸ್ತಕ ತೆಗೆದೆವು.[2]

ಆದರಲ್ಲೊಂದು ಪದ್ಯ ಕಾಣಬಂತು.

ಅದನ್ನು ಕುರಿತು ಬರೆಯುವ ಮೊದಲು, ಆ ಗ್ರಂಥಕರ್ತರ ಬಗೆಗೆ ಎರಡು ಮಾತು.

ಅವರ ಮನೆಯಲ್ಲಿ ಟಿವಿ ಇದೆಯೋ ಇಲ್ಲವೋ? ಇದ್ದರೂ ಅದಕ್ಕೆ ಕೇಬಲ್ ಕನೆಕ್ಷನ್ ಕೊಡಿಸಿಲ್ಲ. ಕೊಡಿಸಿದ್ದರೂ ಲೇಖಕರು ಅದನ್ನು ನೋಡುತ್ತಿಲ್ಲ 'ಹೊತ್ತು ಹೋಗುವುದೆನಗೆ ಸತ್ತವರ ಸಂಗದಲ್ಲಿ' ಎನ್ನುತ್ತಾ, ಹಳೆಗನ್ನಡ ಕಾವ್ಯಗಳನ್ನೋದುವುದು, ಅವಕ್ಕೆ ಪಾದ, ಅರ್ಥನಿರ್ಣಯಿಸುವುದು ಮೊದಲಾದವುಗಳಲ್ಲಿ ತೊಡಗಿದ್ದಾರೆ. Completely hide bound. ಅವರಿಗೆ ನಮ್ಮ ನಮನಗಳು, ಗೌರವಗಳು, ಅಭಿನಂದನೆಗಳು, ಥ್ಯಾಂಕ್ಸ್, ವಾಟ್‌ನಾಟು! a thousand pities!

---

1. ಇದು ಕೊರವಂಜಿ ಸಂ? ಸಂ? ಯಲ್ಲಿ ಪ್ರಕಟವಾಗಿತ್ತು. ಇದು ಮುಗಿಲುಹಳ್ಳಿ ಬಖೈರು ಎಂಬ ನಮ್ಮ ಉದ್ಗ್ರಂಥದಲ್ಲಿ ಸಂಕಲಿತವಾಗಿತ್ತು. ಸದರಿ ಗ್ರಂಥದ ಪ್ರತಿಗಳು ಬುಕ್‌ಸ್ಟಾಲಿನಲ್ಲಿ ಬೇಡ, ನಮ್ಮ ಬಳಿಯಲ್ಲಿಯೂ ಈಗ ಸದ್ಯಕ್ಕೆ ಇಲ್ಲ.

2. ಇತ್ತೀಚೆಗೆ ಎಂದರೆ ಯಾವ ತಿಂಗಳ ಎಷ್ಟನೇ ತಾರೀಖು ಎಂದು ಕೇಳೀರಿ. ನಮಗೆ ಗೊತ್ತು. ಆದರೆ ಉತ್ತರ ಹೇಳುವುದಿಲ್ಲ. ನಮ್ಮನ್ನೇ ನಾವು ಓದುವುದಿಲ್ಲ. ಬೇರೆಯವರ ಪುಸ್ತಕ ಕೊಟ್ಟರಲ್ಲಾ, ಭಲೇ!

ಆ ಪದ್ಯ ಹೀಗಿದೆ:

**ಶ್ವಸನೇಂದುಜ್ವಲನಂ ದಿವಂಧರೆ ಜಲಂ ದೈತ್ಯಾರಿ ಕಾಮಾಂತಕ**
**ಪ್ರಸಾರೋದ್ಯದ್ಗಣದಿಂ ತ್ರಯೋದಶಯತಿ ಪ್ರಸ್ತಾರ ಮಾಗಿರ್ದೊಡೀ**
**ವಸುಧಾಚಕ್ರದೊಳೊಲ್ದು ಸಂದುದುಕರಂ ಮತ್ತೇಭವಿಕ್ರೀಡಿತಂ**
**ಪೆಸರಾಯ್ತಿಂತಿದು ನಾಗವರ್ಮ ಕವಿಯಿಂ ವ್ಯಾಲೋಲ ನೀಲಾಲಕೇ**

(ನೋಡಿ-ಪರಿಶಿಷ್ಟ 4)

ಸ್ವಾಮಿನಃ, ಈಗಿನ ಪದ್ಯಗಳನ್ನೋದಿದ ನಿಮಗೆ ಇದೇನು ಚಕ್ರಬಂಧವ್ರೋ, ಕಗ್ಗಂಟೋ, ತಲೆಸಿಡಿತವೋ ಎನ್ನಿಸಬಹುದು. ಹಾಗಲ್ಲ. ಇಂತಹ ಪದ್ಯ ಬರೆದ ಪೂರ್ವ ಸೂರಿಗಳಲ್ಲಿ ಒಬ್ಬೊಬ್ಬನೂ ಒಂದು ವಿಸ್ಮಯ. ಅವರನ್ನು ನೋಡಿದವರು ಓ ಮೈ ಬ್ಲೆಸೆಡ್ ಆಂಟ್ revered be thy name what a boy! he lives some! ಎಂದು ಉದ್ಗರಿಸುತ್ತಿದ್ದರು. ಅವರು ಪ್ರೆಸೆಂಟ್ ಟೆನ್ಸಿನಲ್ಲಿ ಹೇಳುತ್ತಿದ್ದ ಮಾತುಗಳನ್ನು ಪಾಸ್ಟ್ ಟೆನ್ಸಿನಲ್ಲಿ ಹೇಳುವುದಾದರೆ

Those were the times! ಕಾಲ ಎಂದರೆ ಅದು.

ಇರಲಿ, ಈ ಪದ್ಯದ ಕೊನೆಯ ಭಾಗದ ಅರ್ಥವನ್ನು ನೋಡೋಣ. ಇದು ಕರಂ, ಮತ್ತೆ ಭವಿಕ್ರೀಡಿತಂ. ನಾಗವರ್ಮ ಕವಿಯಿಂದ ಇಂತು ಪೆಸರಾಯ್ತು.

ಈಗಿನ ಮಾತಿನಲ್ಲಿ ಹೇಳಿದರೆ

ಇದೇ ಮತ್ತೇ ಭವಿಕ್ರೀಡಿತಂ. ನಾಗವರ್ಮ ಕವಿಯಿಂದ ಹೀಗೆ ಪ್ರಸಿದ್ಧವಾಯಿತು.

ಹರಹರಾ ಶ್ರೀ ಚೆನ್ನ ಸೋಮೇಶ್ವರಾ ಎನ್ನುವುದನ್ನು ಬಲ್ಲವರೆಲ್ಲರೂ ಮತ್ತೇ ಭವಿಕ್ರೀಡಿತ ವೆನ್ನುವುದು ಒಂದು ವೃತ್ತವೆಂದೂ, ಈಗಿನವರ ಹಾಗೆ ಛಂದಸ್ಸು ಪ್ರಾಸಗಳನ್ನು ನಿಭಾಯಿಸಲು ಬಾರದಿದ್ದವರು ಗಪದ್ಯವನ್ನೋ ಪಗದ್ಯವನ್ನೋ ಬರೆದರೆ, ಆಗ, 'Those were the times' ಎನ್ನುವ ಕಾಲದಲ್ಲಿ, ಅವರಿಗೆ ಕಾವ್ಯರಂಗದಲ್ಲಿ, ಉಳಿಗಾಲ ವಿರಲಿ ಪ್ರವೇಶವೇ ಇರಲಿಲ್ಲವೆನ್ನುವುದನ್ನು ಬಲ್ಲರು. ಮತ್ತೇ ಭವಿಕ್ರೀಡಿತ ವೃತ್ತವನ್ನು ಕುರಿತು ಹೇಳುವುದರಿಂದ, ಇದು ಛಂದೋಂಬುಧಿಯ ಪದ್ಯವೆಂದು ಪಂಡಿತರು ಭ್ರಮಿಸಿದ್ದಾರೆ. ಅದು ತಪ್ಪು, ಈ ಪದ್ಯವು ಸ್ವಚಲಿತ ರಥರಹಸ್ಯವೆಂಬ ತಾಂತ್ರಿಕ ಕಾವ್ಯದ ಒಂದು ಪದ್ಯ.

ಈ ಪದ್ಯದ ವಿಷಯವಾಗಿಯೇ ಈ ಲೇಖನ. ಇದನ್ನು ನಾಗವರ್ಮನು ವ್ಯಾಲೋಲ ನೀಲಾಲಕೇ ಎನ್ನುವವಳಿಗೆ ಹೇಳಿದ್ದಾರೆ.

1. ಅರಸನು ರಕ್ಕಸಗಂಗ, ಗುರುಗಳು ಅಜಿತಸೇನ ದೇವರು, ಕಾಪಾಡುವವನು ಅಣ್ಣ, ಅಂಥಿಂಥವನಲ್ಲ ರಾಜಾ! ಆದುದರಿಂದ ನಾಕಿಗ ನೆಂದರೆ ನಾಗವರ್ಮನ ಕಡೆ ಯಾರೂ ಬೆಟ್ಟು ತೋರಿಸುವಂತಿಲ್ಲ.

2. ಡ್ರೈವರೊಬ್ಬನೇ ಇದ್ದರೆ ಬಸ್ಸು ಉತ್ಪಲ ಮಾಲೆಯಂತೆ ಸಲೀಸಾಗಿ ಹೋಗುತ್ತದೆ. ಡ್ರೈವರನ ಪಕ್ಕದಲ್ಲಿಬ್ಬರು ಪ್ರಯಾಣಿಕರಿದ್ದರೆ ಬಸ್ಸು ಹುಲಿಯಂತೆ ಹಾರುತ್ತದೆ, ಡ್ರೈವರು ಕಂಡಕ್ಟರನ್ನೋ ಡ್ರೈವ್ ಮಾಡುವ ಕಂಡಕ್ಟರು ಕ್ಲೀನರನ್ನೋ ಕೂಡಿಸಿಕೊಂಡು ಬಸ್ ಬಿಟ್ಟರೆ ಅದು ನೆಟ್ಟಗೆ ಹೋಗದೆ ತನಗೆ ಹಾಕಿರುವ ಹೂಮಾಲೆಯಂತೆ ಅರ್ಧ ಚಂದ್ರಾಕೃತಿಯಲ್ಲಿ ಚಲಿಸುತ್ತದೆ. ಹಿಂದುಗಡೆ ಎರಡು ಡಬಲ್ ಟೈರುಗಳು ಮುಂದೆರಡು ಸಿಂಗಲ್ ಟೈರು ಇದ್ದರೆ ಮದ್ದಾನೆಯಂತೆ ಗಂಭೀರವಾಗಿ ಬಸ್ಸು ಚಲಿಸುತ್ತದೆ. ಸಿಂಗಲ್ ಟೈರುಗಳೆರಡು, ಡಬಲ್ ಟೈರುಗಳೆರಡು ಒಂದು ಸ್ಟೆಪ್ನಿ ಇದ್ದರೆ ದೊಡ್ಡ ಹೂಮಾಲೆ ಧರಿಸಿದಂತೆ ಯಶಸ್ವಿಯಾಗಿ ಚಲಿಸುತ್ತದೆ. ಆದರೆ ಮುಂದೆರೆಡು ಟೈರು ಹಿಂದೆರಡು ಟೈರು, ಒಂದೇ ಪಂಕ್ಚ್ಚರ್ ತಿದ್ದದ ಸ್ಟೆಪ್ನಿ ಇದ್ದರೆ, ಬೆದರಿದ ಜಿಂಕೆಯಂತೆ ಬಸ್ಸು ಚಲಿಸುತ್ತದೆ. (ನೋಡಿ ಪರಿಶಿಷ್ಟ 3)

ಇದು ನಾವು ಹಿಂದೆ ಉದ್ಧರಿಸಿದ ಅರಸಂರಕ್ಕಸಗಂಗಂ ಗುರುವೊಂದಾದಿಯೊಳುತ್ಪಲಂ.... ಇತ್ಯಾದಿ ಪದ್ಯಗಳ ಸಾರಾಂಶ.

ಇದರಿಂದ ಮಥಿತಾಂಶಗಳು ಇವು.

ಫೋರ್ಡನಿಗಿಂತ ಸುಮಾರು ಒಂದು ಸಾವಿರ ವರ್ಷಗಳಿಗೆ ಮೊದಲೇ ಆಟೋಮೊಬೈಲುಗಳೂ (ಎಂದರೆ ಬಸ್ಸು, ಕಾರುಗಳೂ), ಡನಲಪ್ಪನಿಗಿಂತ ಎಷ್ಟೋ ನೂರು ವರ್ಷಗಳ ಹಿಂದೆ ಟೈರು ಟ್ಯೂಬುಗಳನ್ನು ಕನ್ನಡಿಗರು ಕಂಡುಹಿಡಿದಿದ್ದರು.

ಈಗ ಲೇಖನದ ಮೊದಲಿನಲ್ಲಿ ಉದ್ಧರಿಸಿದ ಪದ್ಯದ ಅರ್ಥವನ್ನು ಯಥಾಮತಿಯಾಗಿ ಪರಿಶೀಲಿಸುತ್ತೇವೆ.

ಶ್ವಸನೇಂದು ಜ್ವಲನಂ - ಉಸಿರು ಬಿಟ್ಟದು ಬೆಳದಿಂಗಳಂತೆ ತಣ್ಣಗೆ ಕಂಡರೂ ಬಿಸಿ ಬಿಸಿಯಾಗಿದ್ದುದು (ಎಂದರೆ ಬಸ್ಸು ಬಿಟ್ಟ ಬಿಸಿಯ ಕರಿಯ ಹೊಗೆ) ದಿವಂ - ಸ್ವರ್ಗ, ಧರೆ - ಭೂಮಿ, ಜಲಂ - ಕೆರೆಕೊಳಗಳ ನೀರು, ದೈತ್ಯಾರಿ - ವಿಷ್ಣು, ಕಾಮಾಂತಕ = ಶಿವ ಮೂರು ಲೋಕಗಳು ಪಂಚ ಮಹಾ ಭೂತಗಳಲ್ಲದೆ ಹರಿಹರರನ್ನೂ ಎಂದರೆ ವೈಕುಂಠ ಕೈಲಾಸಗಳನ್ನು ಆವರಿಸುತ್ತಿತ್ತು. ಅಲ್ಲದೆ ಇದು (ಈ ಹೊಗೆಯು) ತ್ರಯೋದಶಯತಿ ಪ್ರಸ್ತಾರವಾಗಿದ್ದರೆ ಅದು ಮತ್ತೇಭವಿಕ್ರೀಡಿತ.

ಇಲ್ಲಿ ಈ ಸಂಶಯವುಂಟಾಗುತ್ತದೆ. ಬಸ್ಸು ತ್ರಯೋದಶಯತಿ ಪ್ರಸ್ತಾರವಾಗಿರ್ದೊಡೆ ಎನ್ನುವಲ್ಲಿ ತ್ರಯೋಶಯತಿಗಳು ಯಾರು? ಪ್ರಸ್ತಾರ ಎಂದರೇನು?

ತ್ರಯೋದಶಯತಿ ಎಂದರೆ ಹದಿಮೂರು ಯತಿಗಳು. ಪ್ರಸ್ತಾರ ಎನ್ನುವುದಕ್ಕೆ ಐದು ಅರ್ಥಗಳಿವೆ.

1. ಹರಡುವುದು, ವ್ಯಾಪಿಸುವುದು ಎನ್ನುವುದು ಒಂದರ್ಥ. ಹದಿಮೂರು ಯತಿಗಳ ಮೂಗನ್ನೋ, ಆಶ್ರಮಗಳನ್ನೋ ಶ್ವಸನೇಂದು ಜ್ವಲನಂ ಎಂದರೆ ಎಕ್ಸ್‌ಹಾಸ್ಟ್

ಫ್ಯೂಮ್ಸ್ ವ್ಯಾಪಿಸುತ್ತಿದ್ದವು ಹರಡುತ್ತಿದ್ದವು ಎಂದು ಹೇಳಬಹುದು.

2. ಪ್ರಸ್ತಾರ ಎಂದರೆ ಕಾಡು, ಬಸ್ಸಿನ ಹೊಗೆ ವ್ಯಾಪಿಸಿದರೆ ಯತಿಗಳ ಕಣ್ಣು ದಟ್ಟವಾದ ಕಾಡುಗಳಲ್ಲಿನ ಕಗ್ಗತ್ತಲೆಯಲ್ಲಿ ಆಗುವಂತೆ ಆಗಿ ಏನೂ ಕಾಣಿಸುತ್ತಿರಲಿಲ್ಲ.

3. ಪ್ರಸ್ತಾರ = ಒಂದು ವಸ್ತುವಿನ ಸಮತಲವಾಗಿರುವ ಮೇಲ್ಮೈ, ಹದಿಮೂರು ಯತಿಗಳೂ, ಹೊಗೆ ಬಂದ ಜೋರಿಗೆ ಬೋರಲು ಅಥವಾ ಅಂಗಾತ ಬೀಳುತ್ತಿದ್ದರು.

4. ಪ್ರಸ್ತಾರವೆಂದರೆ ಹಾಸಿಗೆ. ಮೆತ್ತನೆಯ ಹಾಸಿಗೆ ಎಂದರೆ ಆ ಹದಿಮೂರು ಜನ ಯತಿಗಳೂ ಆಸ್ಪತ್ರೆಯ ಹಾಸಿಗೆ ಸೇರುತ್ತಿದ್ದರು.

5. ಪ್ರಸ್ತಾರವೆಂದರೆ ಛಂದಃ ಶಾಸ್ತ್ರಗಳಲ್ಲಿ ವೃತ್ತ ಪ್ರಭೇಧಗಳನ್ನು ತಿಳಿಸುವ ಒಂದು ಉಪಾಯ

ವಿದ್ವಾಂಸರು ಈ ಅರ್ಥವನ್ನೇ ಸ್ವೀಕರಿಸಿ ಈ ಪದ್ಯವನ್ನು ಛಂದೋಂಬುಧಿಗೆ ಸೇರಿಸಿದರು.[1]

ಈಗ ಉಳಿದದ್ದು ವ್ಯಾಲೋಲ ನೀಲಾಲಕೆಯ ವಿಷಯ[2]

ಪಂಚಮಹಾಭೂತಗಳನ್ನು, ಹರಿಹರ, ವೈಕುಂಠ ಕೈಲಾಸಗಳನ್ನು ಹದಿಮೂರು ಜನ ಸರ್ವಸಂಗ ಪರಿತ್ಯಾಗಿಗಳನ್ನು ಕಂಗೆಡಿಸುವ ಹೊಗೆಯನ್ನು ಬಿಡುವ ತನ್ನ ಬಸ್ಸಿನ ಬಗ್ಗೆ ಕವಿಯಿಟ್ಟಿರುವ ಅಭಿಮಾನ ಶ್ಲಾಘ್ಯವಾದದ್ದು. ವ್ಯಾಲೋಲ ನೀಲಾಲಕೆಗೆ ಆ ಹೊಗೆಯ ಪ್ರಭಾವವನ್ನು ವರ್ಣಿಸುವುದರಲ್ಲಿ ಕವಿಗೆ ಕಿಂಚಿತ್ತೂ ಭೀತಿಯಿಲ್ಲ.

ಈ ಶಬ್ದಕ್ಕೆ ಹಾವಿನಂತೆ ಡೊಂಕು ಡೊಂಕಾಗಿ ಹಾರಾಡುತ್ತಿದ್ದ ಕಪ್ಪಾದ ಮುಂಗುರುಳುಗಳನ್ನುಳ್ಳವಳು ಎಂದು ಅರ್ಥ. ತಮ್ಮ ನಲ್ಲೆಯರನ್ನು ಡಾರ್ಲಿಂಗ್, ಡಿಯರ್ ಎನ್ನುವ ಈಗಿನದದ್ದರನ್ನು ಏನೆನ್ನೋಣ!

ಇವಳಿಗೇಕೆ ನಾಗವರ್ಮನು ಈ ಆಟೋಮೊಬೈಲ್ ಎಂಜಿನಿಯರಿಂಗ್ ವಿಷಯ ಹೇಳಿದ. ಅವಳಾದರೂ ಅದನ್ನು ಏಕೆ ಹೇಗೆ ಸಹಿಸಿದಳು ಎಂಬುದು ಸಹೃದಯರಿಗೆ ತಿಳಿಯುವುದರಿಂದ ವಿವರಿಸ ಬೇಕಲಿಲ್ಲ. ಆದರೂ 'ಪ್ರೇಮ' ಎಂದು ಹೇಳುತ್ತೇವೆ.

ತನ್ನ ಬಸ್ಸು ನಿಶ್ವಸಿಸುವ ಹೊಗೆಯ ಒಗೆಗೆ ಕವಿಗೆ ಹೆಮ್ಮೆಯಿದೆ.

ಅಂದ ಹಾಗೆ, ಈ ವ್ಯಾಲೋಲ ನೀಲಾಲಕೆಯ ಹೆಸರನ್ನು ನಾವು ಹೇಳ ಬಲ್ಲೆವು.

ವ್ಯಾಲ ಎನ್ನುವುದು ಬ್ಯಾಲ ಎನ್ನುವುದರ ಇನ್ನೊಂದು ರೂಪ.[3] ಮಾತ್ರೆಗಳನ್ನು ಪೂರೈಸಲು ವಾಲವು ವ್ಯಾಲೋಲ ವಾಗಿದೆ.

---

1. ಈ ಅರ್ಥವನ್ನು ಸಾಹಿತ್ಯ ವಿದ್ವಾನ್ ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯರ ಶಬ್ದಾರ್ಥ ಕೌಸ್ತುಭ (ತುರೀಯ ಭಾಗ) ದಿಂದ ತೆಗೆದುಕೊಂಡಿದೆ.

2. ಇದೇ ಅತ್ಯಂತ ಮುಖ್ಯವಾದದ್ದು ಎಂದು ಸಮಕಾಲೀನರು ಒಪ್ಪುತ್ತಾರೆ.

3. ವಂಗ- ಭಂಗ, ವಾಲಿ- ಬಾಲಿ ಆದ ಹಾಗೆ

ನೀಲಾ - ಆ ಹುಡುಗಿಯ ಹೆಸರು ಲಕೇ ಪಾದ ಪೂರಣಕ್ಕಾಗಿ ಸೇರಿಸಿದ್ದು. ಅಥವಾ 'ಲಕೇ' ಎಂದರೆ ಲಕ್ಕಿ (ಲಕ್ಷ್ಮಿ) ಅವಳ ಹೆಸರು. ನೀಲಾ ಸೇರಿಸಿದ್ದು ಪಾದ ಪೂರಣಕ್ಕಾಗಿ ಬ್ಯಾಲಪ್ಪನ ಮಗಳು ನೀಲಾ ಅಥವಾ ಲಕ್ಕಿ. ಈ ಪದ್ಯವು ನಾಗವರ್ಮ ಕವಿಯಿಂದ ಅವಳಿಗೆ ಅರ್ಪಿತವಾಯ್ತು. ಇವಳನ್ನೇ ಕವಿಯು, 'ಗುರುವೊಂದಾನಿಯೊಳುತ್ಪಲಂ' ಎಂಬ ಪದ್ಯದಲ್ಲಿ ಪಂಕೇಜ ಪತ್ರೇಕ್ಷಣೇ ಎಂದು ಕರೆದಿದ್ದಾನೆ. ನಾಗವರ್ಮನಿಂದಲೇ ರಾಬರ್ಟ್ ಬರ್ನ್ಸ್ ಪ್ರಭಾವಿತನಾಗಿದ್ದಾನೆಂಬುದರಲ್ಲಿ ಸಂದೇಹವೇನು!

ಲಕ್ಕಿ ಎಷ್ಟು ಲಕ್ಕಿ (ನೋಡಿ-ಪರಿಶಿಷ್ಟ-3)

## ಪರಿಶಿಷ್ಟ-1

ಆ ಎರಡು ಪದ್ಯಗಳು ಇವು

1. ಅರಸಂ ರಕ್ಕಸಗಂಗಂ
ಗುರುಗಳ್ ನೆಗಳ್ದಜಿತ ಸೇನ್ ದೇವರ್ ದಯೆಯಿಂ
ಪೊರೆವ ನೃಪಣ್ಣನೆನೆಮ
ಚರಿಸುವರಾರ್ ನಾಕಿ ಇರುಳೊಳೇಂಪುಟ್ಟಿದನೇ.

(ರಕ್ಕಸ ಗಂಗುನು ಪ್ರೊಪ್ರೈಟರು. ಅಜಿತ್‌ಸೆನ್ ಎನ್ನುವ ಗೌಡ ದೇಶಿಯನು ಡ್ರೈವರು, ಅಣ್ಣನು ಕಂಡಕ್ಟರ್, ನಾಕಿಯು ಕ್ಲೀನರ್)

ಗುರುವೊಂದಿಯೊಳುತ್ಪಲಂ, ಗುರುಮೊದಲ್ ಮೂರಾಗೆ ಶಾರ್ದೂಲಮಾ
ಗುರುನಾಲ್ಕಾಗಿರಲಂತುಸ್ರಗ್ಧರೆ, ಗುರುದ್ವಂದ್ವಲಘುದ್ವಂದ್ವಮಾ
ಗಿರೆ ಮತ್ತೇ ಭ ಗುರುದ್ವಯತ್ರಿಲಘುವಿಂದಕ್ಕು ಮಹಾಸ್ರಗ್ಧರಂ
ಹರಿಣೀವೃತ್ತಮದಕ್ಕುಮೈದುಲಘುವಿಂ ಪಂಕೇಜ ಪತ್ರೇಕ್ಷಣೇ

## ಪರಿಶಿಷ್ಟ - 2

ಮೇಲ್ಕಂಡ ಪದ್ಯಗಳ ಅರ್ಥವಿವರಣೆ

1. ಅರಸಂ-ಒಡೆಯ, ಪ್ರೊಪ್ರೈಟರ್
ಗುರು-ದಾಟಿಸುವವನು, ಡ್ರೈವರ್
ನೃಪ-ರಾಜಾ ಅಣ್ಣ-ಕಂಡಕ್ಟರ್
2. ಭಾವರ್ಥದಲ್ಲೇ ವಿವರವಾಗಿ ಬರೆದಿದೆ

## ಪರಿಶಿಷ್ಟ - 3

ವಾಯುಮಂಡಲ ಮಾಲಿನ್ಯವನ್ನು ನಾಗವರ್ಮನು ಹೃದಯಂಗಮವಾಗಿ ವರ್ಣಿಸಿದ್ದಾನೆ. ಸ್ವಚಲಿತರಥರಹಸ್ಯದ ಓಲೇಗರಿ ಪ್ರತಿ ಪೂರ್ಣ ದೊರೆತರೆ ವಾಯುಮಾಲಿನ್ಯವನ್ನು ಹತೋಟಿಗೆ ತರುವ ವಿಷಯವಾಗಿ ನಾಗವರ್ಮನ ಸೂಚನೆಗಳು ಲಭ್ಯವಾದಾವು.

'ಸ್ವಚಲಿತ ರಥರಹಸ್ಯಂ' ಗ್ರಂಥದ ಹಸ್ತ ಪ್ರತಿಗಳನ್ನು ಹುಡುಕಲು ಈ ಕೂಡಲೇ ಕ್ರಮಗಳನ್ನು ಸಂಬಂಧಿಸಿದವರು ತೆಗೆದುಕೊಳ್ಳಲಿ.

## ಪರಿಶಿಷ್ಟ - 4

'ಮದ್ದಾನೆಯಂತೆ ಗಂಭೀರವಾಗಿ ಚಲಿಸುತ್ತಿರುವ ಈ ಬಸ್ಸು ಹೊರಬಿಟ್ಟ, ದೂರಕ್ಕೆ ತಣ್ಣಗೆ ಕಂಡರೂ ಬಿಸಿಬಿಸಿಯಾದ ಕರಿ ಹೊಗೆಯು ಮೂರು ಲೋಕಗಳು, ಪಂಚಮಹಾಭೂತಗಳು ವೈಕುಂಠ ಕೈಲಾಸಗಳನ್ನು ಹರಡಿ ಹದಿಮೂರು ಜನ ಯತಿಗಳನ್ನು ಕಂಗೆಡಿಸಿ ಕೆಡವಿ ಆಸ್ಪತ್ರೆ ಸೇರಿಸಿದೆ. ಬಸ್ಸು ಹೀಗಿದ್ದರೆ ಭೂಮಿಯಲ್ಲಿ ಪ್ರಸಿದ್ಧವಾಗುತ್ತದೆ. ಎಲೆ, ವ್ಯಾಲೋಲ ನೀಲಾಲಕೆ, ಇಂತಹ ಬಸ್ಸಿಗೆ ನಾಗವರ್ಮ ಕವಿಯಿಂದ ಮತ್ತೇ ಭವಿಕ್ರೀಡಿತವೆಂದು ಹೆಸರಾಯ್ತು.'

ಇದು ಈ ಪದ್ಯದ ತಾತ್ಪರ್ಯ.

1945ರ ಕೊರವಂಜಿಯಿಂದ

# ಅನರ್ಥಕೋಶ

ನಾ. ಕಸ್ತೂರಿ

ಊ- ಶಿಶುಸಾಹಿತ್ಯದ ಶಬ್ದ ವಿಶೇಷ. ಹುಣ್ಣು ಎಂಬ ಅರ್ಥವಿದ್ದರೂ ಇರಬಹುದು. ನಿಮ್ಮ ಶಿಶುವನ್ನೇ ವಿಚಾರಿಸಿ.

ಎಣ್ಣೆ- ಪ್ರಾಚೀನ ಭಾರತದ ಸ್ವರ್ಣಯುಗದಲ್ಲಿ ಬಡವರೂ ಶ್ರೀಮಂತರೂ ನೀರಿಗೆ ಬದಲಾಗಿ ಇದನ್ನೇ ಸ್ನಾನಕ್ಕೆ ಉಪಯೋಗಿಸುತ್ತಿದ್ದರೆಂದು ಒಬ್ಬ ಆಂಗ್ಲ ಸಂಶೋಧಕನು ಬರೆದಿರುವನು. ಆದ್ದರಿಂದ ಅದು ನಿಜವಿರಬೇಕು.

ಎಮ್ಮೆ- ಅದರ ಮೈ ಕೆಸರಾದರೆ ನಮ್ಮ ಬಾಯಿಗೆ ಮೊಸರು!

ಎಸ್ಯಾರ್- ಕಾರಕೂನರ ಬೀಜಮಂತ್ರ

ಎಸ್ಸೆಸ್ಸೆಲ್‌ಸಿ- 'ಓ ಜೋಸಿ, ಸಹೋಸಿ, ಬಲಮಸಿ, ಭ್ರಾಜೋಸಿ, ಮುಂತಾದವುಗಳಿಗೆ ಬದಲಾಗಿ ಆಧುನಿಕ ಋಷಿಗಳು ಮಾಡಿರುವ ವ್ಯವಸ್ಥೆ.

ಎಳನೀರು- ಬಾಲ್ಯದಲ್ಲಿ ಬೇರಿಗೆ ಬಿಟ್ಟ ನೀರು.

ಏಕಲವ್ಯ- ಹೆಬ್ಬೆಟ್ಟಿಲ್ಲದವ. ಬಂಗಾಲದ ನೆಯ್ಗೆಯವರನ್ನೂ ಹೊಯ್ಸಳ ಬಿಟ್ಟಿದೇವನನ್ನೂ ನೋಡಿ.

ಏರ್‌ಕ್ರಾಪ್ಟ್- ''ಇಂದುಸ್ಥಾನ್ ಹೇರ್‌ಕ್ರಾಪ್ಟ್'' ಎಂಬ ಕಂಪನಿಗೆ ಕೆಲವು ಕಾಲೇಜ್ ಹುಡುಗರು ಹೇಳುವ ಹೆಸರು.

ಏಳು- ''ಹೇಳು'' ಎಂಬುದರ ತದ್ಭವ. ಇದನ್ನೂ 'ಏಳ'ಲಾರದೆ, ಅಂಗಡಿಯಲ್ಲಿ ಅಲೆಯುವಾಗ 'ಮತ್ತೊಂದು' ಎನ್ನುತ್ತಾರೆ.!

# ಪ್ರಶ್ನೆಗೆ ಉತ್ತರ

- ಎಸ್. ಪ್ರಭಾಕರ್

(ಜನಪರ ಕವಿ ಕೆ.ಎಸ್.ಎನ. ಪಾದ ಸ್ಪರ್ಶಿಸಿ, ಕ್ಷಮೆಯಾಚಿಸಿ....)

ಒಂದ್ಹಗಲು ಎಚ್ಚರದಲಿ ನನ್ನವರ ಕೇಳಿದೆನು
ಭಯ ನಿಮಗಾವುದೆಂದು
ಕೇಂದ್ರ ಬಜೆಟೋ, ರಾಜ್ಯ ಬಜೆಟೋ
ಭಯ ನಿಮಗಾಗುವುದೆಂದು
ಕೇಂದ್ರ ಬಜೆಟೋ, ರಾಜ್ಯದ ಬಜೆಟೋ
ಎಂದೆನ್ನ ಕೇಳಲೇಕೆ?

ಕೇಂದ್ರ ತೆರಿಗೆ ಜೊತೆಯಲೇ ರಾಜ್ಯ ತೆರಿಗೆಯ ಭಾರ
ವಿವರಿಸಿ ಕೊರಗಬೇಕೆ?
ಕೇಂದ್ರ ಬಜೆಟೋ, ರಾಜ್ಯದ ಬಜೆಟೋ
ಎಂದೆನ್ನ ಕೆಣಕಲೇಕೆ - ಎನ್ನರಸಿ
ಸುಮ್ಮನಿರೆ ಎಂದನಾತ

ಪೆಟ್ರೋಲು, ಸೀಮೆಂಟು, ದಿನಬಳಕೆ ಬೆಲೆಯೇರಿ ಹೊರೆಯಾಗಿ
ಅಧಿಕ ಕರಗಳು ತೋಳಬೀಸಿ
ತೆರಿಗೆಗಳು ಬದುಕಿನ ಮುಳ್ಳಬೇಲಿಯ ವರಿಸಿ
ನಡುಗುತಿರೆ ಮುಂಬರುವ ಕಷ್ಟ ಸೂಸಿ
ನಗುನಗುತ ಹಣಕಾಸಿನ ಸಚಿವರು ಬರುತಿರಲು
ಬಜೆಟ್ ಮಂಡನೆಗಾಗಿ

ಕೇಂದ್ರ ಬಜೆಟಿಗಿಂತ ರಾಜ್ಯ ಬಜೆಟೇ ತೂಕವೆಂದು
ನಿಲ್ಲಿಸಿತು ಹಣ ಕೂಗಿ!

ಕೇಂದ್ರ ಬಜೆಟೋ, ರಾಜ್ಯ ಬಜೆಟ್ ಭಯವೋ
ಎಂದೆನ್ನ ಕೆಣಕಲೇಕೆ? ಎನ್ನರಸಿ
ಸುಮ್ಮನಿರೆ ಎಂದನಾತ।

ಆದಾಯ ತೆರಿಗೆ ವಿನಾಯ್ತಿ ಸಿಗದಾಗ, ವೃತ್ತಿ ತೆರಿಗೆ ಬೆರೆತಾಗ
ಹೃದಯ ಬಡಿತ ನಿಂತಿತಾಗ
ಬಸ್ಸು ಸಕ್ಕರೆಯ ದರವೇರಿ, ಸಕ್ಕರೆಯೇ ಕಹಿಯಾಯಿತಾಗ
ತೆರಿಗೆಗಳ ಕೇಕೆ ಜನದ ಕುತ್ತಿಗೆಗೆ ಬಂದಿತ್ತು
ಬಜೆಟುಗಳ ಮಂಡಿಸಿದಾಗ
ಟಿವಿ ಸಂದರ್ಶನಕೆ ಬಂದು, ಅವರು ನಮ್ಮನು ಕಂಡು
ಪ್ರತಿಕ್ರಿಯೆ ಕೇಳಿದಾಗ
ನಾಲಿಗೆಯಲೋ ನೀರು ಬತ್ತಿ, ಕಣ್ಣಲೆರಡು ಹನಿ ಬಂದು
ಕೆನ್ನೆ ಕೆಂಪಾದುದಾಗ

ಕೇಂದ್ರ ಬಜೆಟ್ ಭಯವೋ, ರಾಜ್ಯ ಬಜೆಟ್ ಭಯವೋ
ಎಂದೆನ್ನ ಕೆಣಕಲೇಕೆ? ಎನ್ನರಸಿ
ಸುಮ್ಮನಿರೆ ಎಂದನಾತ।

---

**ಈ ಹುಡುಗಿ**
**ಕರಗದ ದಿನ**
**ನನ್ನೆದೆಯಲ್ಲಿ**
**ಕರಗಿ**
**ಕುಳಿತಳು**
**ಅಡಗಿ**

**- ಶಂಸ**

# ಕೀಚಕ ವಧೆ

– ಕಂಭಂ ಕೃಷ್ಣಮೂರ್ತಿ

ಶ್ರೀ ತುಪ್ಪಾಂಜನೇಯ ಸ್ವಾಮಿ ಕೃಪಾಪೋಷಿತ ನಾಟಕ ಮಂಡಳಿಯು ಮರಕುಂಟೆಯಲ್ಲಿ ಕ್ಯಾಂಪ್ ಮಾಡಿತ್ತು. ಕಂಪನಿಯ ಮಾಲೀಕ ಅಡವೀ ಮನಿಯವರು, ದಿನೇ ದಿನೇ ಕಲೆಕ್ಷನ್ ಕ್ಷೀಣಿಸುತ್ತಿರುವುದನ್ನು ಕಂಡು, ಕ್ಯಾಂಪನ್ನು ಸೀಗೆಬೈಲಿಗೆ ವರ್ಗಾಯಿಸಲು ತೀರ್ಮಾನಿಸಿದ್ದರು. ಅದಕ್ಕಾಗಿ ಕಂಪನಿಯ ಮ್ಯಾನೇಜರ್ ಮೂಲಿಮನಿಯನ್ನು ಆ ಹಳ್ಳಿಯ ಲಗುಬಿಗುವನ್ನು ತಿಳಿದುಕೊಂಡು ಬರಲು ಅಲ್ಲಿಗೆ ಕಳುಹಿಸಿದ್ದರಿಂದ, ಮ್ಯಾನೇಜರ್ ಪೋರ್ಟ್‌ಫೋಲಿಯವನ್ನೂ ಅವರೇ ನೋಡಿಕೊಳ್ಳಬೇಕಾದ ಪ್ರಕ್ಷುಬ್ಧ ಪರಿಸ್ಥಿತಿ ಉದ್ಭವವಾಗಿತ್ತು. 'ಪೆಷಲ್ ಸಾಮಾಜಿಕ ನಾಟಕ' 'ಪರದೆಯ ಒಳಗೆ' ಆಡಿ, ಆಡಿ ಸೋತು ಸುಣ್ಣವಾಗಿದ್ದ ಕಂಪನಿಯ ನಟರು, ಕಂಪನಿಯ ಹೆಗ್ಗಳಿಕೆಯ ಪೌರಾಣಿಕ ನಾಟಕ, ಕೀಚಕ ವಧೆಯನ್ನು ಆಡಿಸುವಂತೆ, ಅಡವೀಮನಿಯವರಿಗೆ ಒಂದೇ ಸಮ ವರಾತ ಹಚ್ಚಿದ್ದರು. 'ಪರದೆಯ ಒಳಗೆ' ನಾಟಕದ ನಟಿ, ಹಾಗೂ ಮತ್ತೇರಿಸುವಂತೆ ಕುಣಿಯುತ್ತಿದ್ದ ನರ್ತಕಿ ಅಖ್ತರ್ ಬೇಗಂ ಗುಪ್ತಖಾಯಿಲೆಯಿಂದ ಹಾಸಿಗೆ ಹಿಡಿದು ಆ ದಿನವೆ ಮಲಗಿದುದರಿಂದ, ಮಾಲೀಕರಿಗೆ ಆ ನಾಟಕವನ್ನು ಬದಲಾಯಿಸದೆ ಗತ್ಯಂತರವಿರಲಿಲ್ಲ. ಆದ್ದರಿಂದ ಅವರು ಕಂಪನಿಯ ಪರ್ಮನೆಂಟ್ ಸಾಹಿತಿ ವಿಶ್ವೇಶ್ವರ ಶಾಸ್ತ್ರಿಯವರಿಗೆ, ನಟರಿಗೆ 'ಕೀಚಕವಧೆಯನ್ನು' ಪ್ರಾಕ್ಟೀಸು ಮಾಡಿಸಲು ಆದೇಶವಿತ್ತಿದ್ದರು. ಹೀಗಾಗಿ, ತುಪ್ಪದಾಂಜನೇಯ ಸ್ವಾಮಿ ನಾಟಕ ಮಂಡಳಿ ಆ ದಿನ ರಾತ್ರಿ ಹತ್ತು ಘಂಟೆ ಸುಮಾರಿಗೆ ಕೀಚಕವಧೆ ನಾಟಕವಾಡಲು ಎಲ್ಲಾ ವಿಧವಾದ ಏರ್ಪಾಡು ಮಾಡಿಕೊಂಡು, ಆ ಬಗ್ಗೆ ಊರಿನಲ್ಲಿ ಟಾಂ ಟಾಂ ಹಾಕಿಸಿದರು.

ಹತ್ತಾರು ಪೌರಾಣಿಕ ನಾಟಕಗಳನ್ನು ಬರೆದು, ತಮ್ಮ ಟ್ರಂಕಿನಲ್ಲಿ ಗುಡ್ಡೆ ಹಾಕಿಟ್ಟುಕೊಂಡಿದ್ದ ಶಾಸ್ತ್ರಿಗಳು 'ಕೀಚಕವಧೆ'ಯ ಹಸ್ತಪ್ರತಿಯನ್ನು ಮುಂಜಾನೆಯೆ ತೆಗೆದಿರಿಸಿಕೊಂಡು, ಪ್ರಾಕ್ಟೀಸು ಮಾಡಿಸಲು ಕಂಪನಿ ಮನೆಗೆ ಓಡಿಯೇ ಬಂದರು. ಕಂಪನಿಯ ಪ್ರಾರಂಭದ ದಿನಗಳಿಂದಲೂ ಅಡವೀಮನಿಯವರು, ಶಾಸ್ತ್ರಿಗಳ ವಿರಚಿತ ಪೌರಾಣಿಕ ನಾಟಕಗಳನ್ನೇ ಆಡಿಸುತ್ತಿದ್ದರು. ಆದರೆ ಅದೇಕೋ ಏನೋ, ಇದ್ದಕ್ಕಿದ್ದಂತೆ, ಯಾವನೋ ಅನಾಮಧೇಯನ ಕೈಲಿ ಸಾಮಾಜಿಕ ನಾಟಕ 'ಪರದೆಯ ಒಳಗೆ' ಬರಸಿಸಿ, ಮರುಕುಂಟೆಯಲ್ಲಿ ಅದರ ನಲವತ್ತೊಂಭತ್ತನೇ ಪ್ರಯೋಗ ಮಾಡಿದ್ದು ಶಾಸ್ತ್ರಿಗಳಿಗೆ ಮೂಗುಬ್ಬಸವಾಗಿತ್ತು. ಕಂಪನಿಯ ಪ್ರಖಾಂಡ ಸಾಹಿತಿಯಾದ ತನ್ನನ್ನು ಕಡೆಗಣಿಸಿ, ತನ್ನ ಕೃತಿ ರತ್ನಗಳನ್ನು ಮರಕುಂಟೆಯ ಮಹಾಜನರೆದುರಿನಲ್ಲಿ ಪ್ರದರ್ಶಿಸದೆ, ಸಾಮಾಜಿಕ ನಾಟಕವನ್ನು ಕೈಗೆತ್ತಿಕೊಂಡಿದ್ದ ಅಡವೀಮನಿಯವರಿಗೆ ಶಾಸ್ತ್ರಿಗಳು ಹಿಡಿಶಾಪ ಹಾಕಿದ್ದರು. ಮುರುತುಕೊಂಡು ಕೂತಿದ್ದ ಅವರಿಗೆ

ಪ್ರೊಪ್ರಾಯಿಟರು ಕೀಚಕವಧೆಯನ್ನು ಪ್ರಾಕ್ಟೀಸು ಮಾಡಿಸಲು ಹೇಳಿದಾಗ, ಪರಮಾನಂದವಾಗಿತ್ತು. ಪಿಳ್ಳಾರಪ್ಪನ ಪೂಜೆಮಾಡಿ, ಕಂಪನಿ ಮನೆಯ ಅಟ್ಟಣೆಯಲ್ಲಿ ಜಮಾಯಿಸಿದ್ದ ಕಲಾವಿದರಿಗೆ ಪ್ರಾಕ್ಟೀಸು ಮಾಡಿಸಲು ಶುರುಮಾಡಿದರು.

ಕಂಪನಿಯ ನಟನಟಿಯರಿಗೆ ಕೀಚಕವಧೆಯೇನೂ ಹೊಸ ನಾಟಕವಾಗಿರಲಿಲ್ಲ. ನೂರಾರು ಬಾರಿ ಕಂಠಶೋಷಣೆ ಮಾಡಿಕೊಂಡು, ಹತ್ತಾರು ಕ್ಯಾಂಪುಗಳಲ್ಲಿ ಆಡಿದ್ದ ನಾಟಕವೇ ಆಗಿದ್ದರಿಂದ ಮಾತುಗಳು, ಹಾಡಿನ ಮಟ್ಟುಗಳು ಕರತಲಾಮಲಕವಾಗಿ ಹೋಗಿದ್ದಿತು. ಮಾಲೀಕರ ರಖಾವು ರಖುಮಾಬಾಯಿ ತನ್ನ ಸಹಜಾಭಿನಯದಿಂದ ದ್ರೌಪದಿ ಪಾರ್ಟಿಗೆ ಜೀವಕಳೆ ತುಂಬಿದ್ದಳು. ಭೀಮನ ಪಾರ್ಟಿಗೆ ಹೇಳಿಮಾಡಿಸಿದ ಹಾಗಿದ್ದ, ಮಾಜಿ ಪೈಲ್ವಾನ್ ಭುಜಂಗರಾವ್ ದೋಂಡೂಸ ಇನ್ನು ದುರ್ಯೋಧನ, ಕೀಚಕ ಮತ್ತು ಶಕುನಿಯರಿಗೆ ಕಂಪನಿಯಲ್ಲಿ ಯಾವ ಕೊರತೆಯೂ ಇರಲಿಲ್ಲ. ಹಾರ್ಮೋನಿಯಂ ಮಾಸ್ತರು ಪಿಳ್ಳಪ್ಪ, ಕೈಗೆ ಗೆಜ್ಜೆ ಕಟ್ಟಿಕೊಂಡು ತಬಲ ತಟ್ಟುತ್ತಿದ್ದ ಮುರುಗೇಶಿ, ಅವರಿಗೆ ಹಾಡಿನ ಮಟ್ಟುಗಳು ಗೊತ್ತಿದ್ದುದರಿಂದ, ಪ್ರತ್ಯೇಕವಾದ ರಿಹರ್‌ಸಲ್ಲಿನ ಅವಶ್ಯತೆ ಅವರಿಗಿರಲಿಲ್ಲ. ಕೀಚಕವಧೆಯನ್ನು ಆಡುವ ಮಾಲೀಕರ ನಿರ್ಧಾರ ಕಂಪನಿಯ ಮಂದಿಗೆಲ್ಲಾ ಒಪ್ಪಿಗೆಯಾಗಿದ್ದರೂ, ಆಂಜನೇಯ ಪಾತ್ರಧಾರಿ, ಮುನಿಚೂಡಪ್ಪನಿಗೆ ಮಾತ್ರ ಅಸಮಾಧಾನವನ್ನೇ ತಂದಿತ್ತು. ಅವನು ಮಾಡುತ್ತಿದ್ದ ಆಂಜನೇಯಸ್ವಾಮಿ ಪಾತ್ರಕ್ಕೆ, ಪ್ರೇಕ್ಷಕರು ಕೈಮುಗಿದು, ಕೆನ್ನೆಗೆ ತಟ್ಟಿಕೊಂಡು, ''ಸ್ವಾಮಿ ಕಾಪಾಡಪ್ಪಾ'' ಎಂದು ಕೂಗುತ್ತಿದ್ದುದೂ ಉಂಟು. ವಿಶ್ವೇಶ್ವರ ಶಾಸ್ತ್ರಿಗಳು ಶಾಸ್ತ್ರೋಕ್ತವಾಗಿ, ಆಂಜನೇಯ ಅಷ್ಟೋತ್ತರ ಹೇಳಿ, ಮಂಗಳಾರತಿ ಮಾಡಿದ ನಂತರವೇ ಹಳ್ಳಿಯ ಮಂದಿ, ಭಾವುಕರಾಗಿ ಹಣ್ಣುಕಾಯಿ ಮಾಡಿಸುತ್ತಿದ್ದುದೂ ಉಂಟು. ಇಂಥಹ ಪಾತ್ರದಾರಿಗೆ ಮರುಕಂಟೆಯಲ್ಲಿ ಪ್ರದರ್ಶಿಸುತ್ತಿದ್ದ ನಾಟಕಳಲ್ಲಿ ಪಾತ್ರವೇಯಿಲ್ಲದೆ ಹೋದುದರಿಂದ ಮುನಿಚೂಡಪ್ಪ ಮುರುತುಕೊಂಡು ಕೂತಿದ್ದ.

ಕೀಚಕವಧೆ ನಾಟಕದಲ್ಲಿ ಆಂಜನೇಯ ಪಾತ್ರವನ್ನು ತರಲು ಮುನಿಚೂಡಪ್ಪ ಶಾಸ್ತ್ರಿಗಳಿಗೆ ದಂಬಾಲು ಬಿದ್ದಿದ್ದ ''ಅದು ಹ್ಯಾಗೆ ಹಾಕಲಿಕ್ಕೆ ಬರ್ತದೆ ಮುನಿಚೂಡಪ್ಪ'' ಎಂದು ಶಾಸ್ತ್ರಿಗಳು ತಮ್ಮ ಅಸಹಾಯಕತೆಯನ್ನು ತೋಡಿಕೊಂಡರು. ''ನೀ ಹಾಂಗೆ ರಂಗದ ಮ್ಯಾಲೆ ಬರಲೇ ಬೇಕೆಂಬೋರಾದೆಯಿದ್ರೆ, ಕೀಚಕನ ದರ್ಬಾರು ಸೀನ್‌ನಾಗೆ ಬಂದು ಕುಂದ್ರಪ್ಪ'' ಎಂದು ಶಾಸ್ತ್ರಿಗಳು ಅವನನ್ನು ಸಮಾಧಾನ ಪಡಿಸಲು ನೋಡಿದರು. ''ಮುಖ್ಯ ಪ್ರಾಣನ ಮೇನ್ ಪಾಲ್ಟು ಮಾಡೋ ನಾನು, ಒಂದು ಡೈಲಾಗೂ, ಒಂದು ಕಂದ ಪದ್ಯ ಸಹ ಇಲ್ಲದೆ, ಮೂಗು ಬಸಣ್ಣನ ಹಾಂಗೆ ಸಭೆನಾಗೆ ಕಂಡ್ರಲಿಕ್ಕೆ ನಂಗೇನು ಹುಚ್ಚು ಹಿಡಿದೈತೇನು ಸ್ವಾಮಿ. ನೀವು ಹ್ಯಾಂಗೆ ಕೀಚಕವಧೆ ಆಡ್ತೀರೋ ನಾನು ಒಂದು ಕೈ ನೋಡೇಬುಡ್ತೀನಿ'' ಎಂದ ಹಟತೊಟ್ಟು ಮುನಿಚೂಡಪ್ಪ ದುಸುಮುಸು ಮಾಡಿಕೊಂಡು ಹೊರಟೇ ಹೋಗಿದ್ದ.

'ಪರದೆಯ ಒಳಗೆ' ನಾಟಕದ ನಲ್ವತ್ತೊಂಬತ್ತು ಪ್ರಯೋಗಗಳನ್ನು ನೋಡಿ

ನೋಡಿ ಸೊರಗಿ ಸುಸ್ತಾಗಿದ್ದ ಮರಕುಂಟೆಯ ಮಂದಿಗೆ ನಾಟಕದ ಬದಲಾವಣೆಯನ್ನು ಕಂಡು ತೃಪ್ತಿಯೇ ಆಯಿತು. ಹೊಸ ನಾಟಕ ನೋಡಬಹುದೆಂಬ ಉತ್ಸಾಹವು ತುಂಬಿತ್ತು. ಥೇಟರಿನಲ್ಲಿ ಪ್ರೇಕ್ಷಕರ ನೂಕುನುಗ್ಗಲು ಶುರುವಾಗಿತ್ತು. ಕಲೆಕ್ಷನ್ ಚೆನ್ನಾಗಿ ಆಗುತ್ತಿರುವುದು ನೋಡಿ ಮಾಲೀಕರಿಗೂ ಒಂದು ರೀತಿಯಲ್ಲಿ ಖಿಶಿಯೇ ಆಯಿತು. ಹೊಸ ನಾಟಕ ಹಾಕುವ ನಿರ್ಧಾರವನ್ನುತಾವು ಮಾಡಿದ್ದು ಸಮಂಜಸವಾಯಿತೆಂದು ಅಡವೀಮನಿಯವರು ಮನಗಂಡರು. ಮ್ಯಾನೇಜರ್ ಮೂಲಿಮನಿಯವರ ಗೈರುಹಾಜರಿಯಲ್ಲಿ, ಅವರೇ ಟಿಕೀಟು ಬೂತು, ಎಂಟ್ರೆನ್ಸ್ ಗೇಟು ಮುಂತಾದ ಮುಖ್ಯವಾದ ಸ್ಥಳಗಳಲ್ಲಿ ನಿಗಾಯಿಟ್ಟು ಓಡಾಡಿಕೊಂಡಿದ್ದರು. ಪರದೆಯ ಹಿಂದೆ ಪಿಳ್ಳಾರಪ್ಪನ ಪೂಜೆ, ಹಾಗೂ ತುಪ್ಪದಾಂಜನೇಯ ಸ್ವಾಮಿಯ ಮೇಲೆ ರಚಿಸಿದ್ದ ಕಂಪನಿಯ ಪರ್ಮನೆಂಟ್ ಹಾಡಿನೊಂದಿಗೆ ಅಂಕದ ಪರದೆ ಸರಿಯಿತು.

ಮೊದಲನೆ ದೃಶ್ಯವೆ ಕೀಚಕನ ಆಸ್ಥಾನ. ದರ್ಬಾರು ಸೀನು. ಅಮಾತ್ಯ, ಸಾಮಂತರೆಲ್ಲಾ ಪೀಠಾಲಂಕೃತರಾಗಿ ಕೂತಿದ್ದಾರೆ. ವಂದಿಮಾಗಧರು ಪರಾಕ್, ಬಹು ಪರಾಕನ್ನು ಉದ್ಘೋಷಿಸುತ್ತಿದ್ದಂತೆಯೆ. ಸಭೆಯ ಕಲಾಪಗಳು ಪ್ರಾರಂಭವಾಗುತ್ತಿದ್ದಂತೆ, ಬಾಕ್ಸ್ ಆಫೀಸಿನ ಹತ್ತಿರ ಅಡ್ಡಾಡಿಕೊಂಡಿದ್ದ ಅಡವಿ ಮನಿಯವರ ಹತ್ತಿರಕ್ಕೆ ಪರಮೇಶಿ ದುಡು ದುಡು ಓಡಿಯೇ ಬಂದ. ಮಾಲೀಕರ ಆಜೂಜುವಾರಿ ಮಾಡಿಕೊಂಡು, ಮೂಕದೃಶ್ಯಗಳಲ್ಲಿ ಚಿಲ್ಲರೆ ಪಾತ್ರಗಳನ್ನು ಮಾಡಿಕೊಂಡು, ಪರದೆ ಎಳೆಯುವ ಕೆಲಸವನ್ನು ಮಾಡುತ್ತಿದ್ದ ಅಂಕದ ಪರದೆಯನ್ನು ಮೇಲೆಳೆದು ಕಟ್ಟಿದೊಡನೆಯೆ ಮಾಲೀಕರಲ್ಲಿಗೆ ಓಡಿ ಬಂದಿದ್ದ. ''ಘಾತ ಆತು ಧಣಿ. ದೋಂಡೂಸ ತಪ್ಪಿಸಿ ಕೊಂಡ್ಯಾನೆ. ಕಂಪನಿ ಮನ್ಯಾಗೆಲ್ಲಾ ಹುಡುಕಿ ಆತು. ಈಗ ಏನು ಮಾಡೂದೈತ್ರಿ?'' ಎಂದು ಏದುಸಿರು ಬಿಡುತ್ತಾ ನಿಂತ.

ಅಡವೀ ಮನಿಯವರಿಗೆ ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದಂತಾಯ್ತು. ಅತೀ ಮುಖ್ಯವಾದ ಭೀಮನ ಪಾತ್ರವೇ ಗೈರು ಹಾಜರಾದರೆ ಕೀಚಕವಧೆ ಮಾಡುವರಾರು? ಎಂದು ಪೇಚಾಡಿಕೊಂಡರು. ''ಆ ಕಳ್ಳ ಸೂಳಿಮಗ ದೋಂಡ್ಯಾನಿಗೆ ರೊಕ್ಕ ಕೊಟ್ಟೋರು ಯಾರಲೆ. ಪಡಖಾನಿಗೆ ಹೋಗಿ ಕುಂಡ್ರ್ರತಾನೇಂತ ನಾ ಅವನ ಪರಾಗಾನೂ ಕೊಟ್ಟಿಲ್ಲ'' ಎಂದು ಅಡವೀಮನಿಯವರು ಹಲುಬಿದರು. ಕಿರೀಟ, ಭುಜಕೀರ್ತಿ ಎಲ್ಲಾ ಇಟುಕೊಂಡು, ಭೀಮನ ಮೇಕಪ್ ಮಾಡ್ಕೊಂಡು ಕೂತಿದ್ದನ್ನ ನಾ ಇದೇ ಕಣ್ಣಾಗಿಂದ ಕಂಡೀನಿ ಧಣಿ. ಹಾಂಗೆ ಮೇಪ್‌ನಾಗೆ ಎಲ್ಲಿ ಹೋದು ಅನ್ನೂದು ತಿಳೀವಲ್ದು ನೋಡ್ರ ಅಣ್ಣಾವ್ರೆ...'' ಎಂದು ಪರಮೇಶಿ ಪರದಾಡಿದ. '' ಇನ್ನೆಲ್ಲಿ ಹೋಗಿದ್ದಾನು. ಪಡಖಾನಿಗೆ ಹೋಗಿ ಸಾರಾ ಕುಡ್ಕೊಂಡು ಬಿದ್ದಿರವಲ್ಲನ್ಯಾಕೆ. ನೀ ಬ್ಯಾಗ ಹೋಗಿ, ಅವ ಅಲ್ಲಿದ್ರೆ ಎಳಕೊಂಡು ಬಾರಪಾ ತಮ್ಮ'' ಎಂದು ಅಡವೀಮನಿಯವರು ಪರಮೇಶಿಗೆ ಆದೇಶವಿತ್ತು ಕಲಕ್ಷನ್ ಹಣವನ್ನು

ಭದ್ರಪಡಿಸಲು ಬುಕ್ಕಿಂಗ್ ಆಫೀಸಿನ ಕಡೆಗೆ ಓಡಿದರು.

ಪರಮೇಶಿ ಪಡಖಾನೆಯಲ್ಲೆಲ್ಲಾ ಹುಡುಕಿದ. ಆರಿವರನ್ನು ವಿಚಾರಿಸಿದ. ಪೂರ್ತಿ ಬಾಟ್ಲಿ ಸಾರಾಯಿಯನ್ನು ಕುಡಿದು, ಉಪ್ಪಿನ ಹರಳನ್ನು ನೆಕ್ಕುತ್ತಾ ಮರಕುಂಟೆಯ ಸ್ಮಶಾನದ ಕಡೆಗೆ ದೋಂಡ್ಯಾ ಹೋದನೆಂದು ಆಗತಾನೇ ಪಾನೀಯವನ್ನು ಶುರುಮಾಡಿದರು ಯಾರೋ ಪರಮೇಶಿಗೆ ಮಾಹಿತಿಯನ್ನು ಕೊಟ್ಟರು. '' ಎಲ್ಲಿಗೆ ಓಯ್ತಾನೆ, ಇನ್ನೊಂದು ಬಾಟ್ಲಿಗೆ ಇಲ್ಲಿಗೇ ಬರ್‍ತಾನೆ. ಅಲ್ಲಿಗಂಟ ಇಲ್ಲೇ ಕಾಯ್ತಾ ಕೂತ್ಕೊ'' ಎಂದು ಸಾರಾಯಿ ಅಂಗಿ ಮಾಲೀಕ ತಿಪ್ಪೆರುದ್ರಪ್ಪ ಹೇಳಿದಾಗ ತಿಗಣೆ ಹೊಸಕುತ್ತಾ ಕೂತಿರಲು ಸಾಧ್ಯವೆ? ಒ.ದು ಕ್ವಾರ್ಟರ್ ಬಾಟ್ಲಿಯನ್ನು ತರಿಸಿ ಮುಂದಿಟ್ಟುಕೊಂಡು ಕೂತ. ಪರದೆ ಬಿಡುವ ಕೆಲಸ ಹಾಗೂ ದೋಂಡ್ಯಾನನ್ನು ಹುಡುಕಿ ಕರೆಕೊಂಡು ಹೋಗುವ ಕೆಲಸ, ಎರಡನ್ನೂ ಮರೆತು ಕೂತ. ಎರಡನೇ ಕ್ವಾರ್ಟರಿನ ಎರಡು ಗುಟುಕು ದೇಹದೊಳಗೆ ಹೊಕ್ಕು ಸಂಚರಿಸಿದಾಗ, ಅವನು ತನಗೊಪ್ಪಿಸಿದ ಕೆಲಸವಿರಲಿ, ತಾನು ಪರಮೇಶಿಯೆನ್ನುವುದನ್ನೇ ಮರೆತು ಕೂತಿದ್ದ.

ಕಲಕ್ಷನ್ ಹಣವನ್ನೆಲ್ಲಾ ಗಂಟುಕಟ್ಟಿಕೊಂಡು, ಅಡವೀಮನಿಯವರು ಸ್ಟೇಜಿನ ಹಿಂದೆ ಬಂದಾಗ, ರಂಗದ ಮೇಲೆ ನಡೆಯುತ್ತಿದ್ದ ದೃಶ್ಯವನ್ನು ಕಂಡು ದಿಗ್ಮೂಢರಾದರು. ಕೀಚಕನ ದರ್ಬಾರು ಸೀನಿನಲ್ಲಿ ಸಾಮಂತರಾಜರು ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಿದ್ದಂತೆಯೆ, ಆಂಜನೇಯನವೇಷವನ್ನು ಹಾಕಿಕೊಂಡು ರೆಡಿಯಾಗಿ ಕೂತಿದ್ದ ಮುನಿಚೂಡಪ್ಪ ಚಂಗನೆ ಹಾರಿಬಂದು ದರ್ಬಾರನ್ನು ಪ್ರವೇಶ ಮಾಡಿದ. ರಾಮಾಯಣದ ಒಂದು ಕಂದ ಪದ್ಯವನ್ನು ಕೂಗಿ ಹೇಳಿ, '' ಎಲೆಲ್ಲವೋ ದುಷ್ಠ ಕೀಚಕನೇ, ನನ್ನ ತಮ್ಮ ಭೀಮಸೇನನು ಎಲ್ಲೋ ಸಂಚಾರಹೋಗಿರುವಾಗ ಅವನ ಪತ್ನಿ ದ್ರೌಪದಿಯನ್ನು ಕೆಣಕಿದೆಯಾ, ಭೀಮನಿಲ್ಲದಿದ್ದರೇನು, ಅವನ ಅಣ್ಣ ನಾನಿಲ್ಲವೆ? ದ್ರೌಪದಿ ನನ್ನ ತಮ್ಮನ ಹೆಂಡತಿಯಾದರೇನು, ನನ್ನ ಹೆಂಡತಿಯಂತಲ್ಲವೆ? ಅವನ ಬದಲು ನಾನೇ ನಿನ್ನನ್ನು ವದಿಸುತ್ತೇನೆ/'' ಎಂದು ಹೇಳಿ ಸಿಂಹಾಸನದ ಮೇಲೆ ಕೂತಿದ್ದ ಕೀಚಕನನ್ನು ಕೆಳಗೆಳೆದುಹಾಕಿ, ಅಟ್ಟಹಾಸ ಮಾಡುತ್ತಾ ಅವನ ಮೇಲೆ ಕೂತು, ಅವನ ಮೂತಿಗೆ ಮುಷ್ಟಿಪ್ರಹಾರ ಮಾಡಿದ ಮುನಿಚೂಡಪ್ಪ.

ಸೈಡ್ ವಿಂಗ್‌ನಲ್ಲಿ ನಿಂದು ಪ್ರಾಮ್ಟ್ ಮಾಡುತ್ತಿದ್ದ ಕಂಪನಿ ಸಾಹಿತಿ ವಿಶ್ವೇಶ್ವರ ಶಾಸ್ತ್ರಗಳಿಗೆ ರಂಗದ ಮೇಲೆ ನಡೆಯುತ್ತಿದ್ದ ದೃಶ್ಯವನ್ನು ನೋಡಿ ದಿಕ್ಕ ತೋರದಂತಾಯಿತು. ಹತ್ತಾರು ಸೀನುಗಳಾದ ನಂತರ, ಆಗಬೇಕಾಗಿದ್ದ ಕೀಚಕವಧೆ ಮೊದಲನೆಯ ದೃಶ್ಯದಲ್ಲೇ ಸಮಾಪ್ತಿಯಾದುದನ್ನು ಕಂಡು, ಅವರಿಗೆ ಕಸಿವಿಸಿಯಾಯಿತು. ಮಹಾಭಾರತಕ್ಕೆ ರಾಮಾಯಣವನ್ನು ಕಲಸಿದ ಮುನಿಚೂಡಪ್ಪನಿಗೆ ಹಿಡಿಶಾಪ ಹಾಕಿದರು- ''ಕಲಬೆರಿಕೆಯ ಸಾಹಿತಿಯೆಂದು ತನ್ನನ್ನು ವಾಲ್ಮೀಕಿ ಸಂಘದವರಾಗಲಿ, ವ್ಯಾಸ ತಂಡದವರಾಗಲಿ ಚಚ್ಚಿ ಹಾಕದೆ ಬಿಡುತ್ತಾರೆಯೆ?'' ಎಂಬ ಭಿತಿ ಅವರನ್ನು ಕಾಡಿತು.ನ ಪರದೆ ಕೆಳಕ್ಕೆ ಬಿಡುವಂತೆ ಪರಮೇಶಿಯನ್ನು

ಕೂಗಿದರು. ಆದರೆ ಪರದೆ ಬಿಡುವ ಪರಮೇಶಿ ಪಡಖಾನೆಯಲ್ಲಿ ಪವಡಿಸಿರುವಾಗ ಶಾಸ್ತ್ರಿಗಳ ಕೈಗೆಲ್ಲಿ ಸಿಕ್ಕಿಯಾನು? ಶಾಸ್ತ್ರಿಗಳು ಕಿಂಕರ್ತವ್ಯ ಮೂಡರಾಗಿ ಅಲ್ಲೇ ಕುಸಿದು ಕೂತರು. ಕೀಚಕನ ಸಭೆಯಲ್ಲಿ ಆಂಜನೇನ ಆರ್ಭಟ ನಡೆದಿರುವುದನ್ನು ನೋಡಿಯೇ ಅಡವಿಮನಿಯವರಿಗೆ ನಾಡಕದ ಹಣೆಬರಹ ಅರ್ಥವಾಗಿ ಹೋಗಿತ್ತು. ಅವರು ಮುಂದೆ ಆಗಬಹುದಾದ ಜನರ ದೊಂಬಿ ತಮಗೆ ಬೀಳಬಹುದಾದ ಪಾದಕ್ಷಾ ಪ್ರಹಾರ, ಹಾಗೂ ಕಲೆಕ್ಷನ್ ಹಣದ ಮರು ಬಟವಾಡೆ ಮುಂತಾದ ಪರಿಣಾಮಗಳನ್ನು ಊಹಿಸಿಯೇ ಕಂಗಾಲಾದರು. ಮೇಕಪ್ ಮಾಡಿಕೊಂಡು, ಗ್ರೀನ್ ರೂಮಿನಲ್ಲಿ ಕೂತಿದ್ದ ತಮ್ಮ ರಖಾವು ರಖುಮಾಬಾಯಿಯನ್ನು ಕಟ್ಟಿಕೊಂಡು, ಕಲೆಕ್ಷನ್ 'ಹಣದ ಪುಟ್ಟಗಂಟಿನೊಂಗಿದೆ ಪೇಟೆಗೆ ಹೋಗಯುತ್ತಿದ್ದ ಲಾರಿಯನ್ನು ಹಿಡಿದು ಅಡವಿ ಮನಿಯವರು ಪರಾರಿಯಾದರು.

ಮಹಾಭಾರತದ ಕೀಚಕ ವಧೆಯಲ್ಲಿ ಆಂಜನೇಯ ಸ್ವಾಮಿಯ ಪ್ರವೇಶವನ್ನು ಕಂಡ ಪ್ರೇಕ್ಷಕರಿಗೆ ಹುಚ್ಚೇ ಹಿಡಿದಂತಾಯಿತು. ಪರದೆಯನ್ನು ಕಿತ್ತು ಬಿಸುಟರು, ಕುರ್ಚಿಗಳನ್ನೆಸೆದರು, ಕಲ್ಲುಗಳನ್ನು ತೂರಿದರು. ಕಾಲವಿದರು, ಹಾಗೂ ಕಂನಿಯ ಸಿಬ್ಬಂದಿವರ್ಗ, ಕಲ್ಲು ಹೊಡೆತಗಳನ್ನು ತಪ್ಪಿಸಿಕೊಳ್ಳುತ್ತಾ ಸಿಕ್ಕ ಸಿಕ್ಕಂತೆ ಓಡಿದರು. ಮಧುವನವನ್ನೂ ಲೂಟಿ ಮಾಡಿದ ವಾನರ ಸೇನೆಯಂತೆ ಮರಕಿಂಟೆಯ ಪ್ರೇಕ್ಷಕ ಸ್ತೋಮ, ರಂಗಮಂದಿರವನ್ನು ನಿರ್ನಾಮಗೊಳಿಸಿ ಮನೆಗೆ ತೆರಳಿತು.

ಚದುರಿಹೋಗಿದ್ದ ಕಂಪೆನಿಯ ಕಾಲವಿದರನ್ನೆಲ್ಲಾ ಒಗ್ಗೂಡಿಸಿ, ಮಾಲೀಕ ಅಡವೀಮನಿಯವರು ಸೀಗೇ ಬೈಲಿನಲ್ಲಿ ಕ್ಯಾಂಪ್ ಹಾಕಿದ್ದಾಗಲೇ, ಆರಿಗೆ ಮರಕುಂಟೆಯ ಕ್ಯಾಂಪಿನಲ್ಲಿ ಕಂಪನಿಗಾದ ತೇಜೋವಧೆಯ ಬಗ್ಗೆ ತಿಳಿದದ್ದು. ಮುನಿಚೂಡಪ್ಪ ಭೀಮನ ಪಾತ್ರಧಾರಿ, ಧೋಂಡ್ಯಾನ ಕೈಗೆ ಸಾಕಷ್ಟು ರೊಕ್ಕ ಕೊಟ್ಟು, ಅವನನ್ನು ಸಾರಾಯಿ ಕುಡಿಯಲು ಪಡಖಾನೆಗೆ ಅಟ್ಟಿದ್ದ ರಹಸ್ಯ ಬಯಲಾದದ್ದು ಸೀಗೆ ಬೈಲಿನ ಕ್ಯಾಂಪಿನಲ್ಲೆ.

---

**ಆಧುನಿಕ ಫ್ರಾಯ್ಡು**
**ಎನಿಸಿದ ನಮ್ಮ ನಾಯ್ಡು**
**ಸ್ಯೂ ಇಸೈಡು**
**ಬಗ್ಗೆ ಬರೆದ ಗೈಡು**
**ಪ್ರಕಟವಾದ ನಾಲ್ಕೇ ವೀಕ್**
**ಗಳಲ್ಲಿ ಔಟ್ ಆಫ್ ಸ್ಟಾಕ್!**

**– ಶಂಸ**

# ಖದೀಮರಿಗೊಂದು ಶಾಲೆ









''ಖದೀಮರಿಗೊಂದು ಶಾಲೆ ಅಂತ ಒಂದು ವಿಷಯವನ್ನು ಬೇರೆ ಬೇರೆ ಲೇಖಕರಿಗೆ ಬರೆಯಲು ಹೇಳಿ, ಯುಗಾದಿ ಸಂಚಿಕೆಗೆ ಚೆನ್ನಾಗಿರುತ್ತೆ'' ಅಂತ ಪ್ರಭು ಹೇಳಿದರು. ''ಈಗಿನ ದಿನಗಳಿಗೆ ಈ ಮಾಹಿತಿ ಉಪಯುಕ್ತ'' ಅಂತ ಅವರು ಸೇರಿಸಲಿಲ್ಲ. ಸರಿ, ಐದು ಜನ ಖದೀಮರನ್ನು ಹಿಡಿದೆ. ಈ ಐದು ಜನವೂ ತಮ್ಮ ತಮ್ಮ ಖದೀಮತನಾನ ಚೆನ್ನಾಗಿ ಪ್ರದರ್ಶಿಸಿದ್ದಾರೆ, ತಮ್ಮ ಬರಹಗಳಲ್ಲಿ.

In this day and age, ಖದೀಮ ಅಥವಾ ಸ್ಟ್ರೀಟ್ ಸ್ಮಾರ್ಟ್ ಆಗಿ ಇಲ್ದೇ ಇದ್ರೆ ದಿನನಿತ್ಯದ ಜೀವನಾನೇ ದುಸ್ಸಹವಾಗುತ್ತೆ. ಖದೀಮನಿಗೆ, ಮೌಲ್ಯಗಳು ಇರುಲ್ಲ ಅಂತ ತಿಳೀಬೇಡಿ. ತನ್ನ ಮೌಲ್ಯಗಳನ್ನು ತನಗೆ ಬೇಕಾದ ಹಾಗೆ ಮಾರ್ಪಡಿಸಿಕೊಂಡು ನಿರ್ಭ್ಯೋಚನೆಯಿಂದ ಇರೋನೆ ನಿಜವಾದ ಖದೀಮ. ಖದೀಮನಿಗೆ ಮೌಲ್ಯ, ಆಚಾರ ಇವುಗಳಿಗಿಂತ ಗುರಿ ಹೆಚ್ಚು ಮುಖ್ಯ. 'It is the end and not the means' ಅಂತಾನೆ ಅಸಲಿ ಖದೀಮ. ಅದು ಹೇಗಾದರೂ ಇರಲಿ. ಈ ಲೇಖನ ಮಾಲೆಗೆ ನನ್ನದೂ ಒಂದು ಅನುಭವ ಸೇರಿಸಿದ್ದೇನೆ. ಎಂಥ ಅನುಭವ? ನೀವೂ ಖದೀಮರೇ ಅಂತ ಕೇಳಬೇಡಿ. ನನ್ನ ಸೂಕ್ಷ್ಮ ಶರೀರದ ಅನುಭವ ಇದು. ನನಗೂ ಅದಕ್ಕೂ ಏನೇನೂ ಸಂಬಂಧ ಇಲ್ಲಾ ಅಂತ ಈಗ್ಲೇ ಘಂಟಾ ಘೋಷವಾಗಿ ಹೇಳ್ಬಿಡ್ತೇನೆ.

– ಸಂಪಾದಕ

# ಕದೀಮರಿಗೊಂದು ಶಾಲೆ

**- ಶ್ರೀನಿವಾಸ ವೈದ್ಯ (ಶೀನೂ)**

ಪ್ರೇಮ, ಯುದ್ಧ ಹಾಗೂ ರಾಜಕಾರಣ ಈ ಮೂರೂ ಕ್ಷೇತ್ರಗಳಲ್ಲಿ ಯಶಸ್ಸಿಗೋಸ್ಕರ ಯಾವುದೇ ಮಾರ್ಗವನ್ನನುಸರಿಸಬಹುದೆಂಬುದು ತಿಳಿದ ವಿಷಯವೇ. ಆದರೆ ಈ ರೀತಿ ವಾಮಮಾರ್ಗವನ್ನನುಸರಿಸುವಾಗ, ಅನುಸರಿಸಿ ದಕ್ಕಿಸಿಕೊಳ್ಳುವಾಗ ಕದೀಮರಿಗೆ ನಿತಾಂತ ಧೈರ್ಯವೂ, ತೀಕ್ಷ್ಣ ಸಮಯ ಪ್ರಜ್ಞೆಯೂ ಹರಿತವಾದ ಚಾಕಚಕ್ಯತೆಯೂ ಅತ್ಯಾವಶ್ಯಕವಾದ ಗುಣಗಳೆಂದು ಬೇರೆ ಹೇಳಬೇಕಿಲ್ಲ.

ಕಾರ್ಕೋಟಕ ರಾಜ್ಯದ ಮುಖ್ಯಮಂತ್ರಿಗಳು ನಮ್ಮ ಮುಸ್ಲಿಂ ಬಾಂಧವರ ಈದಗಾ ಪ್ರಾರ್ಥನೆಗೆ ಅನುಕೂಲವಾಗಲೆಂದು ವಿಧಾನಸೌಧದ ಬ್ಯಾಂಕ್ವೆಟ್ ಭವನವನ್ನು ತೆರವುಗೊಳಿಸಿ ಕೊಡುವ ನಿರ್ಣಯ ಕೈಗೊಂಡಿದ್ದರಷ್ಟೆ! ಆಗ ಅವರ ಆಪ್ತ ಕಾರ್ಯದರ್ಶಿ ಮೂರ್ಖರಂತೆ ಅವರಿವರ ಮಾತು ಕೇಳಿ ಇಂತಹ ನಿರ್ಣಯದಿಂದ ಮುಸ್ಲಿಮೇತರರ ಮನನೋಯುವದೆಂದೂ ಅದರಿಂದ ಪಕ್ಷಕ್ಕೆ ಒಳ್ಳೆಯದಾಗುವುದಿಲ್ಲವೆಂದೂ ಭಾವಿಸಿ ಗಾಬರಿಯಾಗಿ ಮುಖ್ಯಮಂತ್ರಿಗಳ ಕೊಠಡಿಗೆ ಧಾವಿಸಿ ಬರುತ್ತಾನೆ.

ಆಪ್ತಕಾರ್ಯದರ್ಶಿ (ಆ.ಕಾ) .... ಸರ್ರ.... ಇದೇನು ಮಾಡತಾ ಇದ್ದಿರಿ.... ತುರುಕರಿಗೆ ನಮಾಜ ಮಾಡಲಿಕ್ಕೆ ವಿಧಾನಸೌಧಾ ಖಾಲೀ ಮಾಡಿಸಿ ಕೊಡಾಕ ಹೊರಿಟೀರೆಂತ.....?

ಮುಖ್ಯಮಂತ್ರಿ: ಹೌದು.... ಏನಾತೀಗ?

ಆ.ಕಾ: ಸರ್ರ ದಯವಿಟ್ಟು ಹಾಂಗ ಮಾಡಬ್ಯಾಡರೀ... ಇಲ್ಲದ ರಗಳೀ ಮೈಮ್ಯಾಲ ತೊಗೊಂಡಂಗ ಆದೀತು.

ಮು.ಮ: ಏನ ರಗಳಿ?

ಆ.ಕಾ: ನಾಳೆ ಹಿಂದೂ ಮಂದೀನೂ ಬಂದು ನಮಗೂ ಯಾತಕ್ಕಾರ್ರ ಕೊಡರೀ ಅಂದ್ರ?

ಮು.ಮ:ಆ.ಕಾ. ನೀ ಸುಮ್ಮಸುಮ್ಮನ ಗಾಬರಿ ಆಗಾಕ ಹತ್ತೀದಿ. ಹಿಂದೂ ಅಂದರ ಯಾರು? ಯಾರಾರ ಹಿಂದೂ ಅನಕೊಳ್ಳಾಕ ತಯಾರ ಇದ್ದರ್ರ ನಮ್ಮ ಹಿಂದೂಸ್ಥಾನದ ಗತಿ ಹಿಂಗ್ಯಾಕ ಆಗತಿತ್ತು? ಇಷ್ಟೂ ಮೀರಿ ಒಂದವ್ಯಾಳ್ಯಾ ಯಾರಾರ ನಾವು ಹಿಂದೂ ಅನಕೊಂಡ ಬಂದರಂತ ತಿಳಿ..... ಆವಾಗ ನಾವು ಬಿ.ಜೆ.ಪಿ.ಯವರನ ಸಿಕ್ಕಹಂಗ ಬಾಯಿಗೆ ಬಂಧಂಗ ಬಯ್ದರಾತು.

ಆ.ಕಾ: ಆದರೂ.. ಹಿಂದೂ ಮಂದಿಯೊಳಗಿನ ಬ್ಯಾರಬ್ಯಾರೆ ಜಾತಿಯವರು ಬಂದರ?

ಮು.ಮ: ಹಂಗಂದ್ರ ಯಾರು.... ಬಿಡಿಸಿ ಹೇಳಲ್ಲ....

ಆ.ಕಾ: ತಿಳೀರಿ, ನಾಳೆ ಒಂದು ವ್ಯಾಳ್ಯಾಕ್ಕ ಒಕ್ಕಲಿಗರು.... ಅಂದರ ಗೌಡರ ಜನ..... ಬಂದು ಗಣಪತಿ ಕುಂದರಸತೇವು ಯಿದಾನ ಸೌದಾ ತೆರವು ಮಾಡಸರಿ ಅಂದ್ರ ಏನ ಮಾಡತೀರಿ?

ಮು.ಮ: ಈಗಾಗಲೇ ಗೌಡರದೊಂದು ದೊಡ್ಡ ಗಣಪತಿ ಅಲ್ಲೆಯಲ್ಲಾಕೂ ಮ್ಯಾಲೆ ಕುಂತ್ಯೆತ್ಯಲ್ಲ... ಮತ್ತ ಇಲ್ಲೆ ಯಿದಾನಸೌದದಾಗ ಯಾಕ ಗಣಪತಿ ಕುಂದರಸತಾರಂತ?

ಆ.ಕಾ: ಹಂಗಲ್ಲರೀ ಸರ.. ಇದು ವಿದ್ಯಾಗಣಪತಿರೀ...

ಮು.ಮ: ಇದು ವಿದ್ಯಾಗಣಪತಿ ಆದರ ಮತ್ತ ಅದೂ....ಹೋಗಲಿ ಏನಾರ ಸಾಯಕೊಳ್ಳಿ ನಮಗೇನ ಮಾಡೂದು .....ಯಿದಾನ ಸೌದದಾಗ ಗಣಪತಿ ಕುಂದರಸತೀವಿ ಅಂತ ಗೌಡರ ಮಂದಿ ಬಂದರ.... ಯಿದಾನಸೌದಾ ಖಾಲಿ ಮಾಡಿಸಿಕೊಟ್ಟರಾತು ನಮ್ಮದೇನ ನಮ್ಮಪ್ಪನ ಮನೀ ಗಂಟ ಹೋಗತೈತಿ.

ಆ.ಕಾ: ಅಷ್ಟರ ಮ್ಯಾಗ ಸುಸೂತ್ರ ಬಗೀಹರದರ ಚಿಂತಿಲ್ಲರೀ ಸರ.... ಆದರ ನಾಳೆ ಹೋಳಿ ಹುಣ್ಣಿವಿ, ಉಗಾದಿ, ದಸರಾ, ದೀಪಾವಳಿ ಅಂತ ಬರಾಕ ಹತ್ತಿದರ ಆವಾಗ ಏನ ಮಾಡತೀರಿ?

ಮು.ಮ: ಯಾವಾಗ ಬೇಕ ಆವಾಗ ಯಾರಿಗೆ ಬೇಕ ಅವರಿಗೆ ಕಾಲಿಮಾಡಿಸಿಕೊಡು. ನಮ್ಮದೇನು ನಮ್ಮಪ್ಪನ ಮನಿ ಗಂಟ ಹೋಗೋದೈತಿ. ಯಷ್ಟಯಷ್ಟ ಹೆಚ್ಚ ಮಂದಿಗೆ ಕೊಡತೀ ಅಷ್ಟಷ್ಟ ಹೆಚ್ಚಿನ ವ್ಹೋಟ ಬೀಳತಾವು ಪಾರ್ಟಿಗೆ.

ಆ.ಕಾ: ಅಲ್ಲ ಸರ ಎಷ್ಟಂತ ವಿಧಾನಸೌದಾ ಕಾಲೀ ಮಾಡಿಸಿಗೋಂತ ಹೋಕ್ಕೀರಿ..... ನಾಳೆ ಲಿಂಗಾಯಾತರೆಲ್ಲ ಬಂದು ಬಸವಜಯಂತಿ ಆಚರಿಸತೇವು ಕಾಲೀ ಮಾಡರೀ ಅಂದ್ರ.

ಮು.ಮ: ಕಾಲಿ ಮಾಡಿಸೂದ..... ಆದರಾಗ ವಿಚಾರ ಮಾಡೂಹಂತಾದ್ದೆನೈತಿ... ನಮದೇನ ನಮ್ಮಪ್ಪನ ಮನಿಗಂಟ ಹೋಗತೈತಿ.... ಆದರ ಲಿಂಗಾಯಿತರಿಗೆ ಕೊಟ್ಟರ ಹೋಮ ಡಿಪಾರ್ಟ್‌ಮೆಂಟಗೆ ಪೋಲೀಸ ಬಂದೋಬಸ್ತ ಕಡಕ್ ಇರಬೇಕಂತ ಹೇಳು. ಈಗೀಗ ಅವರೊಳಗೂ ಮಾರಾಮಾರಿ ಭಾಳ ಆಗಾಕ ಹತ್ಯಾವ.

ಆ.ಕಾ: ಮತ್ತ ಸರ, ಒಂದು ವ್ಯಾಳ್ಯಾ ಅಂಬೇಡಕರ ಮಂದಿ ಬಂದು ನಮಗೂ ಕೊಡ್ರಿ ಅಂದ್ರ...?

ಮು.ಮ: ಮದಲ ಕೊಡಬೇಕೋ ಹುಚ್ಚಪ್ಪಾ... ಅವರ ಹೆಸರ್ಲೇನ ನಮ್ಮ ಕುರ್ಚಿ ಗಟ್ಟಿ ಉಳಿತಾವು... ಕೊಡು ಕೊಡು.... ನ.ನ.ಮ.ಗಂ. ಹೋ. ಕೊಡು.

ಆ.ಕಾ: ಸರ ಒಂದ ವ್ಯಾಳ್ಯಾಕ ಆ ಕೆಂಪ ಕೆಂಪ ಹೊಟ್ಟಿ ಮಾರವಾಡೆರಲ್ಲ ಬರತಾರಲ್ಲ .... ಬೆಳ್ಳಿ..... ಬಂಗಾರ.... ಕುದರಿ.... ಬ್ಯಾಂಡ ಎಲ್ಲಾ ತೊಗೊಂಡು... ಅವರು ಬಂದರ....?

ಮು.ಮ: ಕೊಡು, ನ.ನ.ಮ.ಗಂ.ಹೊ

ಆ.ಕಾ: ಕಿರಿಸ್ತಾನರು ಬಂದು ಮ್ಯಾಣಬತ್ತಿ ಹಚ್ಚತೇವಂದರ....?

ಮು.ಮ: ಕೊಡು, ನ.ಸ.ಮ.ಗಂ. ಹೋ

ಆ.ಕಾ: ಸರS ಸರS ಆ ಗಡ್ಡದ ಶೀಖರು ಬರತಾರಲ್ಲರೀ ಗಡ್ಡದಾಗ ಯಾರು ಯಾರಂತ ತಿಳಿಯೂದಿಲ್ಲSS ಅವರು ಬಂದರ.:..?

ಮು.ಮ: ಕೊಡು, ನ.ನ.ಮ.ಗಂ. ಹೋ....

ಆ.ಕಾ: ತಿಳೀರಿ ಸS ರS.... ನಾಳೆ ಬ್ರ್ಯಾಹ್ಮಿನ್ಸ ಬಂದು ಕೇಳಿದರ....?

ಮು.ಮ: ಕೊಡೂ.... ನ.ನ.ಮ..... ಹಾ... ಹಾ... ಸ್ಟಾಪ್... ಸ್ಟಾಪ್.... ಅ ಯಾರಂದೀ?

ಆ.ಕಾ: ಬ್ರ್ಯಾಹ್ಮಿನ್ಸ...

ಮು.ಮ: ಅಂದ್ರ ಹಾರೂರSS?

ಆ.ಕಾ: ಹೌದರೀ....

ಮು.ಮ: ಥೀ... ಥೆ.. ಹಾರೂರಿಗೆ ಮಾತ್ರ ಕೊಡಬ್ಯಾಡ... ಆ ದಡ್ಡತನ ಏನಾದರೂ ಮಾಡಬ್ಯಾಡ ಹಾರೂರಿಗೆ ಏನಾರ ಕೊಟ್ಟರ ಯಾಂಟಿ ಸೆಕ್ಯೂಲರ್ ಆಗತೈತಿ.

ಆ.ಕಾ: ಹಂಗ ಹ್ಯಾಂಗರೀ ಸS ರS ಹಾರೂರಿಗೆ ಕೊಟ್ಟರ ಯಾಂಟಿ ಸೆಕ್ಯೂಲರ ಆಗತೈತಿ ಅಂತ ಕಾನ್ಸ್ಟಿಟೂಸನ್‌ದಾಗ ಎಲ್ಲಿ ಬರದೈತಿ?

ಮು.ಮ: ಯಲ್ಲಾನೂ ಕಾನ್ಸ್ಟಿಟೂಶನ್‌ದಾಗ ಬರದಿರಾಕಬೇಕಂತ ಏನ ನೇಮ ಇಲ್ಲ. ಇದು ಆನ್‌ರಿಟನ್ ಕಾನ್ಸ್ಟಿಟ್ಯೂಶನ್.

ಆ.ಕಾ: ಸS ರS ಯಿಚಾರ ಮಾಡಿನೋಡ್ರಿ ಈಗೀಗ ಹಾರೂರೂ ಪ್ರತಿ ಇಲೆಕ್ಷನ್‌ದಾಗ ತಲಿ ತಕ್ಕೊಂಡು ಬಂದು ಮತ ಚಲಾಯಿಸಾಕಹತ್ಯಾರ. ಮದಲಿನ್ಹಂಗ ಮನ್ಯಾಗ ಕುಂದರೂದುಲ್ಲ ಈಗ.... ಅಷ್ಟS ಅಲ್ಲದS ಈಗೀಗ ಅವರೂ ಸಾಬರ ಗತೇನS ಯನ್‌ಬ್ಲಾಕ್ ವ್ಹೋಟು ಹಾಕ್ಯಾರು. ಮನ್ನಿ ಇಲೆಕ್ಶನ್‌ದಾಗ ನೋಡಿದರೆಲ್ಲ ನೀವSS ಶಿವಾಜಿನಗರದ ಪೆಟಿಗಿ ಯಾವು ಬಸವನಗುಡಿ ಪೆಟಿಗಿ ಯಾವು ತಿಳಿಧಂಗ ಯನಬ್ಲಾಕ ಹೋಟ ಬಿದ್ದಿದ್ದವು.

ಮು.ಮ: ಹಾಕಲಿ ಬಡು... ಹಾರೂರ ವ್ಹೋಟಗೊಳ ಇರತಾವರS ಎಷ್ಟ.... ಎರಡ ಪರ್ಸೆಂಟ್... ಯಲ್ಲಿ ಬೇಕಲ್ಲಿ ಹಾಕನ್ನು.

ಆ.ಕಾ: ಸS ರS ಯಾವ ಜಗತ್ತಿನ್ಯಾಗ ಅದೀರಿ ನೀವು? ಮೊದಲಿನ ಕಾಲಕ್ಕ... ಅಂದರ ನೆಹರೂ ಅವರ ಕಾಲಕ್ಕSS... ನಿಜಲಿಂಗಪ್ಪ ಅವರ ಕಾಲಕ್ಕ ಆಧಂಗ ಈಗ ಯಾರೂ ಲಕ್ಷಗಟ್ಟಲೇ ಹೆಚ್ಚಿನ ಮತದಿಂದ ಆರಿಸಿ ಬರೂದಿಲ್ಲ... ಈಗೇನಿದ್ದರೂ ಭಾಳಂದ್ರ ನಾಲ್ಕೈದು ಸಾವಿರ... ಒಮ್ಮೊಮ್ಮೆ ಅನಕಾ ಬರೇ ನಾಕೈದು ನೂರು..... ಅಷ್ಟS

ಮು.ಮ: ಹೌದಲ್ಲ...! ನೀ ಹೇಳೋದು ಕರೆಕ್ಟ ಅಯಿತಿ..... ಹೀಂಗಂತ ಹಾರೂರಿಗೆ

ಕೊಡಾಕ ಬರತೈತೆನು ಯಲ್ಲಾ ಬಿಟ್ಟು..... ಕೊಟ್ಟರೂ ಒಂದತರಾ.... ಕೊಡದಿದ್ದರೂ ಒಂದತರಾ... ಏನ ಕೆಟ್ಟ ಜಾತಿಯೋ... ಯಾವಾಗಿದ್ದರೂ ತಲೀ ಕೆಡಿಸಿರತಾರ.... ಅದಸಲೀ.... ಆದರ ಹೋಳಿಹುಣ್ಣಿವಿ, ಯುಗಾದಿ, ಗಣಪತಿ, ದಸರೇ, ದೀಪಾವಳಿ ಯಲ್ಲಾದಕ್ಕೂ ಕೊಡತೇವಲ್ಲ. ಈ ಯಲ್ಲಾ ಹಬ್ಬದಾಗೂ ಹಾರೂರು ಬಂದು ಭಾಗ ವಹಿಸಬಹುದಲ್ಲ.... ಅವರದೊಂದು ಸೆಪರೇಟ ಪ್ರತ್ಯೇಕ ಅಂತ ಯಾವ ಹಬ್ಬ ಇರತೈತಿ?

ಆ.ಕಾ: ಹಾರೂರದ ಏನೇನು ಬಾನಗಡಿ ಇರತೈತೋ ಹೆಂಗಗೊತ್ತರೀ... ಹಾಂ... ತಿಳೀರಿ. ಅವರದೊಂದು ''ಸರ್ವಪಿತೃ ಅಮಾಸಿ'' ಅಂತ ಇರತೈತಿ, ಅದಕ್ಕ ಕೊಡರಿ ಅಂತ ಕೇಳಿದರ?

ಮು.ಮ: ಅದೇನದು ಸರೂಪುತ್ರ.... ಅಂದರ....

ಆ.ಕಾ: ಪುತ್ರ ಅಲ್ಲ ಸSರS ಪಿತೃ....

ಮು.ಮ: ಯಾಡ್ಡೂ ಒಂದS... ಏನ ಹಂಗಂದ್ರ?

ಆ.ಕಾ: ನನಗೂ ಗೊತ್ತಿಲ್ಲರೀ ಸSರS ನಾ ಎಷ್ಟಕೇಳೇನಿ ಅಷ್ಟರಾಗ ಹೇಳಬೇಕಂದ್ರ ವರಸಾ ಶೂನ್ಯಮಾಸದಾಗ ಬಂದ ಅಮಾಶಿದಿನ ಯಲ್ಲಾ ಹಾರೂರು ಕೂಡಿ ತಮ್ಮ ತಮ್ಮ ಶ್ರಾದ್ಧ ಮಾಡಿಕೋತಾರಂತ ಕೇಳೇನಿ. ಹಂಗS ಪ್ರತಿ ವರಸ ಶೂನ್ಯ ಮಾಸದ ಅಮಾಶಿದಿನ ಯಿದಾನಸೌದಾ ಕಾಲೀ ಮಾಡಿಸಿ ಕೊಡರಿ ನಾವು ಶ್ರಾದ್ಧ ಮಾಡಿಕೊಂತೇವಿ ಅಂತ ಕೇಳಿದರ ಏನ ಮಾಡತೀರಿ?

ಮು.ಮ: ಹೌದಲ್ಲ... ಈ ವಿಚಾರನS ಬಂದಿದ್ದಲ್ಲಬಿಡ ನನಗS... ಅಂಥಂಘ ಯಲ್ಲ ಕಡೇ ಇರೂ ಹಂಗ ಹಾರೂರಾಗೂ ಸಬ್‌ಕಾಸ್ಟ- ಅಂದರ ಮಾಧ್ವರು, ಶೈವರೂ ಬಬ್ಬರ ಕಮ್ಮೇರು, ಅಬ್ಬರಾಮಾಡವರೂ, ಇರತಾಂತ ಕೇಳೇನಿ- ಅವರವರಲ್ಲೇ ಏನಾರ ಮಾಡಿ ತಂಟೆ ಬರೂಹಂಗ ಮಾಡಿದ್ರ...?

ಆ.ಕಾ: ಕಟಿಣ ಅಯಿತರೀ ಸSರS... ನಾವು ತಿಳಕೊಂಡಷ್ಟು ಸರಳ ಇಲ್ಲರೀ...

ಮು.ಮ: ಯಾಕ....? ಈಗ ಸಾಬರೂ ತಮ್ಮ ತಮ್ಮೊಳಗS ಬಡದಾಡಾಕ ಹತ್ಯಾರು..... ಲಿಂಗಾಯತರೂ ಮಾರಾಮಾರಿ ಮಾಡಕ ಹತ್ಯಾರು.... ಗೌಡರನಕಾ ಒಬ್ಬರನ್ನೊಬ್ಬರು ಹರಕೊಂಡು ತಿಂತಾರ.... ಅಯಿವತ್ತ ವರಸದಾಗ ಅಷ್ಟರ ಸಾಧಿಸೇವಿ.... ಹಂತಾದರಾಗ ಹಾರೂರದೇನ ಸ್ಪೆಶಾಲಿಟಿ?

ಆ.ಕಾ: ಹಾಂಗೇನಿಲ್ಲರೀ ಸSರS.... ಬಾಕೀ ಟೈಮದಾಗ ಅವರೂ ಬೇಕಾದಷ್ಟ ಕಚ್ಚ್ಯಾಡ ತಾರ..... ಆದರS ತಿಥಿ ಮಾಡೂ ಟೈಮದಾಗ ಮಾತ್ರ ಎಲ್ಲಾರೂ ಒಕ್ಕಟ್ಟಾಗಿ ಮಾಡತಾರ್ರಿ .... ಇವರ ತಿತೀ ಅವರ ಮಾಡತಾರು... ಅವರ ತಿತಿ ಇವರ ಮಾಡತಾರು.. ನೋಡಾಕ ಚಂದ ಇರತೈತರಿ ಸSರS.

ಮು.ಮ: ಅಲ್ಲೋ ಆ.ಕಾ. ನೀ ಏನಂತೀ ಒಂದೀಟ ತಿಳಿಯೂ ಹಂಗ ಹೇಳಲ್ಲ?.....

ಒಮ್ಮೆ ಶ್ರಾದ್ಧ ಅಂತೀ, ಒಮ್ಮೆ ತಿತಿ ಅಂತೀ, ಒಮ್ಮೆ ಅದೇನೋ ಸರೂಪಿತ್ರ ಅಂತೀ....

ಆ.ಕಾ: ಯಲ್ಲಾ ಒಂದsರೀ ಸsರs ಸರೂ ಪಿತ್ರ ಅಮಾಸಿ ದಿವಸ ಯಲ್ಲಾ ಹಾರೂರು ಕೂಡಿ ಶ್ರಾದ್ಧ.... ಅಂದರ ತಿತೀನs ಮಾಡತಾರ್ರೀ...

ಮು.ಮ: ಅಂದ್ರ... ಎಳ್ಳು ನೀರು ಬಿಟ್ಟ ಮಾಡತಾರಲ್ಲs ಅದs ತಿತಿ ಹೌದಲ್ಲೋ...

ಆ.ಕಾ: ಹೌದರೀ ಸsರs

ಮು.ಮ: ಇಷ್ಟsನs....ಹಂಗಾರ ಯಿದಾನ ಸೌದಾ ಹಾರೂರಿಗೆ ಕೊಡಾಕ ಬರೂದಿಲ್ಲ ಅಂತ ಹೇಳು

ಆ.ಕಾ: ಅದ್ಯಾಕ ಬರೂದುಲ್ಲರೀ ಸsರs

ಮು.ಮ: ನೋಡು ತಮ್ಮಾ... ಹಾರೂರು ವರಷಕ್ಕ ಒಂದಸರೆ ಶೂನ್ಯ ಮಾಸದಾಗ ಅಮಾಶಿ ದಿವ್ಸ ತಮ್ಮ ತಮ್ಮದಷ್ಟs ಶ್ರಾದ್ಧ ಮಾಡಿಕೊಂತಾರು... ಅಂದರ ತಮ್ಮ ಜಾತಿಯವರದಷ್ಟs ತಿತಿ ಮಾಡಿಕೊಂತಾರು.

ಆದರ ನಮ್ಮ ಸರಕಾರ ಸರ್ವದರ್ಮ ಸಮಾನ ಬಾವದ ಸರಕಾರ. ಎಲ್ಲಾರನೂ ಒಂದs ರೀತಿ ನೋಡಿಕೋಬೇಕಾಗತ್ತೈತಿ..,. ಒಬ್ಬರಿಗೊಂದು ಒಬ್ಬರಿಗೊಂದು ಮಾಡಾಕ ಬರೂದಿಲ್ಲ.... ಅದಕ್ಕಂತs ನಾವು ಹನ್ನೆರಡು ತಿಂಗಳೂ.... ದಿನ ನಿತ್ಯ..... ಯಿದಾನಸೌದದಾಗ ಕುಂತಕೊಂಡು ಮುಕ್ಕೋಟಿ ಕನ್ನಡಿಗರ ತಿತಿ ಮಾಡತಿರತೀವಿ. ಹಿಂಗಾಗಿ ಹಾರೂರಿಗೆ ಸೆಪರೇಟ ತಿತಿ ಮಾಡಿಕೊಳ್ಳಾಕ ಕೊಟ್ಟರs ಗೈರ ಆಗತೈತಿ. ಅದಕ್ಕsss..... ಅದ್ಹೆಂಗ ಹಾರೂರಿಗೆ ಕೊಡಾಕ ಬರತೈತಿ......

---

ಕೈಲಾಸಮ್‌ಗೆ
ಗ್ರಂಥಸ್ಮಾರಕ
ಸಲ್ಮನ್ ರಷ್ದಿಗೆ
ಗ್ರಂಥವೇ ಮಾರಕ

– ಶಂಪ

# ಖದೀಮರಿಗೊಂದು ಶಾಲೆ

ಡಾ|| ಓಂ ಪ್ರಕಾಶ್

''ವತ್ಸನ!''

''ಏನು ಶರಲೇಖ?''

''ಬಾಗಿಲು ತಟ್ಟಿದ ಸದ್ದಾಯಿತು! ಯಾರು ನೋಡು!''

ಶರಲೇಖನ ಚುರುಕು ಕಿವಿಗಳು ನಿಜವನ್ನೇ ಹೇಳಿದ್ದವು. ಬಾಗಿಲು ತೆಗೆದೆ. ಮಹಾನಗರಿಯ ಮುಖ್ಯ ಪೋಲಿಸ್ ಅಧಿಕಾರಿ ಲಸ್ತ್ರದ ನಿಂತಿದ್ದ. 'ಒಳಗೆ ಬರಲಪ್ಪಣೆಯೆ?' ಎಂದು ನಕ್ಕ ಶರಲೇಖ , 'ಬನ್ನಿ ಬನ್ನಿ' ಎಂದು ಕಾಫಿ ಬಗ್ಗಿಸಿದ. ಇಲ್ಲಿಯ ತನಕ ಬರಲು ಕಾರಣ? ಎನ್ನುವಂತೆ ಹುಬ್ಬೇರಿಸಿದ.

ಲಸ್ತ್ರದ ಉವಾಚ: ''ಕಳೆದ ಒಂದು ವರ್ಷದಿಂದ, ನಗರದಲ್ಲಿ ಒಂದು ಬಹಳ ಇಂಟಲಿಜೆಂಟ್ ಕಾನ್‌ಮೆನ್ ಗ್ರೂಪು ತೊಂದರೆ ಕೊಡ್ತಿದೆ. ಇದರ ಮೂಲ ಬೇಧಿಸುಕ್ಕೆ ನಮಗೆ ಆಗ್ತಾ ಇಲ್ಲ. ನೀವು ಏನಾದರೂ ಮಾಡಿ ನಂ ಮಾನ ಉಳಿಸಬೇಕು!'' ಶರಲೇಖನಿಗೆ ರೇಗಿದಂತೆ ಕಂಡು ಬಂತು. 'ಈ ಚಿಲ್ರೆ ಕೇಸಿಗೆಲ್ಲ ನನ್ನಂಥ ವಿದ್ವಾಂಸ ನನ್ನ ಯಾಕೆ ಕರೀತೀರ?' ಅಂದು ಪಿಟೀಲು ಕೈಗೆ ತಗೊಂಡ ನಾನು ಇಂಟರ್‌ವೀನಿದೆ!

'ಶರಲೇಖ, ಈ ಕ್ರೈಂ ರಿಂಗ್ ನಲ್ಲೂ ಇಂಟರೆಸ್ಟಿಂಗ್ ಪಾಯಿಂಟ್ಸ್ ಇರುತ್ವೆ! ಒಂದು ಕೈ ಹಾಕಿ ನೋಡೋಣ' ಅಂದೆ. ಶರಲೇಖ ಒಪ್ಪಿದ.

ಒಂದು ವಾರದಲ್ಲಿ, ಈ ಖದೀಮರ ಆಚರಣೆಗಳ ಸುಳಿವನ್ನು ಹುಡುಕಿದೆವು ಅಲ್ಲಿ, ಇಲ್ಲಿ ಸಿಕ್ಕ ಕ್ಲೂಗಳ ಹಿಂದೆ ಬೆಂಬತ್ತಿದವು. ಈ ನೆಟ್‌ವರ್ಕ್ ಹಲವಾರು ವ್ಯವಹಾರಗಳಲ್ಲಿ ತೊಡಗಿದೆ ಎಂದರ್ಥವಾಯಿತು. ಆದರೆ ಅದರ ಮೂಲ ವಿಲನ್ ಯಾರು ಅಂತ ಭೂಗತ ದೊರೆಗಳಿಗೆ ಯಾರಿಗೂ ಗೊತ್ತಿರಲಿಲ್ಲ. ಕೊನೆಗೆ, ಕುಖ್ಯಾತ ಖದೀಮ ಮರಿಯಾಟ್ಟಿ ( ಉತ್ಸುಕ ಓದುಗರು, ಇದೇ ಲೇಖನದ 'ಮರಿಯಾಟ್ಟಿ; ಕನ್ನ; ಚಿನ್ನ' ಎಂಬ ಭಯೋಗ್ರಫಿಯನ್ನ ಓದಬಹುದು) ಅವನನ್ನೇ ಕಂಡೆವು. ಅವನೂ ಚಕಿತನಾದಂತೆ ಕಂಡುಬಂತು. ಆದರೆ, ಹಲವು ತರಹ ಸ್ಪೆಷಾಲಿಟಿ ಖದೀಮರು ತಯಾರಾಗ್ತಾ ಇದಾರೆ ಅಂತ ಮರಿಯಾಟ್ಟೀನೂ ಒಪ್ಪಿಕೊಂಡ. ಉದಾಹರಣೆಗೆ, ಸ್ಪೆಷಲ್ ಕಾಗದ ಖದೀಮರು: ಇವರ ಹತ್ತಿರ, ಯಾವ ಕಾಲದ ಹಳೇ ಪೇಪರ್ ಬೇಕಾದ್ರು ಸಿಕ್ಕುತ್ತೆ! ಹಳೇ ಕಾಲದಲ್ಲಿ ಉತ್ಪಾದಿಸಿದ ಖಾತಾಗಳನ್ನು, ಅದೇ ಸಮಕಾಲೀನ ಸ್ಟೀಲುಗಳು, ಇಂಕುಗಳಲ್ಲಿ ತಯಾರಿಸುವ ಜಾಲ, ಬಹು ಮುಖ್ಯವಾದದ್ದು ಅಗ್ರಿಕಲ್ಚರಲ್ ಭೂಮೀನೆಲ್ಲ ಕಬಳಿಸಿ, ಮನೆ ಕಟ್ಟುಕ್ಕೆ ಕಬಳಿಸಲು ಇದೊಂದು (ಕಾಲಾತೀತ) ವಿಧಾನ.

ಇನ್ನೊಂದು ಉದಾಹರಣೆ: ರಾಜಕೀಯ ಮುಖಂಡರು ಬಂದಾಗ, ರೆಂಟ್ ಎ ಕ್ರೌಡ್ ಕಾರ್ಯಕ್ರಮ ಎಲ್ಲರಿಗೂ ಗೊತ್ತಿರೋದೇ! ಆದರೆ, ಇದನ್ನು ಬಹಳ ಪ್ರೊಫೆಷನಲ್ಲಾಗಿ ಮಾಡಿ, ಮಂತ್ರಿವರ್ಯರನ್ನ ಸಂತುಷ್ಟಗೊಳಿಸಲು ಒಂದು ಟೀಂನ ಅಗತ್ಯ ಮನಗಂಡು, ಒಂದು ಸುಸಜ್ಜಿತ ವ್ಯವಸ್ಥೆ ಮಾಡಿದ್ದಾರೆ. ಒಂದು ಗಂಟೆ ನೋಟೀಸ್ ಕೊಟ್ಟರೆ ಸಾಕು, ಸಾವಿರಾರು ಜನರನ್ನ ಮೊಬಿಲೈಸ್ ಮಾಡೋ ಶಕ್ತಿ ಇದೆ ಅಂತ ಖದೀಮರ ಲೀಡರ್ ಜಂಭ ಕೊಚ್ಚಿಕೋತಾನೆ.

ನಗರಕ್ಕೆ ಪ್ರತಿದಿನ ಸಾವಿರಾರು ಪ್ರವಾಸಿಗಳು ಬರ್ತಾ ಇರ್ತಾರೆ! ಅವರನ್ನೆಲ್ಲ, ಸ್ಟೇಷನ್, ಬಸ್‌ನಿಲ್ದಾಣ ಇತ್ಯಾದಿ ಜಾಗಗಳಲ್ಲಿ ಸ್ವಾಗತಿಸಿ, ಸರಿಯಾದ (!) ಹೋಟೆಲ್‌ಗಳಿಗೆ ತಲುಪಿಸೋದು ಬಹು ದೊಡ್ಡ ಹಾಗೂ ನೋಬಲ್ ಕೆಲಸ! ಈ ಜವಾಬ್ದಾರೀನ ಸಾರಾಸಗಟಾಗಿ ವಹಿಸಿಕೊಂಡಿರುವ ಖದೀಮ ವರ್ಗ್ಗದ ಕೈ ಕೆಳಗೆ , ಸಾವಿರದ ಐನೂರು ಸಿಬ್ಬಂದಿ ಇದಾರೆ ಎಂದು ಪ್ರತೀತಿ! ಇವರೆಲ್ಲ ನಾಜೂಕಾಗಿ, ಜಾಣ್ಮೆ ಹಾಗೂ ಚತುರತೆ, ಆಟೋ ಮತ್ತು ಟ್ಯಾಕ್ಸಿಗಳ ಜತೆ ನೆಕ್ಸಸ್, ಹೋಟೆಲ್ ಮಾಲೀಕರ ಜತೆ ಅಡ್‌ಜಸ್ಟ್‌ಮೆಂಟ್ ಇದನ್ನೆಲ್ಲ ಒಂದು ಸೆಂಟ್ರಲ್ ಕಂಪ್ಯೂಟರ್ ಸಹಾಯದಿಂದ 'ಆಪರೇಶನ್ ಟೂರಿಸ್ಟ್' ನಾಮಾಂಕಿತ ವ್ಯವಸ್ಥೆ ಬಹು ಜಟಿಲವಾದದ್ದು.

ಇದೇ ರೀತಿ-ಜನ ಪ್ರಿಯ ವ್ಯವಸ್ಥೆ ಹಲವಾರು ನಗರದಲ್ಲಿ ಪ್ರತಿಷ್ಠಿತವಾಗಿರೋದು ನಮ್ಮ ಗಮನಕ್ಕೆ ಬಂತು. ಆದರೆ ಈ ರಿಂಗ್‌ನ ಲೀಡರ್ ಯಾರು? ಈ ಪ್ರಶ್ನೆಗೆ ಶರಲೇಖನಿಗೂ ಉತ್ತರ ಸಿಕ್ಕಿದಂತೆ ಕಾಣಲಿಲ್ಲ. ಒಂದು ದಿನ ಸಂಜೆ ಶರಲೇಖ, ಬೇಜಾರಾಗಿ, ಈ ಕೇಸು ನನ್ನ ಕೈಲಿಸಾಧ್ಯವಿಲ್ಲ ಅಂತ ಹೇಳಿಬಿಟ್ಟ! ನನಗೆ ಆಶ್ಚರ್ಯ!! ಎಂತೆಂತಹ ಕೇಸುಗಳನ್ನೇ ಸಾಲ್ವ್ ಕೀರ್ತಿ ಪಡೆದ ಶರಲೇಖನಿಗೆ ಈ ದುರ್ಗತಿಯೆ?

ಭಾನುವಾರ ಸಂಜೆ ಹುರಿಗಾಳು ಮೆಲ್ಲುತ್ತ ಕುಳಿತಿದ್ದೆ. ಇದ್ದಕ್ಕಿದ್ದಂತೆ, ಬಾಗಿಲು ಧಡಾರನೆ ತೆಗೆದುಕೊಂಡು, ಧಾಂಡಿಗನೊಬ್ಬ ಒಳಗೆ ಬಂದ. ನಾನು ಹುಬ್ಬೇರಿಸಿದೆ! ಶರಲೇಖ ಅಂದ್ರೆ ನೀನೇ ಏನು?' ಅಂತ ಘರ್ಜಿಸಿದ! ನಾನು ಯಾಕೆ ಹೀಗೆ ರೇಗಿದಾನೆ ಅಂತ ಯೋಚಿಸಿ, ತಮಾಶೇಗೆ, 'ಹೌದು, ನಾನೇ!' ಅಂದೆ. ಅವನು ಕುಳಿತ 'ನೋಡು ಶರಲೇಖ, ನಾನು ಬೊಂಬಾಯಿಂದ ವಸಂತ ನಾಯಕ್ ಕಡೆಯಿಂದ ಬಂದಿದೀನಿ?' ಅಂದ. ನಾನು (ಬೆಪ್ಪನಂತೆ), 'ಅವನು ಯಾರು?' ಅಂದೆ. ಆಗಂತುಕ ನಕ್ಕ ನಾಯಕ್ ಯಾರು ಆಂತ ನಿನಗೆ ಗೊತ್ತಿಲ್ವೆ? ಈ ನಗರದ ಕ್ರೈಂ ರಿಂಗ್ ಚಾಲಕನಾದ ನಿನಗೆ, ನಾಯಕನ ಹೆಸರು ಗೊತ್ತಿಲ್ಲದೆ ಇರುತ್ತೆ? 'ಅಂತ ಗಹಗಹಿಸಿ ನಕ್ಕ. ನಾನು ಬೆಚ್ಚಿ ಬಿದ್ದು ಹೌಹಾರಿ, ಬೆವರಿದೆ! ನನ್ನ ತಲೆ ಗಿರ್ರೆಂದಿತು.

ಇಷ್ಟು ವರ್ಷ ಶರಲೇಖನಿಗೆ ವಿಧೇಯನಾಗಿ ನಡೆದುಕೊಂಡು ಅವನ ಕತೆಗಳನ್ನೆಲ್ಲ ಬರೆದು ಸಹಾಯ ಮಾಡಿದ್ದಕ್ಕೆ ಇದೇ ಪ್ರತಿಫಲವೆ? ಶರಲೇಖ,

ಮರಿಯಾಟ್ಟಿಯ ತರಹ ವಿಲನ್ ಆಗಿದಾನಲ್ಲ ಅಂತ ನಾನು ಮರುಗಿದೆ, ಆಗಂತುಕ ಎದ್ದ, ''ಶರಲೇಖ, ನಾಯಕ್ ಈ ನಗರದ ಆಪರೇಶನ್‌ಗಳನ್ನೆಲ್ಲ ನಿನ್ನಿಂದ ಕೊಂಡಕೊಳ್ಳಕ್ಕೆ ತಯಾರಾಗಿದಾನೆ! ಅವನ ವಿಷಯ ಜ್ಞಾಪಕ ಇರಲಿ, ಅವನು ಕಿರುಬೆರಳು ಎತ್ತಿದರೆ ಹತ್ತು ಜನಕ್ಕೆ ಹರಿಪಾದ! ಒಂದು ವಾರದಲ್ಲಿ ನಿನ್ನ ಉತ್ತರ ನಮಗೆ ಬೇಕು!'' ನಾಯಕ್ ಹೆಬ್ಬೆಟ್ಟು ಎತ್ತಿದರೆ ಎಷ್ಟು ಜನ ಅಂತ ಆಲೋಚನೆ ಸುಳೀತು. ಆಗಂತುಕ ಅಷ್ಟು ಹೊತ್ತಿಗೆ ಹೊರಟು ಹೋಗಿದ್ದ.

ಮಾರನೆದಿನ ಮಧ್ಯಾನ್ಹ ಶರಲೇಖ ಹಿಂದಿರುಗಿದ. ಬಹಳ ಸುಸ್ತಾಗಿ ಕಂಡ, 'ಅಲ್ಲಿ ಇಲ್ಲಿ ಸುತ್ತಾಡ್ತೀನಿ! ಇನ್ನೆರಡೇ ದಿನದಲ್ಲಿ ಈ ಪ್ರಾಬ್ಲಂ ಸಾಲ್ವ್ ಆದಹಾಗೇ' ಅಂತ ನಕ್ಕ. ನಾನು ಸೈಲೆಂಟಾಗಿ ಕೂತಿದ್ದನ್ನ ನೋಡಿ, 'ಯಾಕೆ ವತ್ಸನ, ಹುಷಾರಾಗಿದ್ದೀಯ ತಾನೆ?' ಅಂದ. ಇನ್ನೆಲ್ಲಿ ಹುಷಾರು? ಲಸ್ತ್ರದನಿಗೆ ನಿಜಸ್ಥಿತಿ ಹೇಳೋದೊಂದೆ ಬಾಕಿ! ಶರಲೇಖನ್ನ ಸೆರೆಮನೆಗೆ ಕರೆದೊಯ್ಯುವ ದೃಶ್ಯ ಮನಸ್ಸಿಗೆ ಬಂದು ನಾನು ಮಮ್ಮಲ ಮರುಗಿದೆ. ಮಾತಾಡದೆ ಕೂತೆ.

ಬುಧವಾರ ಸಂಜೆ, ಲಸ್ತ್ರದ ಬಂದ, ಟೀ ಕುಡಿಯುತ್ತ, 'ಶರಲೇಖ, ಎರಡುವಾರ ಆಗ್ತಾ ಬಂತು ಈ ಸಮಸ್ಯೆ, ರಿಂಗ್‌ಲೀಡರ್‌ನ ಕಂಡುಕಾಡಿದೇ ತಾನೆ?' ಅಂದ. ಅಬ್ಬ, ಅದೆಷ್ಟು ಧೈರ್ಯ ಶರಲೇಖ ನಸುನಗುತ್ತ ಕುಳಿತಿದ್ದ. ಈ ಮಹಾನ್ ಚಿಟ್ರೀಯಲ್‌ನಿಂದ ತಪ್ತನಾಗಿದ್ದ ನಾನು ಎದ್ದು ನಿಂತೆ, 'ಲಸ್ತ್ರದ, ರಿಂಗ್‌ಲೀಡರ್ ನಿನ್ನ ಮುಂದೆಯೇ ಕೂತಿದಾನೆ!' ಅಂದೆ. ಲಸ್ತ್ರದ ಸಿಟಿಂಗ್ ಹೈಜಂಪ್ ರೆಕಾರ್ಡ್ ಸ್ಥಾಪಿಸಿದ! ಶ...ರ...ಲೇ....!'' ಅಂಥ ಬಡಬಡಿಸಿದ! ಶರಲೇಖ ನಸುನಗುತ್ತ ಎದ್ದ. 'ವತ್ಸನ! ನೀನು ಮಾಡ್ತಿರೋ ಅಕ್ಯುಸೇಷನ್ ಬಹು ಭಾರೀ ಪ್ರಮಾಣದ್ದು! ಅದಕ್ಕೆ ಎವಿಡೆನ್ಸ್ ಏನಿದೆ?' ನಾನು ಬಾಯಿ ಬಿಡುವುದರ ಒಳಗೆ, ಶರಲೇಖ ಒಳಗಿನ ಕೋಣೆಯೊಳಕ್ಕೆ ಹೋದ. ಎರಡೇ ಕ್ಷಣದಲ್ಲಿ, ಧಾಂಡಿಗ ರೂಮಿಗೆ ಬಂದ, ಗೊಗ್ಗರು ಧ್ವನಿಯಲ್ಲಿ, ''ಶರಲೇಖ ಅಂದ್ರೆ ನೀನೆ ಏನು?'' ಅಂತ ಹೇಳಿದ, ನನ್ನ ಸರದಿ, ಹೈಜಂಪ್ ಮಾಡೋದಕ್ಕೆ! ಈಗ ಅರ್ಥ ಆಗ್ತಾ ಬಂತು. ಲಸ್ತ್ರದ ಇಂಗು ತಿಂದ ಮಂಗನ ಹಾಗೆ ಕೂತಿದ್ದ.

ಶರಲೇಖ ಹೇಳಿದ, 'ಲಸ್ತ್ರದ, ಬೊಂಬಾಯಿನ ವಸಂತ ನಾಯಕನ ಕೈವಾಡದಿಂದಲೇ ಈ ಕ್ರೈಂ ರಿಂಗ್ ಬಲವಾಗಿರೋದು! ನಾನು ವತ್ಸನನ ಕಾಲೆಳಿದಿದ್ದು ಬರೀ ಕ್ರಿಯೇಟಿಂಗ್ ಕ್ಲೈಮ್ಯಾಕ್ಸ್‌ಗೆ!''

ಲಸ್ತ್ರದ ಹೊರಟ. ನಾನು ಎರಡನೇ ಕಪ್ ಟೀ ಬಗ್ಗಿಸಿದೆ!



# ಖದೀಮರಿಗೊಂದು ಶಾಲೆ

ಇಂದೂ ರಮೇಶ್

ಸೇರಿರಿ ಸೇರಿಕೊಳ್ಳಿ ಸೇರಿರಿ

**ಸರ್ಕಾರೀ ಅಧಿಕಾರಿಗಳಿಗೆ ವಿಶೇಷ ರಿಯಾಯಿತಿ.**

ನಮ್ಮ ಹೊಸ ಶಾಲೆಯನ್ನು ಕುರಿತು ವಿವರವಾದ ಮಾಹಿತಿಯನ್ನು ಕೆಳಗೆ ನೀಡುತ್ತಿದ್ದೇವೆ. ಇನ್ನೂ ಸಂಶಯವಿದ್ದರೆ ನಮ್ಮನ್ನು ಖುದ್ದು ಭೇಟಿ ಮಾಡಬಹುದು.

ನಮ್ಮ ಸಂಪರ್ಕ ವಿಳಾಸ: indu@khadeema.http.com

**ಪ್ರವೇಶ:- ಇಪ್ಪತ್ತನೇ ಶತಮಾನದ ಕೊನೆಯಲ್ಲಿ ಸರ್ಕಾರಕ್ಕೆ ಸೇರಬೇಕಾದರೆ ಕೆಲವು ಕನಿಷ್ಠ ಅರ್ಹತೆಗಳಿರಬೇಕು ಎಂಬ ಅಂಶ ಸರ್ವ ವಿದಿತ. ಈ ಅರ್ಹತೆಗಳಲ್ಲಿ ಭಾವೀ ಅಭ್ಯರ್ಥಿಗಳನ್ನು ತರಬೇತಿಗೊಳಿಸುವುದೇ ನಮ್ಮ ಶಾಲೆಯ ಘನ ಉದ್ದೇಶ.**

**ಸಿಲಬಸ್:-**

(ಅ) ಮೇಜು, ಕುರ್ಚಿ, ಜೋಡಣೆ:

ನಿಮ್ಮ ಟೇಬಲ್ ಕುರ್ಚಿ ಎಲ್ಲಿದೆ, ಯಾವ ದಿಕ್ಕನ್ನ ಇದಿರು ನೋಡುತ್ತೆ. ನಿಮ್ಮ ಠಿಕಾಣೆತಾಣದಿಂದ ಬಾತ್‌ರೂಮ್ ಎಷ್ಟು ದೂರ (ಮೀಟರ್‌ಗಳಲ್ಲಿ) ಕ್ಯಾಂಟೀನ್ ಎಷ್ಟು ದೂರ. ಆಫೀಸರ ಕಣ್ಣಿಗೆ ಎಷ್ಟು ಕನಿಷ್ಠ ಬಾರಿ ಕಾಣಿಸಿಕೊಳ್ಳಬೇಕು ಇತ್ಯಾದಿ.

(ಆ) ತಡವಾಗಿ ಬರುವಿಕೆ:

ಆಫೀಸಿಗೆ ತಡವಾಗಿ ಬರುವವರು ಕೊಡಬಹುದಾದ ಬಗೆ ಬಗೆಯ ಕಾರಣಗಳು. ಇವುಗಳ ತಿರುವು ಮುರುವುಗಳು ಫೈಲುಗಳ ಓಡಾಟಕ್ಕೆ ಆಮೆಗಳ ಬಳಕೆ.

(ಇ) ಕುರ್ಚಿ ಸಿಂಬಲಿಸಮ್:

ನಿಮ್ಮ ಕುರ್ಚಿ ನಿಮ್ಮ ಪ್ರತಿನಿಧಿ. ಎಷ್ಟೇ ಸೆಖೆ ಇದ್ದರೂ, ಕೋಟು, ಜರ್ಕಿನ್, ಸ್ವೆಟರ್ ಇವುಗಳನ್ನು ಧರಿಸುವ ಕಲೆ ಇವುಗಳನ್ನು ಕುರ್ಚಿಯ ಮೇಲೆ ನೇತುಹಾಕಿ, ಹೊರಗೆ ಓಡಾಡುವ ಟೆಕ್ನಿಕ್.

**ಕ್ವಾಲಿಫಿಕೇಷನ್ಸ್:**

(ಅ) ಮೂಲಭೂತವಾಗಿ ಆಫೀಸಿಗೆ ಬರುವುದು ಬೇರೆಲ್ಲಾ ಕೆಲಸಗಳನ್ನು, ಹವ್ಯಾಸಗಳನ್ನು ಮುಗಿಸಿದ ನಂತರವೇ ಎಂದು ದೃಢವಾಗಿ ನಂಬಿರಬೇಕು.

(ಆ) ತಡವಾದದಕ್ಕೆ ಕಾರಣ ಹುಡುಕಲು ತಡವರಿಸಬಾರದು. ನಿಮ್ಮ ತಲೆನೋವು,

ಹೆಂಡತಿ ಮಕ್ಕಳ ಖಾಯಿಲೆ, ಪಕ್ಕದ ಮನೆಯವರ ಮಗನ ಶೀತ, ಹಿಂದಿನ ಬೀದಿಯಲ್ಲಿ ದರೋಡೆ (ನೀವು ಮಾಡಿದ್ದಲ್ಲ), ಹಾಲು ಬರದಿರುವುದು, ಇವೆಲ್ಲವನ್ನೂ ಸ್ವಲ್ಪವೂ ಅಳುಕದೇ ಹೇಳುವ ಸಮಯಸ್ಫೂರ್ತಿ.

(ಇ) ಫೈಲುಗಳನ್ನು ಸ್ವಲ್ಪವೂ ಹಿಂಜರಿಯದೆ ನಿಮ್ಮ ಕುರ್ಚಿಯ ಹಿಂದಿನ ಹಳೇ ಫೈಲುಗಳ ರಾಶಿಯಲ್ಲಿ ಸೇರಿಸುವುದು, ಇದೊಂದು ವಿಶೇಷವಾದ ಕಲೆ. ಏಕೆಂದರೆ ಕೆಲವು ಕೆಟ್ಟ ಆಫೀಸರುಗಳು ತಾವು ಯಾವ ಫೈಲನ್ನು ಯಾರಿಗೆ, ಯಾವಾಗ, ಏತಕ್ಕಾಗಿ ಕಳಿಸಿದ್ದರು ಅನ್ನುವುದನ್ನು ಜ್ಞಾಪಕ ಇಟ್ಟುಕೊಂಡಿರುತ್ತಾರೆ. ಇನ್ನು ಕೆಲವರು Standing Instruction ಕೊಟ್ಟಿರುತ್ತಾರೆ, ''24 ಘಂಟೆಗಳಲ್ಲಿ ನೀವು ನನಗೆ ಕಳಿಸಿದ ಫೈಲ್ ವಾಪಸ್ ನಿಮ್ಮ ಬಳಿ ಬರದಿದ್ದರೆ ನನ್ನನ್ನ ಬಂದು ಕೇಳಿ'' ಅಂತ. Please speak ಅಂತಲೋ, put up previous paper ಅಂತಲೋ ಬರೆದು ಕಳಿಸಿದರೆ ನಿಮಗೆಷ್ಟು ತಲೆನೋವು! ಒಂದೇ ದಾರಿ ಅಂದರೆ, ಹಳೇ ಫೈಲುಗಳ ರಾಶಿಯಲ್ಲಿ ತರಲೆ ಫೈಲನ್ನೂ ಸೇರಿಸಿ, ''ನನ್ನ ಹತ್ತಿರ ಬರಲೇ ಇಲ್ಲ ಸಾರ್'' ಅಂದು, ಹುಡುಕಿದಂತೆ ನಾಟಕವಾಡಿ, ಮುಖ, ಕೈ ಬಟ್ಟೆ ಧೂಳು ಮಾಡಿಕೊಂಡು, ಎರಡು ಸಲ ಸೀನಿ ''ಅಲರ್ಜಿ ಡಾಕ್ಟರ ಹತ್ತಿರ ಹೋಗಬೇಕು'' ಅಂತ ರಜ ಹಾಕುವುದು ಒಂದು ಸೂಕ್ಷ್ಮವಾದ Operation ಅದಕ್ಕೆ ತುಂಬಾ training ಬೇಕು.

(ಈ) ಆಫೀಸಿನ ಕೆಲಸ ಬಿಟ್ಟು ಬೇರೆಲ್ಲಾ ವಿಚಾರಗಳನ್ನು ಗಹನವಾಗಿ ಚರ್ಚಿಸುವ ಸಾಮರ್ಥ್ಯ ಇರುವವರನ್ನು ಗುರ್ತಿಸುವುದು ತುಂಬಾ ಕಷ್ಟ. ಅವರು ಆಫೀಸರ ಬೇಹುಗಾರರಾಗಿರಬಾರದು, ನಿಮ್ಮ ಮಾತನ್ನು ಬೇರೆಯವರ ಹತ್ತಿರ ಹೇಳಿ ನಗೆಪಾಟಲು ಮಾಡಬಾರದು. ನಿಮ್ಮ official ಗೌರವ ಕಾಪಾಡುವವರಾಗಿರಬೇಕು. ಅವರನ್ನು ಗುರ್ತಿಸಿ ನಿಮ್ಮ ಸಂಘಕ್ಕೆ ಸೇರಿಸಿಕೊಳ್ಳುವುದು ಕೂಡ ಸುಲಭವಲ್ಲ.

ಹಾಗಂತಾನೇ ನಮ್ಮ ಶಾಲೆಯಲ್ಲಿ ಸರ್ಕಾರಿ ನೌಕರಿಗೆ ಖದೀಮತನದ ವಿಭಾಗ ಶುರು ಮಾಡಿದ್ದೀವಿ. ವಿಚಾರಿಸಿ ನೋಡಿ, ನಿಮಗೂ ದಾಖಲಾತಿ ಬೇಕೋ ಹೇಗೆ. ಶಾಲೆ ಮುಂದುವರಿದಂತೆ ಹೊಸ ವಿಷಯಗಳನ್ನೂ ಸೇರಿಸುತ್ತೀವಿ- ಉದಾಹರಣೆಗೆ: ಆಫೀಸ್ ಸಮಯದಲ್ಲಿ Real Estate ಬಿಸಿನೆಸ್ ಮಾಡುವುದಕ್ಕೆ ಬೇಕಾದ ಅರ್ಹತೆ, ಹೆಂಗಸರಿಗೆಂದೇ ಕೆಲವು ವಿಷಯಗಳು, ಅತ್ತೆ ಮಾವ ಗಂಡಂದಿರ ಬಗ್ಗೆ ಮಾತನಾಡಲು ಹೊಸ ವಿಷಯಗಳು, ಸೀರೆ ವ್ಯಾಪಾರದ ನಿಯಮಗಳು, ಇತ್ಯಾದಿ ಇತ್ಯಾದಿ.

ಬನ್ನಿ ಸೇರಿಕೊಳ್ಳಿ,

# ಖದೀಮರಿಗೊಂದು ಶಾಲೆ

- ಕೃಷ್ಣ ಸುಬ್ಬರಾವ್

ಅಲ್ಪಪ್ರಾಣ ಮಹಾಪ್ರಾಣ ಅಂತಾ ಪ್ರಾಣ ಬಿಡುವ ವ್ಯಾಕರಣ ಪಂಡಿತರಿಗೊಂದು ವಿವರಣೆ ಕೊಟ್ಟು ಮುಂದೆ ಹೋಗಬೇಕು. ಕದೀಮರಲ್ಲಿ ಶ್ರೇಷ್ಠನಾದವನು 'ಖದೀಮ' ಖದೀಮರಲ್ಲಿ ಶ್ರೇಷ್ಠನಾದವನು ಖಧೀಮನೂ ಆಗಬಹುದು. ನಾನು ಹೇಳಲೂ ಹೊರಟಿರುವ ವಿಷಯ ಹೇಗಿದ್ದರೂ 21ನೇ ಶತಮಾನಕ್ಕೆ ಸಂಬಂಧಿಸಿದ್ದು. 20ನೇ ಶತಮಾನದ ಆದಿಯಲ್ಲೇ ಕೈಲಾಸಂ ಹೇಳಲಿಲ್ಲವೆ 'ವ್ಯಾಕರನ ಲೇಕರ್ ಕ್ಯಾ ಕರ್ನಾ?' ಅಂತಾ.

ಖದೀಮರಿಗೊಂದು ಶಾಲೆ ಎಂದಾಗ ನಿಮ್ಮ ಮೂಗಿನ ಮೇಲೇ ನೀವೇ ನಿಮ್ಮ ಬೆರಳನ್ನು ಅಳತೆ ಹಾಕಬೇಡಿ. 'ಶಾಲೆ' ಎಂದಾಗ ನಿಮಗೆ ಅದು ಒಂದು ತರಬೇತಿ ಶಾಲೆಯೇ ಇರಬೇಕೆಂದು ಖಚಿತವಾಗಿರಬೇಕು. ಆದರೂ ಒಂದೆರಡು ಬೆಟ್ಟದಷ್ಟು ಸಂದೇಹಗಳು ಬಂದಿರಬೇಕು. ಅದರ ವಿವರಣೆ ಕೊಡುವುದು ನನ್ನ ಆದ್ಯ ಕರ್ತವ್ಯ. ಯಾರಾದರೂ ಪಬ್ಲಿಕ್ ಆಗಿ ಖದೀಮರ ಟ್ರೈನಿಂಗ್ ಸೆಂಟರ್ ಪ್ರಾರಂಭಿಸುತ್ತಾರೆಯೆ? ಅದಕ್ಕೆ ಸರಕಾರದವರೂ ಬಹಿರಂಗವಾಗಿ ಪರವಾನಗಿ ಕೊಡುತ್ತಾರೆಯೆ? ಅಲ್ಲಿಯ ಶಿಕ್ಷಕರಿಗೆ ಚೆಕ್ ಮೂಲಕ ಸಂಬಳ ಬರುತ್ತದೆಯೆ?

ಇದೆಲ್ಲಾ ಜುಜುಬಿ ಸಂದೇಹಗಳು. ಮುಖ್ಯವಾದ ನಿಮ್ಮ ಪ್ರಶ್ನೆ ಎಂದರೆ ಯಾರಾದರೂ ತಾವು ಅಥವಾ ತಮ್ಮ ಮಕ್ಕಳು ಖದೀಮರಾಗಲು ಬಹಿರಂಗವಾಗಿ ಇಷ್ಟಪಟ್ಟು ಅಂಥ ತರಬೇತಿ ಕೇಂದ್ರಗಳಿಗೆ ಸೇರಿಸುತ್ತಾರೆಯೆ? ಆ ಸ್ಕೂಲಿನ ಬೋರ್ಡ್ ಬರೆಯುವವನೂ ಕೇಳುವುದಿಲ್ಲವೆ "... ಇದು ಸರಿಯಾಗಿದ್ಯಾ? ಆಮೇಲೆ ತಪ್ಪು ಬರೆದಿದ್ದೇವೆ ಅನ್ನಬೇಡಿ ಈಗಲೆ ಪೂರ್ಣ ಹಣವನ್ನು ಅಡ್ವಾನ್ಸ್ ಕೊಡಬೇಕು..." ಎಂದು ಕೇಳುವುದು ಸಹಜ. ನಿಮ್ಮ ಕಲ್ಪನೆ ನಿಜ ಆದರೆ ಅದಕ್ಕಿಂತಲೂ ಸತ್ಯವಾದದ್ದು ನಾನು ಮುಂದೆ ಹೇಳುವ ಮಾತು. 21ನೇ ಶತಮಾನದ ಪ್ರಾರಂಭದಲ್ಲಿ ಖದೀಮರಿಗೊಂದು ಶಾಲೆ ಪ್ರಾರಂಭಿಸಲು ಸಕಲ ಸಿದ್ಧತೆಗಳು ನಡೆದಿವೆ. ಖದೀಮರಿಂದ ಖದೀಮರಿಗಾಗಿ ಒಂದು ಶಾಲೆ ಎಂದು ಹೇಳಿ ಶಾಲೆ ಪ್ರಾರಂಭ ಮಾಡುವ ಗಣ್ಯ ವ್ಯಕ್ತಿಗಳ ಬಗ್ಗೆ ಹೆಚ್ಚು ಹೇಳುವುದಿಲ್ಲ. ಮುಖ್ಯವಾದ ವಿಷಯವೆಂದರೆ ಖದೀಮರಿಗೆ ಶಿಕ್ಷಣದ ಅಗತ್ಯವಿದೆಯೇ ಎಂಬ ವಿಚಾರ. ಹೌದು ಖದೀಮತನವೂ 64 ಕಲೆಗಳಲ್ಲಿ ಒಂದು ಉಪಕಲೆ. ಹುಟ್ಟಿನಿಂದಲೇ ಎಲ್ಲರೂ ಖದೀಮರಾಗುವ ಅದೃಷ್ಟ ಪಡೆದಿರುವುದಿಲ್ಲ. ಹಾಗೆ ಒಂದು ವೇಳೇ ಹುಟ್ಟುಖದೀಮರಾದರೂ ತಂದೆ ತಾಯಿಗಳು ಅದನ್ನು ವ್ಯವಸ್ಥಿತವಾಗಿ ಪೋಷಿಸಿ ಬೆಳೆಸುವುದಿಲ್ಲ. ಹೀಗಾಗಿ ಖದೀಮ-ಕಲೆಗೆ ಸರಿಯಾದ ತರಬೇತಿ ಅತ್ಯಗತ್ಯ. ಅರೆ ತಿಳುವಳಿಕೆ ಮಹಾಪಾಯ ಎಂಬುದು ಸತ್ಯ. ನಮ್ಮ ದೇಶ ಪ್ರಥಮ ದರ್ಜೆಯ ವಿಜ್ಞಾನಿಗಳನ್ನು ವೇದಾಂತಿಗಳನ್ನು ವಿಶ್ವಕ್ಕೆ ಕೊಟ್ಟಿದೆ. ಆದರೆ ಒಬ್ಬ ಒಳ್ಳೆ ಖದೀಮನನ್ನು

ಪ್ರಪಂಚಕ್ಕೆ ಕೊಟ್ಟಿಲ್ಲ. 20ನೇ ಶತಮಾನದಲ್ಲಿ ಈ ದಿಕ್ಕಿನಲ್ಲಿ ಪ್ರಯತ್ನ ನಡೆದಿದ್ದರೂ ಅಂತಹ ಗಣನೆಯ ಸಾಧನೆ ಆದಂತಿಲ್ಲ. ಹೀಗಾಗಿ 'ಖದೀಮರ ಶಾಲೆ' 21ನೇ ಶತಮಾನದ ಆರಂಭದಲ್ಲಿ ಪ್ರಾರಂಭಿಸಲು ರೂಪುರೇಷೆಗಳು ಸಿದ್ಧವಾಗಿದೆ.

'ನಾನು ಖದೀಮ' ಎಂದು ಹಣೆಪಟ್ಟಿ ಪಡೆದುಕೊಂಡು ರಾಜಾರೋಷವಾಗಿ ತಿರುಗಾಡಲು ಮುಂದಿನ ಶತಮಾನದಲ್ಲಿ ಖಂಡಿತ ಯಾರಿಗೂ ಸಂಕೋಚವಾಗುವುದಿಲ್ಲ. ಅದೊಂದು ಪ್ರತಿಷ್ಠಿತ ಪಟ್ಟಿ (Status Symbol) ಯಾಗಿರುತ್ತದೆ. ಖದೀಮರ ಶಾಲೆ ಒಂದು Professional Course ಆದ್ದರಿಂದ ಕೋರ್ಸ್ ಸೇರಲು ನೂಕುನುಗ್ಗಲು ಇದ್ದೇ ಇರುತ್ತದೆ. ಅದು ಇಂದಲ್ಲ ನಾಳೆ ಸಿ.ಇ.ಟಿ. ಬಲೆಗೆ ಬರುತ್ತದೆ. ಈಗಾಗಲೇ 50 ಪೇಮೆಂಟ್ ಸೀಟುಗಳು ಬಂದುಬಿಟ್ಟಿವೆ. ಈ ಪ್ರಕಟಣೆ ಹೊರಬಿದ್ದಮೇಲೆ ಇನ್ನೆಷ್ಟು ಬೇಡಿಕೆ ಬರುತ್ತದೋ ಎಂಬ ಗಾಬರಿಯಿದೆ. ಎಲ್ಲಾ ಶಾಲೆಗಳಂತೆ ಇಲ್ಲೂ ತಂದೆ ತಾಯಿಗಳಿಗೆ ಸಂದರ್ಶನ ನಡೆಸುತ್ತಾರೆ. ಆದರೆ ಇಲ್ಲಿ ಪ್ಯೂರ್ ಮೆರಿಟ್, ಇಲ್ಲಿ ಲಂಚ, ರಿಶ್ವತ್ತು ಪ್ರಭಾವ - ಹೀಗೆ ಯಾವುದೇ ಅಪ್ರಮಾಣಿಕ ಅಂಶವಿರುವುದಿಲ್ಲ. ತಾವು ಹಾಗೂ ತಮ್ಮ ಮಕ್ಕಳು 'ಖದೀಮ' ರೆನ್ನುವುದನ್ನು ಸ್ಪಷ್ಟಪಡಿಸಿದರೆ ಸೀಟು ಗಟ್ಟಿ. ಈ ಶಾಲೆ ಒಂದು ಓಪನ್ ಯೂನಿವರ್ಸಿಟಿ ತರಹ. ಹಿಂದಿನ ವಿದ್ಯಾಭ್ಯಾಸ ಮುಖ್ಯವಲ್ಲ. ವಯಸ್ಸಿನ ಅರ್ಹತೆ ಮುಖ್ಯ. ಅಕ್ಷರಸ್ತರೆಲ್ಲಾ ಅರ್ಹರು. ಅಂದ್ರೆ ಅನಕ್ಷರಸ್ಥರು ಒಳ್ಳೆ ಖದೀಮರಾಗುವುದಿಲ್ಲವೆಂದು ಆರ್ಥವಲ್ಲ. ಆದರೆ ಅಕ್ಷರಸ್ತರಾದವರೇ ಹೆಚ್ಚು ಖದೀಮರಾಗಬಹುದೆಂಬ ಸದುದ್ದೇಶವಿದೆ.

ತರಬೇತಿ ಶಾಲೆಯನ್ನು ನಡೆಸುವವರು ಒಳ್ಳೆ ನುರಿತ, ನರೆತ ಶಿಕ್ಷಕರು. ಒಳ್ಳೆ ಅನುಭವಸ್ಥರು, ಹಣಕ್ಕಿಂತ ಹೆಚ್ಚಾಗಿ ಖದೀಮತ್ವದ ಬಗ್ಗೆ ಕಾಳಜಿ ಇಟ್ಟುಕೊಂಡಿರುವ ಆ ಮಹನೀಯರುಗಳ ಹೆಸರನ್ನು ಈಗಲೇ ಬಿಡುಗಡೆ ಮಾಡಲು ಕೆಲವು ತಾಂತ್ರಿಕ ತೊಂದರೆಗಳಿವೆ. ನಿಮ್ಮಲ್ಲೇನು ಗುಟ್ಟು ಅನ್ನಿ, ಕೆಲವು ಶಿಕ್ಷಕರ ಶಿಕ್ಷೆಯ ಅವಧಿ ಇನ್ನೂ ಮುಗಿದಿಲ್ಲ ಅವರ 'ಬಿಡುಗಡೆ' ಯಾಗುತ್ತಿದ್ದಂತೆ ಶಿಕ್ಷಕರ ಪಟ್ಟಿಯೂ ಬಿಡುಗಡೆಯಾಗುತ್ತದೆ. ಒಟ್ಟಿನಲ್ಲಿ ಅವರೆಲ್ಲರೂ ಒಂದೊಂದು ಕಲೆಯಲ್ಲೂ ಹೆಸರುಗಳಿಸಿರುವ (ಖ) ಧೀಮಂತರು.

'ಖದೀಮ' ಅನ್ನುವ ಶಬ್ದದ ಅರ್ಥ ನಿಮಗೆ ಸರಿಯಾಗಿ ನಿಮ್ಮ ಮನೆಯಲ್ಲಿರುವ Dictionery ನಲ್ಲಾಗಲಿ 'ಇಗೋ ಕನ್ನಡ' ದಲ್ಲಾಗಲಿ ಸಿಗುವುದಿಲ್ಲ. ಅದರ ವ್ಯಾಪ್ತಿಯನ್ನು ಒಂದು ಪದದ ಚೌಕಟ್ಟಿನಲ್ಲಿ ಹಿಡಿದಿಡಲು ಸಾಧ್ಯವಿಲ್ಲ. ಖದೀಮರ ಶಾಲೆಯಲ್ಲಿ ಹತ್ತಾರು ಫಾಕಲ್ಟಿಗಳಿರುತ್ತವೆ. ಭಾಷಾಶಾಸ್ತ್ರಕ್ಕೆ ಹೆಚ್ಚು ಗಮನ. ಹೆಚ್ಚು ಭಾಷೆಗಳನ್ನು ಬಲ್ಲವನು ಹೆಚ್ಚು ಖದೀಮನಾಗುತ್ತಾನೆ. ಆದ್ದರಿಂದ ಖದೀಮನು Linguist ಆಗುವುದರ ಬಗ್ಗೆ ಹೆಚ್ಚು ಒತ್ತು. 'ಮಾತುಗಾರಿಕೆ'ಯ ಕಲೆ ಅತ್ಯಂತ ಮುಖ್ಯವಾದ್ದರಿಂದ ತರಬೇತಿಯಲ್ಲಿ ಅರೆಟರಿ ಬಗ್ಗೆ ವಿಶೇಷ ಆಕರ್ಷಣೆ.

'ಖದೀಮ' ಎಂಬ ಪರಿಕಲ್ಪನೆ ಬಹಳ ಹಳೆ ಕಾಲದ್ದು ಅಂದ್ರೆ out-dated

ಅನ್ನಿಸಿರುವುದರಿಂದ ಅವರ ಬಗ್ಗೆ ಹೊಸ ಸಂಶೋಧನೆ ಕಡೆ ಗಮನಕೊಡುವುದು ಅಗತ್ಯ. ಹಣದಾಸೆ ತೋರಿಸಿ ಮೋಸಮಾಡುವುದು, ಹಣ ದ್ವಿಗುಣಗೊಳಿಸುವುದು, ಪ್ರೋತ್ಸಾಹ, ಬಹುಮಾನದ ಆಸೆ ತೋರಿಸಿ ಹಣ ದೋಚುವುದು ಇದೆಲ್ಲಾ 20ನೇ ಶತಮಾನದ ಗೊಡ್ಡು ಸಂಪ್ರದಾಯಗಳು ಆದ್ದರಿಂದ 21ನೇ ಶತಮಾನದಲ್ಲಿ ಖದೀಮರ ಶಾಲೆನಡೆಸುವುದು ರಿಯಲ್ ಛಾಲೆಂಜ್. ಪ್ರಾಕ್ಟಿಕಲ್ ಕ್ಲಾಸಿಗಾಗಿ ಸಾರ್ವಜನಿಕರ ಬಳಿ ಸಂಪರ್ಕ ಏರ್ಪಡಿಸಲಾಗುವುದು. ಅಂದ ಹಾಗೆ ಮುಖ್ಯವಾದ ವಿಷಯವೊಂದನ್ನು ಹೇಳಲು ಮರೆತ್ತಿದ್ದೆ. ಈ ತರಬೇತಿ ಶಾಲೆಗೆ ಶುಲ್ಕದ ಕಾಟವಿಲ್ಲ. ಶುಲ್ಕವಿಲ್ಲದ ಶಿಕ್ಷಣ! ಆದರೆ ತರಬೇತಿ ಕೊಡುವಾಗ (ಅದೇ ಪ್ರಾಕ್ಟಿಕಲ್) ಅವರ ಫಲಾಫಲಗಳು ಸಂಸ್ಥೆಯ ಸ್ವತ್ತು. ಮೆಚ್ಚುಗೆಯಾದರೆ ಬಹುಮಾನದ ರೂಪದಲ್ಲಿ ಏನಾದರೂ ಕೊಡುವ ಹಕ್ಕು ಸಂಸ್ಥೆಗೆ ಇರುತ್ತದೆ.

ಬರಿ ಗುಟ್ಟಿನಲ್ಲಿ ಹಾವಾಡಿಗನು ಬಚ್ಚಿಡುವಂತೆ ನಾನು ಖದೀಮರ ಶಾಲೆ ಬಗ್ಗೆ ಏನೋ ಮುಚ್ಚಿಡುತ್ತಿದ್ದೇನೆ ಎಂದು ನಿಮಗೆ ಅನಿಸಿರುವುದರಲ್ಲಿ ಆಶ್ಚರ್ಯವೇನಿಲ್ಲ. ಖದೀಮರ ಶಾಲೆಯಲ್ಲಿ ಕಲಿಸುವ ಒಂದು ಪ್ರಾಜೆಕ್ಟ್ ಬಗ್ಗೆ ಮಾತ್ರ ಹೇಳುತ್ತೇನೆ. ನೀವು ಯಾರಿಗೂ ಹೇಳಬೇಡಿ. ನಿಮ್ಮ ಮನೆಯವರಿಗೂ ಕೂಡ. 21ನೇ ಶತಮಾನದಲ್ಲಿ 'ಉಸಿರಾಟಕ್ಕೆ ಗಾಳಿ ಮಾರಾಟ' ಎಂಬ ಬೃಹತ್ ಯೋಜನೆಯ ಬ್ಲೂ ಪ್ರಿಂಟ್ ರೆಡಿಯಾಗಿದೆ. ಆಕ್ಸಿಜನ್ ಸಂಗ್ರಹಣೆ ಹಾಗು ವಿತರಣೆ ಬಗ್ಗೆ ಖದೀಮರಿಗೆ ಶಿಕ್ಷಣ ಕೊಡುತ್ತಾರೆ. ಶಾಲೆ ಆರಂಭ ಮಾಡುವವರ ಕೈಲಿ ಈಗಾಗಲೇ ಪೇಟೆಂಟ್ ರೈಟ್ಸ್ ಇದೆ. 20ನೇ ಶತಮಾನದಲ್ಲಿ ನೀರಿನ ಮಾರಾಟ ಬಹಳ ಯಶಸ್ವಿಯಾದ ದಾಖಲೆ ನಿರ್ಮಿಸಿದೆ.

21ನೇ ಶತಮಾನ ಗಾಳಿಯದು. ಇದನ್ನು ಗಾಳಿಮಾತು ಎಂದು ತಳ್ಳಿಹಾಕಬೇಡಿ. ಇದು ಖದೀಮರ ಕಾಳಜಿ! ಕಾಳಸಂತೆಯಲ್ಲೂ ಸಿಗಬಹುದು. ಸರ್ಕಾರದವರು ಖಾಸಗಿಯವರಿಗೆ ಬಿಡುವ ಸಾಧ್ಯತೆ ಇಲ್ಲವಾದ್ದರಿಂದ ಅದನ್ನು ರಾಷ್ಟ್ರೀಕರಣ ಮಾಡಲೂಬಹುದು. ಆಗ ಗ್ಯಾಸ್ ಸಿಲಿಂಡರ್ ತರಹ ಅದಕ್ಕೂ ಬರಬಹುದು ಬರ. ಹೀಗೆ ಇನ್ನೂ ಹಲವು ಹತ್ತಾರು ಪ್ರಾಜೆಕ್ಟ್‌ಗಳು ಖದೀಮರ ಶಾಲೆಯ ಸಿಲಿಬಸ್‌ನಲ್ಲಿ ಅಡಗಿವೆ. ಪ್ರಾರಂಭೋತ್ಸವಕ್ಕೆ ಒಳ್ಳೆ ಖದೀಮನನ್ನು ಕರೆಯಲು ಈಗಾಗಲೇ ಅನ್ವೇಷಣೆ ಶುರುವಾಗಿದೆಯಂತೆ.

**ವಿ.ಸೂ.**

*ಈ ಲೇಖನ ಬರೆಸಿದ ಖದೀಮ-ಸಂಪಾದಕರ ಹೆಸರನ್ನು ನಾನು ಸೂಚಿಸಿರುವ ವಿಷಯ ನಿಮ್ಮಲ್ಲೇ ಇರಲಿ.*

ಖದೀಮರಿಗೊಂದು ಶಾಲೆ

# ಕಾರ್ಮಿಕ ಮುಖಂಡನಿಗೆ ಟ್ರೈನಿಂಗ್

ಎಂ.ಎಸ್.ಕೆ.

ತಲೆ ತಗ್ಗಿಸಿಕೊಂಡು ರಿಪೋರ್ಟ್ ಬರೀತಿದ್ದೆ, ಹಿಂದಿನ ವಾರ ಪ್ರೊಡಕ್ಷನ್ ಲಾಸ್‌ಗೆ ಕಾರಣಗಳೇನು ಅಂತ. ಎಲ್ಲಾ excuses ಹಿಂದೇನೇ ಕೊಟ್ಟಾಗಿತ್ತು. ಹೊಸದು ಯಾವುದೂ ಮಂಡೇಗೆ ಹೊಳೀವಲ್ದು. ಬಾಸ್ ಹೊದ್‌ವಾರಾನೇ ಹೇಳಿದ್ರು "ಅಲ್ಲೀ Production ಅಂತೂ ಇಲ್ಲ. ಹೊಸಹೊಸಾ excuses ಆದ್ರೂ ಬರೀರೀ. ಅದೂ ಹೊಳೀವಲ್ವ?" ಅಂತ.

ಮುಂದೆ ಕುರ್ಚಿ ಎಳೆದು ದೊಪ್ಪನೆ ಬಿದ್ದ ಶಬ್ದ ಆಯ್ತು. ಬೆಚ್ಚಿಬಿದ್ದು ತಲೇ ಎತ್ತಿದೆ.

"ಯಾಕ್ ಸಾರ್ ನನ್ನೋಡಿದ್ರೆ ಅಷ್ಟು ಭಯಾನ ನಿಂಗೆ" ಅಂದ ಮುಂದೆ ಕೂತಿದ್ದ ವ್ಯಕ್ತಿ. ಅವನೇ ನಮ್ಮ ಡ್ರಿಲ್ಲರ್ ಗುಂಡ. ಯೂನಿಫಾರಂ ತೆಗೆದು ಬಣ್ಣದ ಬಟ್ಟೆ ಹಾಕಿದ್ದ. ಮೊದಲೇ ಗಲಾಟೆ ಇಸಂ. ಇವತ್ತೇನೊ ಕಿರಿಕಿರಿ ಇಟ್ಟಿದ್ದಾನೇ ಅನ್ನಿಸ್ತು. "ಏನೋ ಗುಂಡಾ, ಯಾಕೋ ಕೆಲಸದ ಮೇಲಿಲ್ಲ. ರಜಾ ಬೇಕಾ" ಅಂದೆ.

"ರಜಾ ಬೇಕಾದ್ರೆ ಇಲ್ಲಿವರ್‍ಗೂ ಬರ್ಬೇಕಾ. ಮನೇ ಇಂದಾನೆ ಚೀಟಿ ಬರೆದು ಕಳಿಸ್ತಿದ್ದೇ" ಅಂದ.

"ಮತ್ತೇನಪ್ಪಾ, ತಿರ್‍ಗೀ ನಿಂಗೂ, ನಿನ್ನ ಸೂಪರ್‌ವೈಜರ್‌ಗೂ ಜಗಳಾನಾ" ಅಂದೆ.

"ಅರೇ, ಆ ಸೂಪರ್‌ವೈಜರ್ ಪಾಪ ಸುಮ್ನಿದಾನೆ. ಈಗ ಇರೋದೆಲ್ಲಾ ನಿಮ್ ಹತ್ರಾನೇ ಕಿರಿಕಿರಿ"

"ನನ್ನ ಹತ್ರ ನಿಂಗೇನಪ್ಪಾ ಕೆಲ್ಸ"

"ನಮ್ಮ ಡಿಮಾಂಡ್ಸ್ ಏನಾಯಿತ್ಸಾರ್. ಇನ್ನೂ ಎಷ್ಟು ದಿನಾಂತ ಸುಮ್ನಿರೋದು" ಅಂದ.

"ಡಿಮಾಂಡ್ಸ್ ಕೇಳಕ್ಕೆ ನೀನೇನು ಲೀಡರ್ರಾ? ಆ ಲೀಡರ್ ಹತ್ರ ಅವಾಗ್ಲೆ ಮಾತಾಡಿದ್ದೀನಿ" ಅಂದೆ

"ಸ್ವಾಮೀ, ಸುಮ್ನೆ ನಾಟ್ಕ ಆಡ್ಬೇಡಿ, ನಿನ್ನೆ ಕಕ್ಕಸ್ ಮನೇಲಿ ಮೀಟಿಂಗ್ ಮಡಗಿ, ನಿಮ್ಮ ದೋಸ್ತ್ ಆ ಹಳೇ ಲೀಡರ್‌ನಾ ಓಡ್ಸಿ ನನ್ನ ಲೀಡರ್ ಮಾಡ್ಲಿಲ್ವಾ ಎಲ್ಲಾರೂ? ನಿಂಗೇನೂ ಗೊತ್ತಿಲ್ವ?" ಅಂತ ದಬಾಯಿಸಿದ.

"ಅಲ್ಲಯ್ಯ. ಕಕ್ಕಸ್ ಮನೇ ಮೀಟಿಂಗ್‌ಗೆ ನಾನೇನಾದ್ರೂ ಬಂದಿದ್ನ" ಅಂದೆ.

"ನೀವ್ ಬರ್‍ದಿದ್ರೂ ನಿಮ್ಮ ಏಜಂಟ್‌ಗಳಿಲ್ವಾ, ಅವ್ರೆಲ್ಲಾ ಹೇಳ್ಲಿಲ್ವಾ"

ಸ್ವಲ್ಪ strategy ರಿಪೇರಿ ಮಾಡ್ಕೊಬೇಕೂ ಅನ್ನಿಸ್ತು.

''ಒಳ್ಳೇದು, ಸರಿ ಬಿಡು, ಇನ್ನೆವಾಗ್ಲಾದ್ರೂ ಬಾ. ನಿಧಾನವಾಗಿ ಮಾತಾಡಾಣ. ಈಗ ನಂಗೆ ಅರ್ಜೆಂಟ್ ಕೆಲ್ಸ ಇದೆ. ಸ್ವಲ್ಪ ಪ್ರೊಡಕ್ಷನ್ ಕಡೆ ಗಮನ ಇರ್ಲಿ. ಡಿಮಾಂಡ್ಸ್-ಗಿಮಾಂಡ್ಸ್ ಆಮೇಲೆ ನೋಡೋಣಾ'' ಅಂದೆ.

''ನೀವು ಡಿಮಾಂಡ್ಸ್-ಗಿಮಾಂಡ್ಸ್ ಆಮೇಲೇಂದ್ರೆ, ನಾವೂ ಪ್ರೊಡಕ್ಷನ್-ಗಿಡಕ್ಷನ್ ನಿಧಾನವಾಗಿ ನೋಡ್ತೀವಿ ಅನ್ನಬೇಕಾಗುತ್ತೆ'' ಅಂದ ಗುಂಡ. ಶುದ್ಧ ಟೆರರಿಸ್ಟು.

ಎಲಾ ಇವನ ಶುರುಮಾಡ್ದ ಆಗಲೇ ತರಲೆ ''ಅಲ್ಲಯ್ಯ ಅಗ್ರಿಮೆಂಟ್ ಆಗಿ ಇನ್ನೂ ಆರ್ತಿಂಗ್ಳಾಗ್ಲಿಲ್ಲ. ಈಗೇನಯ್ಯ ತಿರುಗಿ ಈ ಡಿಮಾಂಡ್ಸೂ'' ಅಂತ ತಿರಿಗಿಬಿದ್ದೆ.

''ಅಗ್ರಿಮೆಂಟ್ ವಿಚಾರತೆಗೀರಿ. ಅದೂ ನೀವೂ ನಿಮ್ಮ ಫ್ರೆಂಡ್ಸ್ ಮಾಡ್ಕೊಂಡಿದ್ದು. ನಾನು ಈಗ ಕೇಳ್ತಿರೋದು ಬೇರೆ ಸಮಾಚಾರ'' ಅಂದ.

''ಅದು ಏನಪ್ಪ ನಿನ್ನ ಡಿಮ್ಯಾಂಡ್ಸೂ'' ಅಂದೆ.

''ನೀವು ಈಗ ಫಿಕ್ಸ್ ಮಾಡಿರೋ ಇನ್‌ಸೆಂಟಿವ್ ಸಾಲ್ದು. ಡಬ್ಬಲ್ ಮಾಡ್ಬೇಕು''

''ಇನ್ನೇನಾದ್ರೂ ಇದ್ಯಾ''

''ತುಂಬಾಯಿದೆ, ನಿಧಾನವಾಗಿ ಕೇಳಿ. ಇವತ್ತಿನಿಂದ ನೀವು ಶಾಪ್ ಫ್ಲೋರಲ್ಲಿ ಎಲ್ಲಾರ ಮೇಲೆ ಅದೇನು, ಇದೇನು, ಅದ್ಯಾಕೆ ಇದ್ಯಾಕೇಂತ ಹಾರಾಡೋ ಹಾಗಿಲ್ಲ. ಏನಿದ್ರೂ ಮಾತುಕತೆ ನನ್ನ ಹತ್ರಾನೆ'' ಅಂದ.

''ಅಂದ್ರೆ ಈ ಡಿಪಾರ್ಟ್‌ಮೆಂಟ್ ಹೆಡ್ಡು ಇನ್ಮುಂದೆ ನೀನೇನ್ನು ನಾನಲ್ಲ''

''ಹಂಗೇ ಇಟ್ಕಳ್ಳಿ. ಯಾರ್ಬೇಡಾಂತಾರೆ'' ಅಂದ ಮುಸಿ ನಗುತ್ತ. ಮುಂದುವರಿಸಿ ''ನೀವು ನಿಮಿಷ ನಿಮಿಷಕ್ಕೆ ಕಕ್ಕಸ್ ನುಗ್ಗಿ ಅಲ್ಲರೋರ್ನೆಲ್ಲಾ ಡಿಸ್ಟರ್ಬ್ ಮಾಡ್ತೀರೀಂತ ಕಂಪ್ಲೇಂಟ್ ಇದೆ'' ಅಂದ.

''ಹಾಗಾದ್ರೆ ಕಕ್ಕಸ್‌ನಲ್ಲಿ ನಿದ್ದೇಮಾಡೋರ್ನ ಹಾಗೇ ಬಿಡ್ಬೇಕಾ?'' ಅಂತ ಮುಖ ಸಿಂಡರಿಸಿದೆ.

''ನೋಡ್ರೀ ಸ್ವಾಮಿ, ಬೆಳಗ್ಗಿಂದಾ ಮೈಮುರ್ದು ಕೆಲಸಮಾಡೋರ ಕಷ್ಟ ಹಾಯಾಗಿ ಫ್ಯಾನ್ ಕೆಳಗೆ ಕೂತು ಪೇಪರ್ ತಿರುವಿಹಾಕೋ ನಿಂಮ್ಮಂತೋರ್ಗೆ ಹ್ಯಾಗೆ ತಿಳೀಬೇಕು. ಏನೋ ಪಾಪ ಎರಡು ನಿಂಶ ಕಣ್ಣು ಮುಚ್ಚಿದರೆ ನಿದ್ದೆ ಮಾಡ್ತಾನೆ. ಗೊರಕೆ ಹೊಡೀತಾನೆ ಅಂತ ಕೂಗಾಡ್ತೀರಲ್ಲ. ಹಾಗಾದರೆ ಇನ್ನೊಂದು ಡಿಮಾಂಡ್ ಬರಕ್ಕೊಳ್ಳಿ. ಎರಡು ಘಂಟೆಗೊಂದ್ಸಲ ಹತ್ನಿಮಿಷ ರೆಸ್ಟ್ ಬೇಕೂಂತ''

ಹನುಮಂತನ ಬಾಲಕ್ಕಾದರು ಕೊನೆಯಿದೆ. ನಮ್ಮ ಗುಂಡನ ಡಿಮಾಂಡ್ಸ್ ಮಾತ್ಮಾತಿಗೂ ಜಾಸ್ತಿ ಆಗುತ್ತೆ. ಸ್ವಲ್ಪ ಯೋಚಿಸಿ ಒಂದು ಪ್ಲಾನ್ ಮುಂದಿಟ್ಟೆ.

''ನೋಡು ಗುಂಡಾ. ನೀನೂ ಹೊಸದಾಗಿ ಚಾರ್ಜ್ ತೊಗೊಂಡಿದೀ. ನಿಂಗೂ ಸ್ವಲ್ಪ ಅನುಭವ ಬೇಕು. ನಾಳಿಂದಾನೇ 15 ದಿನದ ಒಳ್ಳೇ ಟ್ರೈನಿಂಗ್ ಪ್ರೋಗ್ರಾಂ ಇದೆ ಒಳ್ಳೆ

ಹೋಟ್ಲಲ್ಲೀ ಒಳ್ಳೊಳ್ಳೆ ಜನಾನೇ ಟ್ರೈನಿಂಗ್ ಕೊಡ್ತಾರೆ. ನೀನು ಹೋಗಿ ಬಾ. ಎರಡು ಮೂರು ಸಂಜೆ ಒಳ್ಳೇ ಪಾರ್ಟಿ ಬೇರೇ ಇದ್ತಾರಂತೆ. ನಿನಗೂ ಅನುಭವ ಬರುತ್ತೆ. ಹೋಗಿ ಬಾ. ಆ ಮೇಲೆ ಮಾತಾಡಾನ'' ಅಂತ ಹದಿನೈದು ದಿನಾನಾದ್ರೂ ಹಾಯಾಗಿರಾಣಾಂತ ನನ್ನ ಪ್ಲಾನ್.

ನಾನು ಚಾಪೆ ಕೆಳಗೆ ತೂರಿದರೆ ಅವನು ರಂಗೋಲಿ ಇಸಂ.

''ನೋಡಿ ಸಾರ್ ನಮ್ಮಂಥೋರ್ಗೆ ನಮ್ಮ ಶಾಪ್‌ಫ್ಲೋರ್ ಕಕ್ಕಸ್‌ಮನೆ ಈ ಟ್ರೈನಿಂಗೇ ಸಾಕು. ಇಲ್ಲಿ ಕಲಿಯೋದಕ್ಕಿಂತ ನಿಮ್ಮ ಹೋಟೇಲ್‌ನಲ್ಲಿ ಇನ್ನೇನಿರೋದಿಲ್ಲ ಜಾಸ್ತಿ. ಆ ಟ್ರೈನಿಂಗ್, ಆ ಸಂಜೆ ಪಾರ್ಟಿಗೆ ನೀವೂ ಹಾಗು ಸೋತ್ನಲ್ಲಾ ನಿಮ್ಮ ಶಿಷ್ಯ ಅವನೂ ಹೋಗ್ಬನ್ನಿ. ಹೋಗೋಕ್ಮುಂಚೆ ನಮ್ಮ ಡಿಮಾಂಡ್ಸ್ ಸೆಟಲ್ ಮಾಡಿ. ಇಲ್ದಿದ್ರೆ ಇರೋ ಚೂರು ಇಲೀ ಕಚ್ಚಿಕೊಂಡು ಹೋಯ್ತು ಅನ್ನೊ ತರಹ ಎಡವಟ್ಟಾಗಿ ಈಗ ಬರ್ತಿರೋ ಪ್ರೊಡಕ್ಷನ್ನೂ ಏನಾಗುತ್ತೊ ಹೇಳಕ್ಕಾಗಲ್ಲ. ಬೇಗ ಹೇಳಿ. ಎಲ್ಲಾ ಹೊರಗೆ ನಂಗೇ ಕಾಯ್ತಿದಾರೇ'' ಅಂತ ಆಟಂಬಾಂಬ್ ಹಾಕ್ದ.

ಸುಸ್ತಾಗಿ ಒಂದು ಗುಟುಕು ನೀರು ಕುಡ್ದೆ. ಬೆಳಿಗ್ಗೆ ನನ್ನ ಹೆಂಡ್ತಿ ಹೇಳಿದ್ದು ಜ್ಞಾಪಕಕ್ಕೆ ಬಂತು.

''ಇಲ್ನೋಡ್ರಿ. ನೀವ್ಯಾಕೋ ಈಚೀಚೆಗೆ ಏನೋ ಒಂಥರಾ ಇದೀರಾ. ನನಗೆ ಗಾಬರಿ ಆಗಿ ಜೋಯಿಸರಿಗೆ ನಿಮ್ಮ ಜಾತ್ಕಾ ತಿರುಗಿ ತೋರಿಸ್ದೆ...'' ಅನ್ನುತ್ತಿದ್ದಾಗ,

''ಸರಿಸರಿ ಮತ್ತೆ ನನ್ನ ಫಾರಿನ್ ಟ್ರಿಪ್ ಯಾವಾಗಾಂದ್ರೂ'' ಅಂತ ತಮಾಶೇ ಮಾಡಕ್ಕೆ ಟ್ರೈಮಾಡ್ದೆ.

''ಸುಮ್ನೆ ಸೀರಿಯಸ್ಸಾಗಿ ಹೇಳಿ. ನಿಂ ಗ್ರಹಗತಿ ಬಹಳ ಕೆಟ್ಟಿದೆಯಂತೆ. ಯಾವ ಒಳ್ಳೇ ಗ್ರಹಾನೂ ಕಾಣ್ತಿಲ್ವಂತೆ. ಯಾಕೋ ಗಾಬ್ರಿ ಆಗುತ್ತಮ್ಮ. ಹೀಗೇ ಬಿಟ್ರೆ ಆರೋಗ್ಯಕ್ಕೂ ಹಾನೀಮ್ಮ. ಬೇಗ ನವಗ್ರಹ ಸಮೇತ ವಿಘ್ನೇಶ್ವರನ ಹೋಮ, ಜೊತೆಗೆ ಕರೀ ಎಳ್ಳಲ್ಲಿ ಮೃತ್ಯುಂಜಯ ಹೋಮ ಮಾಡ್ಸಿ. ಸುಮಾರು ಜನಕ್ಕೆ ಸಂತರ್ಪಣೇನೂ ಆಗ್ಬೇಕು. ಪೂಜೇ, ಹೋಮ, ದಾನ ಎಲ್ಲಕ್ಕೂ ಸುಮಾರು ಖರ್ಚಾಗುತ್ತೆ. ಇಂಥಾಗಳಿಗೇಲಿ ದುಡ್ಡಿನ ಮುಖ ನೋಡ್ತಾ ಕೂಡ್ಬೇಡಿ. ಮುಂದಿನ ಶನಿವಾರ ಒಳ್ಳೇದಿನ. ಅವತ್ತೇ ಆಗ್ಲಿ. ನೀನೇನು ನಂಗೆ ದೂರ್ದ್ದೋಳೇ. ನನ್ನ ತಂಗೀ ಥರ. ಇರೋ ಬೇರೇ ಪ್ರೋಗ್ರಾಂ ಎಲ್ಲಾ ಕ್ಯಾನ್ಸಲ್ ಮಾಡಿ ನಿಮ್ಮನೇಗೆ ಬರ್ತೀನಿ. ನಿಮ್ಮೆಜಮಾನ್ರಿಗೆ ಹಿಂದಿನ ರಾತ್ರೀ ಇಂದ ಸ್ವಲ್ಪ ನೇಮ, ಮಡೀಲಿ ಇರೋದಕ್ಕೇ ಹೇಳಮ್ಮಾ ಅಂದ್ರೂರೀ. ತುಂಬಾ ಒಳ್ಳೇಯವರು. ನಾನು ಅಡ್ವಾನ್ಸ್ ಆಗಲೇ ಕೊಟ್ಟೀದ್ದೀನಿ. ಸಧ್ಯ ಶುಕ್ರವಾರ ಸಂಜೆ ನಿಮ್ಮ ಹಾಳು ಕ್ಲಬ್ಬುಗಿಬ್ಬೂಂತ ಹೋಗ್ಬೇಡಿ. ಮನೇಲಿರಿ. ಅಂದಿದ್ಲು.

ಇದು ತುಂಬಾ ನಿಜ. ಜಾತಕ ಖಂಡಿತ ನಿಜ. ಗ್ರಹ ಕೆಟ್ಟಿರೋದಂತೂ ಖಾತ್ರಿ. ಒಂದಂತೂ ನನ್ನ ಮುಂದೇನೇ ಕೂತಿದೆ ರೋಫ್ ಹಾಕ್ತಾ ಗುಂಡನ ಮುಖಾನೇ ನೋಡ್ತಾ ಮುಸಿನಕ್ಕೆ. ಈ ಗ್ರಹಕ್ಕೆ ಮೊದಲ ಶಾಂತಿ ಆಗ್ಲೇಬೇಕು.

ಖದೀಮರಿಗೊಂದು ಶಾಲೆ:

# ಔಟ್ ಆಫ್ ಬಾಡಿ ಎಕ್ಸ್‌ಪೀರಿಯನ್ಸ್

- ಶಿವು

ಬನ್ನಿ, ಬನ್ನಿ, ನಿಮ್ಮ ಸೂಕ್ಷ್ಮ ಶರೀರ ಧರಿಸಿ, ನನ್ನ ಜೊತೆ ಬನ್ನಿ. ಬನ್ನಿರೀ ಪರವಾಗಿಲ್ಲ. ನಿಮ್ಮ ದೇಹದ ಗತಿ ಏನು ಅಂದ್ರಾ? ದೇಹಕ್ಕೇನಾಗುತ್ತೆ ಧಾಡಿ. ಈಗ ಬಿದ್ದಿಲ್ವೇ ಹಾಸ್ಗೇಮೇಲೆ. ಹಾಗೇ ಬಿದ್ದಿರುತ್ತೆ ಬಿಡಿ. ನಿದ್ದೆ ಮಾಡ್ತಾ ಇದೆ ಪ್ರಾಣಿ ಅನ್ಕೋತಾರೆ ಅಷ್ಟೆ. ಹ್ಞಾ.... ಹಾಗ್ಬನ್ನಿ, ನೋಡಿ, ಎಷ್ಟು ಸುಲಭ. ರೀ, ರೀ, ಅಷ್ಟು ಜೋರಾಗಿ ಹಾರಬೇಡ್ರೀ, ನೇರವಾಗಿ ಅಂತರಿಕ್ಷಕ್ಕೆ ಹೋಗ್ಬಿಟ್ಟೀರಾ! ನನ್ನ ಕೈ ಹಿಡ್ಕೊಳ್ಳಿ. ಜೋಪಾನವಾಗಿ ಕರ್ಕೊಂಡು ಹೋಗಿ ಪುನಃ ಕರ್ಕೊಂಡು ಬಂದು ಬಿಡ್ತೇನೆ. ಎಲ್ಲಿಗೆ ಅಂದ್ರಾ? ಇನ್ನೆಲ್ಲಿಗೆ, ರಾತ್ರಿ ಎಲ್ಲಾ ಕನವರಿಸ್ತಿದ್ರಲ್ಲಾ ಅದೆಂಥಾದ್ದೋ ಶಾಲೆ ನೋಡ್ಬೇಕು, ಶಾಲೆ ನೋಡ್ಬೇಕು ಅಂತ. ಅಂಥಾ ಒಂದು ಹೈಟೆಕ್ ಶಾಲೆ ನೋಡುಕ್ಕೇ ಅಂತ್ಲೇ ನಾವು ಹಾರಿ ಹೋಗ್ತಾ ಇರೋದು. ಇಗೋ ಬಂದೇ ಬಿಡ್ತು. ನೋಡಿ, ಮುಂದೆ ಕಾಣಿಸ್ತಾ ಇದ್ಯಲ್ಲಾ, ಮಲ್ಟಿಸ್ಟೋರಿ ಬಿಲ್ಡಿಂಗ್ ಅದರ ಇಪ್ಪತ್ತನೇ ಮಹಡಿ ಹತ್ರ ಬನ್ನಿ. ಹ್ಞಾ... ಹಾಗೆ. ಈಗ ಈ ಕಿಟಕಿ ಮೂಲ್ಕ ಒಳಕ್ಕೆ ಹಾರಿ. ನಾಚ್ಕೆ ಆಗುತ್ತೆ ಅಂದ್ರಾ. ನಿಮ್ಮ ಸೂಕ್ಷ್ಮ ಶರೀರ ಯಾರ್ಗೂ ಕಾಣ್ಸೋದಿಲ್ಲಾರೀ. ನಾಚ್ಕೆ ಯಾಕೆ? ಅಲ್ದೇ ನಿಮ್ಮ ದೇಹ ಉಟ್ಟಿರೋ ಪಂಚೇನ ಇಲ್ಲೆಲ್ಲಾ ತಂದು ಹಾರಾಡ್ಸೋಕ್ಕಾಗುತ್ಯೇ? ನಿಮ್ಮ ಪಂಚೆ ನಿಮ್ಮ ಮನೇಲೆ ಇರ್ಲಿ. ನೀವೂ ನಮ್ ಥರ ನಿರ್ಯೋಚನೆಯಿಂದ ಇರೋದನ್ನ ಕಲೀರಿ. ಕೊನೇಗೆ, ಉಪಯೋಗಕ್ಕೆ ಬರುತ್ತೆ.

ನೋಡ್ರೀ, ಇದೇ ಇಂಟರ್‌ನ್ಯಾಷನಲ್ ಬ್ಯಾಂಕಿಂಗ್ ಸಿಂಡಿಕೇಟ್‌ನ ಆಫೀಸು. ಅಲ್ಟ್ರಾಮಾಡರ್ನ್ ಮಲ್ಟಿನ್ಯಾಷನಲ್ ಬ್ಯಾಂಕ್ ಇದು. ಹಾಲ್ ನೋಡಿ, ಎಷ್ಟು ವಿಶಾಲವಾಗಿದೆ. ನೆಲ ನೋಡ್ರಿ, ಗೋಡೆಯಿಂದ ಗೋಡೆಗೆ ಒಂದಿಂಚು ದಪ್ಪದ ರತ್ನಗಂಬಳಿ. ಇದೇನು ಈ ಮೋಟು ಗೋಡೆಗಳು ಅಂದ್ರಾ? ಮೋಟುಗೋಡೆ ಅಲ್ಲಾರೀ ಅದು, ಪಾರ್ಟಿಷನ್ನು, ಓಪನ್ ಪ್ಲಾನ್ ಆಫೀಸ್ ಅಂತಾರೆ ಇದಕ್ಕೆ. ನೂರಾರು ಕ್ಯಾಬಿನ್‌ಗಳು, ಕ್ಯಾಬಿನ್‌ಗೊಂದು ಮೇಜು, ಮೇಜಿಗೊಂದು ಕಂಪ್ಯೂಟರ್ ಟರ್ಮಿನಲ್ಲು, ಟರ್ಮಿನಲಿಗೊಂದು, ಗುಂಗುರು ಕೂದಲಿನ ಚೆಂದುಳ್ಳಿ ಹುಡುಗ ಯಾ ಮೋಹಕ ನಗೆಯ ತರುಣಿ. ಈ ಮಲ್ಟಿನ್ಯಾಷನಲ್‌ಗಳೇ ಹೀಗೆ ರೀ. ಸ್ಟಾಫ್‌ಗೆ ಯೂತ್‌ಫುಲ್ ಲುಕ್ ಇರ್ಲೇಬೇಕು ಅಂತ ಕಡ್ಡಾಯ ಮಾಡ್ಬಿಟ್ಟಿದ್ದಾರೆ. ಹಾಗೇ ಮೆಲ್ಲಗೆ ಹೊವರ್ ಮಾಡ್ಕೊಂಡು ಬನ್ನಿ, ಜೋರಾಗಿ ಹಾರ್ಬೇಡಿ. ಇವತ್ತಿನ ಪಾತ್ರಧಾರಿಗಳನ್ನೆಲ್ಲಾ ಒಬ್ಬೊಬ್ಬರನ್ನಾಗಿ ಮೀಟ್ ಮಾಡೋರಂತೆ. ಇವತ್ತು, ಇಲ್ಲಿ, ಅಸಿಸ್ಟೆಂಟ್ ಮ್ಯಾನೇಜರ್ ಹುದ್ದೇಗೆ ಟೆಸ್ಟ್ ನಡೀತಿದೆ. ಮೂರು ಅಭ್ಯರ್ಥಿಗಳಿದ್ದಾರೆ. ಮೊದಲ್ನೇ ಅಭ್ಯರ್ಥಿ ಸುಧೀರ್. ಅಲ್ನೋಡೀ, ಆ ಮೂರ್ನೇ ಕ್ಯಾಬಿನ್ನಿನಲ್ಲಿ ಕೂತಿದಾನೆ. ಸುಧೀರ್‌ಗೆ ಇಪ್ಪತ್ತೈದು ವರ್ಷ. ಐದಡಿ ಹತ್ತಂಗುಲ.

ಕೌಂಡಿನ್ಯಸ ಗೋತ್ರ. ಗೋತ್ರ ಪ್ರವರ ಎಲ್ಲಾ ಯಾಕೆ ಅಂದ್ರಾ, ಸ್ಸಾರಿ. ಅಭ್ಯಾಸಬಲ ಅದು. ಈ ಮ್ಯಾಟ್ರಿಮೋನಿಯಲ್ ಕಾಲಂಗಳಲ್ಲಿ ಗಂಡುಬೇಕು, ಹೆಣ್ಣುಬೇಕು ಅಂತೆಲ್ಲಾ ಬರುತ್ತಲ್ಲಾ, ಅದನ್ನೆಲ್ಲಾ ಆರಿಸಿ ತೆಗೆದು, ಇಂಥವರಿಗೆ, ಇಂಥೊರನ್ನ ಕಟ್ಟೋದ್ರಿಂದ ಇಷ್ಟು ಕರ್ಮಫಲ ತೀರುತ್ತೆ ಅಂತ ನಿರ್ಧರಿಸೋದು ಯಾರು ಅಂದ್ಕೊಂಡಿದೀರ? ಕರೆಕ್ಟ್, ನಿಮ್ಮ ಊಹೆ ಸರಿ, ನಾನೇ. ಪ್ರತಿ ಭಾನುವಾರ ಬಂತೂಂದ್ರೆ, ನನಗೆ ಓವರ್ ಟೈಮ್, ಮಾತು ಎಲ್ಲಿಗೋ ಹೋಯ್ತು. ಈ ಸುಧೀರ್ ನೋಡಿ, ಎಂ.ಕಾಂ. ಮಾಡಿದ್ದಾನೆ. ರ್‍ಯಾಂಕ್ ಸ್ಟೂಡೆಂಡ್. ಬನ್ನಿ ಇಲ್ಲೇ ಈ ಮೋಟುಗೋಡೆ ಮೇಲೆ ಕೂಡಿ. ಏನೂ ಹೆದರ್ಬೇಡ್ರೀ. ಸೂಕ್ಷ್ಮ ಶರೀರಕ್ಕೆ ಭಾರಾನೇ ಇರೋದಿಲ್ಲ. ಎಲ್ಲಿ ಬೇಕಾದ್ರೂ ಧೈರ್ಯವಾಗಿ ತಳ ಊರಬಹುದು.

★★★

ಬೆಳಗ್ಗೆ ಸ್ಕೂಟರ್ ಪಾರ್ಕ್ ಮಾಡೋವಾಗ, ಸುಚಿತ್ರಾ ತನ್ನ ಮೋಪೆಡ್‌ನ ಹತ್ತಿರದಲ್ಲೇ ನಿಲ್ಲಿಸಿ, ಆಟೋ ಹಿಂದಿನ ಬರಹದಂತೆ, ''ಹಾಯ್ ಸುಧೀರ್'' ಅಂತ ಕೋಕಿಲ ಕಂಠದಲ್ಲಿ ಕೂಗಿದಾಗಿನಿಂದ ಸುಧೀರ್‌ಗೆ ಏಕೋ ಕೆಲಸದ ಮೇಲೆ ಏಕಾಗ್ರತೇನೇ ಬಂದಿರಲಿಲ್ಲ. ಬಡ್ಜೆಟ್ ದಿನ ಟಿ.ವಿ.ನಲ್ಲಿ ತೋರ್‍ಸೋಹಾಗೆ, ಅವನ ಮಿದುಳಿನ ಪೈಛಾರ್ಟ್‌ನಲ್ಲಿ ಸುಮಾರು ಮುನ್ನೂರು ಡಿಗ್ರಿ ಜಾಗಾನ ಸುಚಿತ್ರಾನೇ ಆಕ್ರಮಿಸಿದ್ದಳು. ಈ ಗಲಾಟೇಲಿ ಇವತ್ತು ಟೆಸ್ಟ್ ಬೇರೆ. ಮಿಕ್ಕ ಅರವತ್ತು ಡಿಗ್ರಿ, ಭಾಗದ ಮಿದಿಳನ್ನು ಉಪಯೋಗಿಸಿ, ಈ ಟೆಸ್ಟ್ ಪೇಪರ್‌ನ ಉತ್ತರಿಸಬೇಕು. ಕಂಪ್ಯೂಟರ್ ಪರದೆ ಮೇಲಿದ್ದ ನಾಲ್ಕು ಪ್ರಶ್ನೆಗಳು ಮೇಲ್ನೋಟಕ್ಕೆ ಸಿಂಪಲ್ ಅಂದ್ರೆ ಸಿಂಪಲ್. ಆದ್ರೂ ಇಂಥಾ ಪ್ರಶ್ನೆಗಳಲ್ಲೇ ಅಪಾಯ ಅಡಗಿರೋದು ಅಂತ ಸುಧೀರ್‌ಗೆ ದೃಢ ಸಂಶಯ. ಸುಧೀರ್ ಮತ್ತೊಮ್ಮೆ ಪರದೆ ನೋಡಿದ. ಪರದೆಯ ಮೇಲಿನ ಪ್ರಶ್ನೆಗಳು ಹೀಗಿದ್ದವು.

1. ಸೂಟ್‌ಕೇಸ್ ಅಂದ ತಕ್ಷಣ ನಿಮ್ಮ ಮನಸ್ಸಿನಲ್ಲಿ ಮೂಡುವ ಪದ ಏನು?
2. ಬ್ಯಾಂಕ್ ಗ್ರಾಹಕರಲ್ಲಿ ತಾರತಮ್ಯ ತೋರಿಸಬಾರದು. ನಮಗೆ ಬಡವ, ಬಲ್ಲಿದ ಇಬ್ಬರೂ ಒಂದೇ. ಈ ಹೇಳಿಕೆಗೆ ನಿಮ್ಮ ಪ್ರತಿಕ್ರಿಯೆ? (ಒಂದೇ ಪದದಲ್ಲಿ)
3. ಒಬ್ಬ ಭಾರೀ ಉದ್ಯಮಿ ನಿಮ್ಮನ್ನ 157 ಕೋಟಿ ರೂ. ಸಾಲ ಕೇಳ್ತಾನೆ. ಇದಕ್ಕೆ ನಿಮ್ಮ ಎರಡು ಷರತ್ತುಗಳೇನು? (ಎರಡೇ ವಾಕ್ಯಗಳಲ್ಲಿ)
4. ಒಬ್ಬ ತರುಣಿ ನಿಮ್ಮ ಹತ್ರ ಬಂದು, ''ಎಕ್ಸ್ಕ್ಯೂಸ್‌ಮಿ, ನಾನು ಒಬ್ಬ ಎನ್ನಾರೈ. ನಮ್ಮ ತಾಯಿ ಈ ಊರಿನ ಯಾವ್ದೋ ಬ್ಯಾಂಕ್‌ನಲ್ಲಿ ಹತ್ತು ಲಕ್ಷ ಠೇವಣಿ ಇಟ್ಟಿದ್ರಂತೆ. ಮೊನ್ನೆ ಅವರು ತೀರಿಕೊಂಡ್ರು. ನನ್ನ ಹತ್ರ ಯಾವ ದಾಖಲೇನೂ ಇಲ್ಲ. ಬಹುಶಃ ನಮ್ಮ ತಾಯಿ ನಿಮ್ಮ ಬ್ಯಾಂಕ್‌ನಲ್ಲೇನಾದ್ರೂ ಹಣ ಇಟ್ಟಿದ್ರೇ?'' ಅಂತ ಕೇಳ್ತಾಳೆ. ಅವರಮ್ಮ (May her soul rest in place) ನಿಮ್ಮ ಬ್ಯಾಂಕ್‌ನಲ್ಲೇ ಹಣಾ ಎಲ್ಲಾ ಇಟ್ಟಿದ್ದು. ಅಷ್ಟೇ ಅಲ್ದೇ ಬ್ಯಾಂಕ್ ಲಾಕರ್‌ನಲ್ಲೇ ಅವಳ ಸಮಸ್ತ ವಜ್ರ, ವೈಡೂರ್ಯ ಎಲ್ಲಾ ಇರುತ್ತೆ. ಲಾಕರ್‌ನ ಕೀನೂ ಸಹಾ

ಸೇಫ್ ಕೀಪಿಂಗ್‌ಗೆ ಅಂತ ಬ್ಯಾಂಕ್‌ಗೇ ಕೊಟ್ಟಿರ್ತಾಳೆ ಆ ಮಹರಾಯ್ತಿ. ಎನ್ನಾರೈ ತರುಣಿಯ ಪ್ರಶ್ನೆಗೆ ನಿಮ್ಮ ಉತ್ತರ ಏನು?

ಸುಧೀರ್ ಅರವತ್ತು ಡಿಗ್ರಿ ಮಿದಿಳನ್ನೇ ಬಳಸಿ, ಒಂದೊಂದಾಗಿ ಉತ್ತರಗಳನ್ನು ಟೈಪಿಸಲು ತೊಡಗಿದ.

1. ಇಸ್ತ್ರಿ ಮಾಡಿದ ಬಟ್ಟೆಗಳು
2. ಹೌದು
3. ಬ್ಯಾಂಕಿನ ರೂಲ್ಸ್ ಪ್ರಕಾರ ಪ್ರಾಜೆಕ್ಟ್ ರಿಪೋರ್ಟ್ ತನ್ನಿ. ಪ್ರಾಜೆಕ್ಟ್ ಸ್ಯಾಂಕ್ಷನ್ ಆದ್ರೆ ಮುಂದಿನ ಮಾತು.
4. ''ಬನ್ನಿ ಕೂಡಿ, ನೀವು ಯಾವಾಗ ಬರ್ತೀರೋ ಅಂತ ಕಾಯ್ತಾ ಇದ್ದೆ. ನಮ್ಮ ಬ್ಯಾಂಕ್‌ನಲ್ಲೇ ನಿಮ್ಮ ತಾಯಿ ಅಕೌಂಟ್ ಇರೋದು. ಒಂದು ಡೆತ್ ಸರ್ಟಿಫಿಕೇಟ್ ತಂದ್ಬಿಡಿ, ಮಿಕ್ಕಿದ್ದೆಲ್ಲಾ ನಾನು ನೋಡ್ಕೋತೇನೆ.''

★★★★

ನೋಡ್ರೀ, ಸುಧೀರ್ ಟೈಪ್ ಮಾಡಿದ ಉತ್ತರಗಳನ್ನೆಲ್ಲಾ ಓದಿದಿರಲ್ಲಾ. ಏನನ್ಸುತ್ತೆ ನಿಮಗೆ? ಉತ್ತರಗಳೆಲ್ಲಾ ಸರಿಯಾಗಿಯೇ ಇದೆಯಲ್ಲಾ ಅಂದ್ರ. ಹ್ಹ ಹ್ಹ ಹ್ಹ ನೀವೆಲ್ಲೋ ಓಬೀರಾಯನ ಕಾಲದಲ್ಲಿ ಇದ್ದೀರಿ. ಇರ್ಲಿ ಉತ್ತರಗಳನ್ನು ವಿಶ್ಲೇಷಣೆ ಮಾಡಿ, ಹುದ್ದೇ ಯಾರಿಗೆ ಅಂತ ನಿರ್ಧರಿಸೋ ವಿಧಾನಾನ ತೋರಿಸ್ತೇನೆ. ಅದಕ್ಕೆ ಮುಂಚೆ ಇನ್ನಿಬ್ಬರು ಅಭ್ಯರ್ಥಿಗಳನ್ನು ನೋಡಿಬಿಡೋರಂತೆ.

ಹೀಗೆ ಬನ್ನಿ. ಸೀಲಿಂಗ್ ಫ್ಯಾನ್ ಇದೆ ಹುಷಾರು. ಹ್ಞಾ ಅವಳೇ ಸುಚಿತ್ರಾ. ಬಲೇ ಕಿಲಾಡಿರೀ ನೀವು. ಎಷ್ಟು ಬೇಗ ಅವಳನ್ನು ಗುರುತಿಸಿಬಿಟ್ರಿ. ಇನ್‌ಕಂಪೇರಬಲ್ ಬ್ಯೂಟಿ, ಹೇಗೆ ಮಿಸ್ ಮಾಡೋಕ್ಕಾಗುತ್ತೆ ಅಂದ್ರ. ರೀ ಸೂಕ್ಷ್ಮ ಶರೀರದೋರು ಹಾಗೆಲ್ಲಾ ಮಾತಾಡ್ಬಾರ್ದು. ನನ್ನ ಹತ್ರ ಪರ್ವಾಗಿಲ್ಲ ಬಿಡಿ. ಸುಚಿತ್ರಾಗೆ ಇಪ್ಪತ್ತೆರಡು ವರ್ಷ. ಎಂ.ಬಿ.ಎ. ಮಾಡಿದ್ದಾಳೆ. ಗೋತ್ರ ಯಾವ್ದು ಅಂದ್ರ. ಹ್ಹ ಹ್ಹ ಹ್ಹ. ಪರವಾಗಿಲ್ಲಾ ರೀ, ನಿಮ್ಗೆ ಒಳ್ಳೆ ಹಾಸ್ಯಪ್ರಜ್ಞೆ ಇದೆ. ಇಲ್ಬನ್ನಿ, ಅವಳು ಪ್ರಶ್ನೆಗಳನ್ನ ಹೇಗೆ ಉತ್ತರಿಸ್ತಾಳೆ ನೋಡೋಣ. ಇಲ್ಲಿ ಕೂಡ್ರಿ ಇಲ್ಲಿ. ಯಾಕೆ ಒಳ್ಳೆ ಹೆಲಿಕಾಪ್ಟರ್ ಥರಾ ಅವಳ ಕೆನ್ನೇ ಹತ್ರಾನೇ ಹೊವರ್ಮಾಡ್ತಾ ಇದ್ದೀರ? ನನ್ನ ಜೊತೆ ಬಂದಾಗ ನಾನು ಹೇಳಿದ ಹಾಗೆ ಕೇಳ್ಬೇಕು. ಹ್ಞಾ ಹಾಗೆ ತೆಪ್ಪಗೆ ಕೂಡಿ.

★★★★

ಅಸಿಸ್ಟೆಂಟ್ ಮ್ಯಾನೇಜರ್ ಹುದ್ದೇಗೆ ಟೆಸ್ಟ್ ಇದೆ ಅಂತ ತಿಳಿದಾಗಿನಿಂದ ಸುಚಿತ್ರಾಗೆ ವಿಪರೀತ ಟೆನ್ಷನ್. ಕಂಪ್ಯೂಟರ್ ಪರದೇನೇ ನೋಡ್ತಾ, ಪ್ರಶ್ನೆಗಳನ್ನೆಲ್ಲಾ ಏಕಾಗ್ರತೆಯಿಂದ ಅವಳು ಓದಲು ಪ್ರಾರಂಭಿಸಿದಳು. ಯಾಕೋ ಬಲಕೆನ್ನೆ ಆಗಾಗ ಚುಮಚುಮಗುಟ್ಟುತ್ತಿತ್ತು. ಬೆಳಗ್ಗೆ ಬಳಿದುಕೊಂಡ ಫೇಸ್ ಕ್ರೀಮ್‌ನ ಪರಿಣಾಮ ಇರಬಹುದು ಅಂದುಕೊಂಡಳು. ಸುಚಿತ್ರಾ ಪ್ರಶ್ನೆಗಳಿಗೆ ಉತ್ತರಗಳನ್ನು ಟೈಪ್ ಮಾಡಲು

ಶುರುಹಚ್ಚಿದಳು.

1. ನೋಟುಗಳ ಕಂತೆಗಳು
2. ಅದ್ಹೇಗಾಗುತ್ತೇ?
3. ಕಿಕ್ ಬ್ಯಾಕ್ ಎಷ್ಟು? ಪಾವತಿ ವಿಧಾನ ಹೇಗೆ?
4. "I am so sorry. ಯಾರು ನಿಮ್ಮ ತಾಯಿ? ಅವರ ಹೆಸರೇ ಕೇಳಿಲ್ಲವಲ್ಲಮ್ಮಾ. If there in any thing else that I can do, please do let me know. Bye"

★★★★

ನೋಡಿದ್ರೇನ್ರೀ, ಚಿಂದುಳ್ಳಿ ಹುಡುಗಿ, ಬಹಳ ಮುಗ್ಧೆ ಅಂತಾ ಇದ್ರಾಲ್ಲಾ, ಅಲ್ದೇ ಸಿಕ್ಕಿದ್ದೇ ಛಾನ್ಸು ಅಂತ ಅವರ ಕೆನ್ನೇನೂ ಸವರಿಬಿಟ್ರಲ್ಲಾ. ಅವಳು ಬರ್ದಿರೋ ಉತ್ತರಗಳ್ನ ನೋಡಿದ್ರಾ. ಇರ್ಲೀ, ಮೂರನೇ ಅಭ್ಯರ್ಥಿ, ಭಾವನಾ, ಅವಳ್ನ ನೋಡೋಕೆ ಟೈಂ ಇಲ್ಲ. ಈಗಾಗಲೇ ಉತ್ತರಗಳ ಇವ್ಯಾಲುಯೇಷನ್ ಶುರು ಆಗಿದೆ. ಅಲ್ಲೇ ಹೋಗೋಣ ಬನ್ನಿ. ಇದು ಓಪನ್ ಪ್ಲಾನ್ ಆಫೀಸಾದ್ರೂ, ನಾವು ಹೋಗ್ತಾ ಇರೋದು ಬಿಗ್ ಬುಲ್‌ನ ಕ್ಲೋಸ್‌ಡ್ ಕ್ಯಾಬಿನ್‌ಗೆ. ಸಮ್ ಆರ್ಮೋರ್ ಈಕ್ವಲ್ ದ್ಯಾನ್ ಅಧರ್ಸ್ ಅಂತಾರಲ್ಲಾ ಹಾಗೆ. ಇಲ್ಲೇ ಬನ್ನಿ ಈ ಏರ್ ಕಂಡೀಷನರ್ ಮೇಲೆ ಕೂಡೋಣ.

★★★★

ಬಿಗ್ ಬುಲ್ ತನ್ನ ರಿವಾಲ್ವಿಂಗ್ ಎಕ್ಸಿಕ್ಯುಟಿವ್ ಛೇರ್‌ಮೇಲೆ ಕಾಲು ಚಾಚಿ ಕುಳಿತಿದ್ದ. ಅವನ ಕಣ್ಣುಗಳು ಅರೆ ನಿದ್ರೆಯಲ್ಲಿದ್ದವು. ಮುಂದೆ ಒಂದು ಟೇಬಲ್. ಒಂದು ಹಸಿರು ಬಟ್ಟೆ ಹಾಸಿ, ಆರು ತೂತುಗಳನ್ನ ಕೊರೆದ್ರೆ, ಸರಾಗವಾಗಿ ಬಿಲಿಯರ್ಡ್ಸ್ ಆಡೋ ಅಷ್ಟು ವಿಶಾಲವಾಗಿತ್ತು ಆ ಟೇಬಲ್. ಟೇಬಲ್ಲಿನ ಆಚೆ ತುದಿಯಲ್ಲಿ ಸ್ಮಾಲ್ ಬುಲ್ ಕುಳಿತಿದ್ದ.



ಸ್ಮಾಲ್ ಬುಲ್ ಮಾತು ಪ್ರಾರಂಭಿಸಿದ,.

"ಬಿ.ಬಿ. ಮೂರು ಅಭ್ಯರ್ಥಿಗಳ ಉತ್ತರಗಳೂ ಕಂಪ್ಯೂಟರಿನಲ್ಲಿ ಬರುತ್ತಾ ಇದೆ. ಒಂದೊಂದಾಗಿ ಓದಿ ಹೇಳ್ತೀನಿ ನಿಮ್ಮ ನಿರ್ಧಾರ ತಿಳಿಸಿ. ಆಗಬಹುದೇ?"

"ಆಯ್ತು" ಅಂದ ಬಿ.ಬಿ.

"ಸೂಟ್‌ಕೇಸ್ ಅಂದ್ರೆ ಇಸ್ತ್ರಿ ಮಾಡಿದ ಬಟ್ಟೆಗಳು ನೆನಪಿಗೆ ಬರುತ್ತಂತೆ ಸುಧೀರ್‌ಗೆ"

ಬಿ.ಬಿ. ಮೌನವಾಗಿದ್ದ

''ಬಡವ, ಬಲ್ಲಿದ ಎಲ್ಲರೂ ಒಂದೇ ಅಂತೆ ಬ್ಯಾಂಕಿಗೆ''

ಬಿ.ಬಿ. ಕಣ್ಣು ತೆರೆದ.

''ಹಾಗಾದ್ರೆ ಒಂದು ಸಾವಿರ ಬಡವರ್ನ ಸೇರಿಸ್ಕೊಂಡು ಒಂದು ನೂರು ಕೋಟಿ ಡಿಪಾಸಿಟ್ ಮೊಬಿಲೈಸ್ ಮಾಡುಕ್ಕೆ ಹೇಳು ಅವನಿಗೆ. ರಿಸರ್ವ್ ಬ್ಯಾಂಕ್ ರೆಷ್ಯೋ ಹೇಗೆ ಮೇನ್‌ಟೇನ್ ಮಾಡ್ತಾನಂತೆ. ಡ್ರಾಪ್ ಮಾಡಿ ಅವನ್ನ. Next."

ಸ್ಮಾಲ್ ಬುಲ್ ಪುನಃ ಪ್ರಾರಂಭಿಸಿದ.

''ಮುಂದಿನ ಕ್ಯಾಂಡಿಡೇಟ್ ಸುಚಿತ್ರಾ. ಅವಳು ಬರೆದಿರೋ ಉತ್ತರಗಳು ನಿಮ್ಮ ಮಾನಿಟರ್‌ನಲ್ಲೇ ನೋಡಬಹುದು'' ಅಂದ ಎಸ್.ಬಿ.

ಎಸ್.ಬಿ. ಅನುಭವಸ್ಥ. ಗೋಡೆಗಳಿಗೂ ಕಿವಿಗಳಿರುತ್ತೆ. ಸಿ.ಬಿ.ಐ. ಕಿವಿಗಳಾದ್ರೆ ರಿಟೈರಾದಮೇಲೂ ಶನಿಕಾಟ ತಪ್ಪಿದ್ದಲ್ಲ ಅಂತ ಅವನಿಗೆ ಗೊತ್ತಿತ್ತು.

ಬಿ.ಬಿ. ಎರಡನೇ ಬಾರಿ ಕಣ್ಣು ತೆರೆದು ಮಾನಿಟರ್ ನೋಡಿದ. ಅಷ್ಟೇನು ಇಂಪ್ರೆಸ್ ಆದ ಹಾಗೆ ಕಾಣಲಿಲ್ಲ.

''ಹ್ಞ.. ಪರವಾಗಿಲ್ಲ ಆದರೂ ಮೂರನೇ ಅಭ್ಯರ್ಥಿಯ ಉತ್ತರಾನೂ ನೋಡಿ ಆಮೇಲೆ ನಿರ್ಧರಿಸೋಣ'' ಅಂದ ಬಿ.ಬಿ.

''ಮೂರನೇ ಅಭ್ಯರ್ಥಿ ಭಾವನಾ. ಅವಳು ನಾಲ್ಕು ಪ್ರಶ್ನೆಗಳಿಗೂ ಒಂದೇ ಪದದ ಉತ್ತರ ನೀಡಿದ್ದಾಳೆ''

''ಏನದು?''

''ಪ್ರತಿ ಪ್ರಶ್ನೆಗೂ ''ಗೊತ್ತಿಲ್ಲ'' ಅಂತ ಬರೆದಿದ್ದಾಳೆ''

''That's it!!" ಬಿ.ಬಿ. ಕುರ್ಚಿಯಲ್ಲಿ ನೆಟ್ಟಗೆ ಕುಳಿತ ಕಣ್ಣುಗಳು ಉತ್ಸಾಹದಿಂದ ಮಿನುಗುತ್ತಿದ್ದವು. ''ಗೊತ್ತಿಲ್ಲ!! What a fine answer!! ನಮ್ಮ ಎಲ್ಲಾ ಹಿರಿಯ ಬ್ಯಾಂಕ್ ಅಧಿಕಾರಿಗಳೂ ಇದೊಂದು ಉತ್ತರ ಕೊಡೋದನ್ನ ಕಲಿತಿದ್ರೆ ನಮ್ಮ ದೇಶದಲ್ಲಿ ಯಾವ ಸ್ಕಾಮೂ ಆಗ್ತಾ ಇರ್ಲಿಲ್ಲ. ಭಾವನಾ is the girl for me. ಅವಳನ್ನೇ ಅಸಿಸ್ಟೆಂಟ್ ಮ್ಯಾನೇಜರ್ ಹುದ್ದೆಗೆ ನೇಮಿಸೋಣ'' ಅಂತ ಹೇಳಿ ಬಿ.ಬಿ. ಪುನಃ ಸಮಾಧಿಸ್ತನಾದ.

★★★★★★

ತೀರಾ ಅನ್ಯಾಯ, ಸುಚಿತ್ರಾಗೇ ಸಿಗ್ಬೇಕಾಗಿತ್ತು ಹುದ್ದೇ ಅಂದ್ರಾ? ಬಿ.ಬಿ.ಗೆ ಜಡ್ಜ್‌ಮೆಂಟೇ ಇಲ್ಲಾ ಅಂತೀರಾ? ಅವನ್ಗೇನಾಗಿದೇರೀ. ಮಸ್ತಾಗಿದೆ ಜಡ್ಜ್‌ಮೆಂಟ್. ಭಾವನಾ, ಅವನ ಭಾವೀ ಬೀಗರ ನೀಸ್, ಮಗಳ ಮದುವೆ ಆಗೋವರ್ಗೂ ಬೀಗರ್ನ ತಾಜಾಮಾಡುಕ್ಕೆ ಅಂತ ಈ ಆಟ ಅಷ್ಟೇ. ಆಮೇಲೆ ಗ್ರಾಜುಯಲ್ಲಾಗಿ, ಅವಳ್ನ ಈಸ್ ಔಟ್ ಮಾಡ್ತಾನೆ.

ಅಂತೂ ಅದ್ಯಾವ್ದೊ ಶಾಲೆ ನೋಡ್ಬೇಕು ಅಂತಿದ್ರಲ್ಲಾ, ತೃಪ್ತಿ ಆಯ್ತೇನ್ರೀ. ಈಗ ಬನ್ನಿ. ಇದೇ ನಿಮ್ಮ ಮನೆ, ಇದೇ ನಿಮ್ಮ ಮಲಗುವ ಕೋಣೆ, ಗೊರಕೆ ಹೊಯ್ತಾ

ಬಿದ್ಕೊಂಡಿದೆ ನೋಡಿ, ನಿಮ್ಮ ದೇಹ, ಯಾವ ಪರಿವೇನೂ ಇಲ್ದೆ. ಹುಷಾರಾಗಿ ಮತ್ತೆ ದೇಹದೊಳಗೆ ಸೇರ್ಕೊಂಡ್ಬಿಡಿ. ನಿಮ್ಮಾಕೆ, ಹತ್ತು ಘಂಟೆ ಆದ್ರೂ ಎದ್ದಿಲ್ಲ ಅಂತ ಆಗ್ಲೇ ಎರಡು ಸಲ ಬಂದು ನೋಡ್ಕೊಂಡು ಹೋದ್ರು. ಹೋಗುಕ್ಮುಂಚೆ ಒಂದು ಮಾತು. ನೀವು ತಪ್ಪು ತಿಳ್ಕೊಳ್ಳೇ ಇದ್ರೆ ಹೇಳ್ತೀನಿ. ಸ್ಥೂಲ ಶರೀರ ಅಂದ ಮಾತ್ರಕ್ಕೆ ನಿಜವಾಗ್ಲೂ ಇಷ್ಟು ಸ್ಥೂಲವಾಗಿ ಇರ್ಬೇಕು ಅಂತ ರೂಲ್ಸೇನೂ ಇಲ್ಲರೀ. ಸ್ವಲ್ಪ ಡಯಟ್ ಮಾಡಿ. ನಿಮ್ಮ ಸೂಕ್ಷ್ಮ ಶರೀರ ನೋಡಿ, ಎಷ್ಟು ಟ್ರಿಮ್ಮಾಗಿದೆ. ಆಮೇಲೆ ಇನ್ನೊಂದು ಮಾತು. ಹಾರುಕ್ಕೆ ಬರುತ್ತೆ ಅಂತ ನಾನಿಲ್ದೇ ಇದ್ದಾಗ ನೀವು ಒಬ್ರೊಬ್ರೇ ಸೂಕ್ಷ್ಮ ಶರೀರ ಧರಿಸಿ ಹೊರಟುಬಿಟ್ಟೀರ! ಯಾವ ಕೆನ್ನೇಲಿ ಯಾವ ಕ್ರೀಮ್ ಇರುತ್ತೋ. ನಾನಿನ್ನು ಬರ್ಲಾ!



**ನಮ್ಮ ಹೊಸ ಯೋಜನೆ**

# ತಿಂಗಳ ಉತ್ತಮ ಬರಹ

ಮಾರ್ಚ್ ಸಂಚಿಕೆಯಿಂದ ಮೊದಲುಗೊಂಡು, ತಿಂಗಳ ಉತ್ತಮ ಬರಹಕ್ಕೆ ಎಪ್ಪತ್ತೈದು ರೂ. ಗಳ ಪ್ರೋತ್ಸಾಹ ಬಹುಮಾನವೊಂದನ್ನು ನೀಡುವ ಯೋಜನೆಯನ್ನು ಹಮ್ಮಿಕೊಂಡಿದ್ದೇವೆ.

ಮಾರ್ಚ್ ತಿಂಗಳ ಬಹುಮಾನ, ಶ್ರೀಮತಿ ಜಯಂತಿರಾವ್ ಅವರ 'ಕ್ರಿಕೆಟ್ಟಿನೊಡನೆ ಬಾಳು' ಲೇಖನಕ್ಕೆ ಸಲ್ಲುತ್ತದೆ. ಶ್ರೀಮತಿ ಜಯಂತಿರಾವ್ ಅವರಿಗೆ ಅಪರಂಜಿ ಬಳಗದ ಅಭಿನಂದನೆಗಳು.

ಯುಗಾದಿ ಸಂಚಿಕೆಯಲ್ಲಿ ನಿಮಗೆ ಅತ್ಯಂತ ಮೆಚ್ಚಿಗೆಯಾದ ಲೇಖನದ ಬಗ್ಗೆ ನಮಗೆ ಬರೆದು ತಿಳಿಸಿ. ಉತ್ತಮ ಬರಹದ ಆಯ್ಕೆಗೆ ಇದರಿಂದ ನಮಗೆ ಅನುಕೂಲವಾಗುತ್ತದೆ.

**– ಸಂಪಾದಕ**

# ಕ್ರಿಕೆಟ್

ಅ.ರಾ. ಮಿತ್ರ

ಕನ್ನಡದ ಮಕ್ಕಳಿಗೆ ಹುರುಪು ತಂದದ್ದು
ಕ್ರಿಕೆಟ್ ಅಂಬೋ ಕ್ರೀಡೆ
ಕಿರುಚುತ್ತವೆ ಕಾಮೆಂಟರಿ ನೋಡುತ
ಇಡೀ ಕನ್ನಡ ನಾಡೆ

ಅನಿಲ್ ಕುಂಬ್ಳೆಯು ತಿರುಚಿರೆ ಬಾಲು
ಹೆಂಗಳಿಗೆ ಎದೆ ಬಡಿತ ಆಗುವುದು ಚಾಲು
ಶ್ರೀನಾಥ ಶ್ರೀನಾಥ ವೇಗಪತಿ ನಾಥ
ಓಡಿ ಹಾರಿಸು ನೀನು ವಿಕೆಟು ವಿಪರೀತ
ದಾಖಲೆಯ ಸ್ಥಾಪಿಸಲಿ ಡೇವಿಡ್ಡು ಜಾನ್ಸ್‌ನ್ನು
ಸರಕಾರ ಕೊಟ್ಟೀತು ನಿನಗೊಂದು ಮ್ಯಾನ್‌ಷನ್ನು
ರಾಹುಲ ದ್ರಾವಿಡನ ಸೆಂಚುರಿಯು ಚೆಂದ
ಸೊನ್ನೆ ಬಾರಿಸಿದಾಗ ಅವರ ಮತಿ ಮಂದ
ಸುನೀಲ ಜೋಶಿಯೋ ಧಾರವಾಡದ ಫೇಡ
ಬೌಲಿಂಗು ಬ್ಯಾಟಿಂಗು ಆಲ್‌ರೌಂಡು ಘೋಡ
ವೆಂಕಟೇಶ ಪ್ರಸಾದ ಎತ್ತರದ ಆಳು
ದೊಡ್ಡ ಘಟಗಳು ಕೂಡ ಅವಗಾಯ್ತು ಕೂಳು
ಕನ್ನಡಿಗರಾರಿರುವ ಭಾರತದ ತಂಡ
ತೆರೆದುಕೊಳ್ಳಲಿ ಹೊಸತು ಇತಿಹಾಸ ಕಾಂಡ.

# ಬೆಳೆಯುವ ಪಯಿರು....

**ಡಾ|| ಶರಣಬಸವೇಶ್ವರ ಅಂಗಡಿ**

'ಛೇ, ಛೇ,ಛೇ ಏನ್ ಅಸಾಧ್ಯ ತಲೀನೋ ನಿಂದು! ಇದು ಹೀಂಗS ಕೆಲಸ ಮಾಡಿಕೋತS ಹೋದ್ರ ಮುಂದ ನೀ ಭಾಳ ದೊಡ್ಡ ಸೈಂಟಿಸ್ಟ್ ಆಗ್ತೀ ಅನ್ನೋದ್ರಾಗ ಅನುಮಾನಾನS ಇಲ್ಲ'

ಗಲಗಲಿ ಮಾಸ್ತರರ ಘೋಷಣೆ. ಮನಸ್ಸಿಗೆ ಗಲಿಬಿಲಿಯಾರೂ ಹೊಗಳಿಕೆಯಿಂದ ಉಬ್ಬಿ ಹೋಗಿದ್ದೆ. ಹತ್ತನೇ ತರಗತಿಯ ವಿದ್ಯಾರ್ಥಿಯಾದ ನನಗೆ ಗೊತ್ತಿದ್ದ ವಿಜ್ಞಾನಿಗಳಲ್ಲಿ ಆರ್ಕಿಮಿಡಿಸ್ ನೆನಪಾದ. ಸ್ನಾನ ಮಾಡುತ್ತಿದ್ದ ನಾನು ಬಚ್ಚಲು ಮನೆಯ ಬಾಗಿಲು ಹಾರು ಹೊಡೆದು, 'ಯುರೇಕಾ, ಯುರೇಕಾ' ಎಂದು ಕೂಗುತ್ತಾ ರಸ್ತೆಗೆ ಧಾವಿಸಿದ್ದೆ. ನೆರೆಮನೆಯ ನರಸಿಂಹ, ಸಿಂಹಬಲ ಪ್ರಯೋಗಿಸಿ ನನ್ನನ್ನು ಮನೆಯೊಳಕ್ಕೆ ತಂದು ದೂಡಿದ್ದ.

'ಇವ್ನೀಗೇನಾದರೂ ಮೈಮೇಲೆನಾದೂರ ದೆವ್ವ, ಗಿವ್ವ ಬಂತಾ?'

'ಅದೇರಿ ರೇಕಾ, ರೇಕಾ ಅಂತ ಬ್ಯಾರೆ ಬಡ್ಕೊಂತಿದ್ದ ಯಾವ್ದೋ ಹೆಣ್ಣು ದೆವ್ವ ಇರಬೇಕು' ಹೆತ್ತವರ ಹಪಾಹಪಿ.

'ಛೇ, ಚಿಗುರುವ ವಿಜ್ಞಾನಿ ಕುಡಿಯನ್ನಿವರು ಹೀಗೆ ಚಿವುಟುವುದೇ? ಇದು ಸರಿಯಲ್ಲ.

'ಏ.ಏ. ಏನ್ ಬಡಬಡಸಾಕ ಹತ್ತಿಯೋ ತಲೇ ಝಾಡಿಸಿಕೋತ?' ಎಚ್ಚರಿಸಿದ್ದರು ಗುರುಗಳು.

'ಎನಿಲ್ರೀ ಸರS' ಅಂದಿದ್ದಷ್ಟೇ ನೆನಪು

'ಸರ್ ಐಶಾಕ್ ನ್ಯೂಟನ್!'

ಸೇಬಿನ ಮರದಡಿ ಈ ನ್ಯೂನ್ಯೂಟನ್

ತಲೆಯ ಮೇಲೆ ಬಿದ್ದ ಸೇಬನ್ನಿನ್ನೆತ್ತಿ ಪರೀಕ್ಷಿಸಿ, 'ಛೇ ಬೀಳೋದು ಬಿತ್ತು ಒಳ್ಳೆಯ ಸೇಬು ಬಿದ್ರೇನಾಗ್ತಿತ್ತೋ. ಈ ಹುಳಾ ತಿಂದ ಸೇಬೇ ಬೀಳಬೇಕೆ?'

'ಇರಲಿ, ಈ ಸೇಬ್ಯಾಕೆ ಬಿತ್ತು?'

'ಯಾಕೇಂದ್ರ ಗಿಡದಿಂದ ತೊಟ್ಟು ಕಳಚಿತು. ಹಿಡಿಕೊಳ್ಳೋರ್ಯಾರೂ ಮ್ಯಾಲೆ ಇರ್ಲಿಲ್ಲ, ಕೆಳಕ್ಕೆ ಬಿತ್ತು'

'ಆಯ್ತು, ನನ್ತಲೆ ಮೇಲೆ ಯಾಕ್ ಬಿತ್ತು?'

'ಅದು ಬೀಳೋ ಜಾಗದಲ್ಲಿ ನನ್ನ ತಲೆಯಿತ್ತು ಅದಕ್ಕೇ' ಹೀಗೆ ಪ್ರಶ್ನೆ ಕೇಳುತ್ತಾ, ಪರಿಹಾರ ಹುಡುಕುತ್ತಾ ಗುರುತ್ವಾಕರ್ಷಣೆಯೆಡೆಗೆ ಸಾಗಿದ್ದೆ.

'ನಾ, ಆಗಿಂದಾ ಮಾತಾಡ್ಯಾಕತ್ತೀನಿ ಮಾತಾ ಆಡಾಂಗಿಲ್ಲಲ್ಲೊ ಏನಾಗೇತಿ?'

'ವಿಜ್ಞಾನಿಯಾಗಲು ಏನೆಲ್ಲ ಅಡಚಣೆಗಳು, ಛೇ! ಕ್ರಾಂತಿಕಾರಿ ಸಂಶೋಧನೆಯಾಗುವುದು ತಪ್ಪಿ ಹೋಯಿತಲ್ಲಾ' ಪರಿತಪಿಸಿದೆ.

ಫಕ್ಕನೇ ತಲೆಯಲ್ಲಿ ಪ್ರಕಾಶ, ಹೊಳೆಯಿತು ಬಲ್ಬ್ ಹೊತ್ತಿತು - ಥಾಮಸ್ ಆಲ್ವ ಎಡಿಸನ್!

'ಆದರೆ ನಾನಾಗುವೆ ಎಡಿಸನ್

ಮಾಡುವೆ ಆತನ ಅಸಂಖ್ಯ

ಅವಿಷ್ಕಾರಗಳಿಗೆ ಆ್ಯಡಿಷನ್'

'ಏನಾರs ಮಾತಾಡ್ತಿಯೋ ಇಲ್ಲ ಹೀಂಗs ಗರ ಬಡದವರ್ಹಾಂಗ ನಿಂತs ಇರ್ತೀಯೋ' ಕಾವ್ಯಮಯ ಆಲೋಚನೆಗೆ ಕತ್ತರಿ! ತಲೇಲಿ ಹತ್ತಿದ್ದ ಲೈಟನ್ನು ಫಕ್ಕನೆ ಆರಿಸಿದ್ದರು ಮಾಸ್ತರ್ರು.

'ಹಾಗೇನಿಲ್ರೀ ಸರs ಸಾಯಿಂಟಿಸ್ಟ್ ಅಂದ್ರೆಲ್ಲ ಯಾವ ಸಾಯಿಂಟಿಸ್ಟ್ ಆದೇನು ಅಂತ ವಿಚಾರ ಮಾಡ್ತಿದ್ದೆ.'

'ಯಾವನಾರ ಆಗ್ಹಾಂಕತೀ ಆಮ್ಯಾಲ. ಮೊದಲ ನಾ ಯಾಕ ಹಂಗ ಹೇಳ್ದೆ ಅಂತ ಕೇಳು.

'ಹೂಂ, ಅದ್ಸರೀ ಸರs, ನೀವರೇ ಇಂಗ್ಲಿಷ್ ಮಾಸ್ತರು. ನಿಮ್ಮ ಭಾಷಾದ ಪರೀಕ್ಷಾದೊಳಗ ನಾನು ಬರದದ್ದೇನೋ ನೋಡಿ ಹೀಂಗ ಹೊಗಳಾಕ ಹತ್ತೀರಿ ಅನ್ನಿಸ್ತು.

ಹೇಳಿ ಸರs ಯಾಕ ಹಂಗಂದ್ರಿ?'

'ನೋಡಪಾ, ನನಗಂತೂ ವಿಜ್ಞಾನದ ಬಗ್ಗೆ ಭಾಳೇನೂ ಗೊತ್ತಿಲ್ಲ. ಆದರs ನೀನು ಈ present tense ನಿಂದ past tense ಬದಲಾಯಿಸಿದ್ದು ನೋಡಿ ನಿನ್ನ ಕಲ್ಪನಾ ಶಕ್ತಿ ಅಗಾಧ ಅನ್ನಿಸ್ತು'

ಅವರು ಬೆರಳಿಟ್ಟು ತೋರಿಸಿದ ಸಾಲನ್ನು ನೋಡಿದೆ He gives her a present ಅಂತಿದ್ದದ್ದನ್ನು past tense ಗೆ ಬದಲಾಯಿಸಿ.

He gave her a past ಅಂತ ಬರೆದಿದ್ದೆ 'ವಾಹ್ವಾ! ಏನು originality, ಏನು imagination' ಮಾಸ್ತರರ ಧ್ವನಿಯ ವ್ಯಂಗದಲ್ಲಿ ಕೋಪ ಬೆರೆತಿತ್ತು. Past tense ಸರಿಯಾಗಿಲ್ಲದ್ದರಿಂದ ಮೇಷ್ಟ್ರು present ನಲ್ಲೇ tense ಆಗಿದ್ದು ಗೊತ್ತಾಗಿತ್ತು.

'ಸರಿ ಸರ್' ಅಂದಿದ್ದೆ

'ಪಾರವಾಗಿಲ್ಲ ಇದನ್ನ ಬೆಳೆಸ್ಗೊ ಮುಂದ ಒಳ್ಳೇದಾಗ್ತೈತಿ' ಆ tense present past ಆಗಿ ಮೂವತ್ತು ವರ್ಷ ಕಳೆದಿವೆ.

ಗಲಗಲಿ ಮಾಸ್ತರರ ಅನ್ನಿಸಿಕೆ ಪ್ರಾಯಶಃ ನಿಜವಾಗಿದೆ. ನನ್ನ ಅನ್ವೇಷಕ ಆಲೋಚನಾ ಶಕ್ತಿ ಅವ್ಯಾಹತವಾಗಿ ಮುಂದುವರಿದಿದೆ. ಭಿನ್ನವಾಗಿ ಆಲೋಚಿಸುವದು, ಹೊಸ ಅರ್ಥ ಹುಡುಕುವುದು ಸಾಗಿಯೇ ಇವೆ. ಆದ್ದರಿಂದ ನಾನು ವಿಜ್ಞಾನಿಯಾಗಿದ್ದೇನೆಯೇ ಎಂದು ಅನುಮಾನ ಬರುತ್ತದೆ. ನನ್ನ ಅನುಮಾನ ನಿಮ್ಮಲ್ಲಿ ಹಂಚಿಕೊಳ್ಳುತ್ತಲಿದ್ದೇನೆ.

ವರ್ಷ: ಕ್ರಿ.ಶ. 1980. ಸ್ಥಳ: ಹೈದ್ರಾಬಾದು, ಎಣ್ಣೆಕಾಳು ಸಂಶೋಧನೆ ನಿರ್ದೇಶಾಲಯ, ಹುದ್ದೆ : ವಿಜ್ಞಾನಿ. ಆಗ ಸರ್ದಾರ್ಜಿಯೊಬ್ಬರು ಕೇಂದ್ರ ಕೃಷಿಮಂತ್ರಿಗಳಾಗಿದ್ದರು. ಅವರಿಗೆ ಸಹ ಸಚಿವರೊಬ್ಬರು "Mr. Agriculture minister. I think we are intellectual opposites' ಅಂದ್ರಂತೆ. ಇವರಿಗೆ ಅರ್ಥವಾಗದೇ ವಿವರಣೆ ಕೇಳಿದಾಗ "It is so simple, I am intellectual and you are just the opposite' ಅಂತ ಸಮಜಾಯಿಷಿ ಹೇಳಿದ್ದ ಸಂಗತಿ ಚಲಾವಣೆಯಲ್ಲಿತ್ತು.

ಈ ಮಂತ್ರಿ ನಮ್ಮಲ್ಲಿ ಮುಖ್ಯ ಕಾರ್ಯಕ್ರಮ ಉದ್ಘಾಟಿಸಲು ಬರುವವರಿದ್ದರು. ಅವರು ನಮಗೆ ಏನು ಸಲಹೆ ಕೊಡಬಹುದು ಅಂತ ನಾವೆಲ್ಲ ಯೋಚಿಸಿದೆವು. ನನ್ನ ಹೊಸ ಆಲೋಚನೆ ಫಲಿತವಾಗಿ ಹೊಳೆದ ಅವರ ಭಾಷಣ:

'ಪ್ರಿಯ ವಿಜ್ಞಾನಿ ಮಿತ್ರರೇ,

ನೀವೆಲ್ಲಾ ದೇಶವನ್ನು ಎಣ್ಣೆ ಕಾಳುಗಳಲ್ಲಿ ಸ್ವಾವಲಂಬಿಯಾಗಿಸಲು ಶ್ರಮಿಸುತ್ತಲಿದ್ದೀರಿ, ಸಂತೋಷ. ನಾನೂ ಈ ಕುರಿತು ಸುಧೀರ್ಘವಾಗಿ, ಆಳವಾಗಿ ಆಲೋಚಿಸಿದ್ದೇನೆ. ಇತರ ಬೆಳೆಗಳಲ್ಲಿ ಕ್ರಾಂತಿಕಾರಿ ಸಂಶೋಧನೆಗಳಾಗಿವೆ. ದ್ರಾಕ್ಷಿ ಬೆಳೆಯಲ್ಲಿ ಸೀಡ್‌ಲೆಸ್ (ಬೀಜರಹಿತ) ತಳಿಯ ಆವಿಷ್ಕಾರದಿಂದ ಕ್ರಾಂತಿಯಾಗಿದೆ. ಹಾಗೆಯೇ ಸೀಡ್‌ಲೆಸ್ ಸೀಬೆ, ಸೀಡ್‌ಲೆಸ್ ನಿಂಬೆ ತಳಿಗಳ ಅಭಿವೃದ್ಧಿಯಿಂದ ಆ ಬೆಳೆಗಳಲ್ಲಿ ಗಣನೀಯ ಪ್ರಗತಿಯಾಗಿದೆ.

ಎಣ್ಣೆ ಕಾಳುಗಳಲ್ಲಿಯೂ ಅಂಥ ಮುನ್ನಡೆ ಸಾಧ್ಯವಾಗಬೇಕಾದರೆ ನಮ್ಮ ಎಲ್ಲಾ ಮುಖ್ಯ ಎಣ್ಣೆಕಾಳು ಬೆಳೆಗಳಲ್ಲಿಯೂ ಶೀಘ್ರ್ರವೇ ಕನಿಷ್ಠ ಒಂದೊಂದಾದರೂ ಸೀಡ್‌ಲೆಸ್ ತಳಿಗಳನ್ನು ಅಭಿವೃದ್ಧಿ ಪಡಿಸಬೇಕೆಂದು ತಮ್ಮಲ್ಲಿ ಕಳಕಳಿಯಿಂದ ಪ್ರಾರ್ಥಿಸುತ್ತೇನೆ.'

ಎಂಥಾ ಕ್ರಾಂತಿಕಾರಿ ಸಲಹೆ! ಮಿನಿಸ್ಟರ್ ತಲೆಯಲ್ಲಿ Mini stir! ನನ್ನ ಯೋಚನಾ ವಿಧಾನಕ್ಕೆ ನಾನೇ ತಲದೂಗಿದೆ.

ನಾ ಫ್ರಿಜ್ ಕೊಂಡ ಹೊಸತರಲ್ಲಿ ಆದನ್ನು ಕ್ಲೀನ್ ಮಾಡುವ ಉಸಾಬರಿ, ಅದರಲ್ಲಿ ತಂಗಳಾಗಿಸಲು ತಿಂಗಳುಗಟ್ಲೆ ಪೇರಿಸಿಟ್ಟ ಪಾತ್ರೆಗಳನ್ನು ಈಚೆ ತೆಗೆದು ಬಿಸಿ ಮಾಡುವಾಗ ಆಗುವ ಕಿರಿಕಿರಿಗಳಿಂದ 'ಇದಕ್ಕೊಂದು ದುಡ್ಡು ದಂಡ ಮೇಲಿಂದ ಈ ಹೊಸ ತಲೆನೋವು ಅಂತ ಬೇಸರವಾಗಿತ್ತು.'

ಈ ತಂಗಳು ಪೆಟ್ಟಿಗೆ ಕಹಿ ಅನುಭವ ಪ್ರಾಯಶಃ ಸರ್ವಜ್ಞನಿಗೂ ಆಗಿರಬೇಕು. ಅದರಿಂದ ಬೇಸತ್ತೇ 'ತಂಗಳನ್ನು ಬಿಸಿಮಾಡಿ ಉಣಬೇಡ' ಎಂದು ಬುದ್ಧಿವಾದ ಹೇಳಿದ್ದಿರಬೇಕು. ಆದರೂ ನಮಗೆ ಬುದ್ಧಿ ಬರಲಿಲ್ಲವಲ್ಲ ಅಂತ ಹಳ ಹಳಿಸುತ್ತಿದ್ದೆ. ಕ್ರಮೇಣ ಶೀತಲ ಪೆಟ್ಟಿಗೆಯ ಮೇಲೆ ದ್ವೇಷ ಬೆಳೆಯಿತು. ಅದನ್ನು ನೋಡಿದಾಗಲೆಲ್ಲ ನನ್ನ ರಕ್ತಮೊತ್ತದ ಹೆಚ್ಚಾಗತೊಡಗಿತು. ಈ ಸಂದಿಗ್ಧದಲ್ಲಿ ನನ್ನ ನೆರವಿಗೆ ಬಂತು ನನ್ನ ಹೊಸ ಆಲೋಚನಾ ವಿಧಾನ.

'ಈ ತಂ.ಪೆ. ತರುವ ಮುನ್ನ ಹೆಂಡತಿ, ಹೆಚ್ಚು ಉಳಿದ (ಉಳಿದರೆ 'ನನ್ನ ಅಡಿಗೆ ಸರಿಯಾಗಿಲ್ಲ ಅಂತ ಹಂಗಿಸಲು ಹೀಗೆ ಮಾಡಿದ್ದಾರೆ' ಅನ್ನುವ ಕೆಟ್ಟ ಅನುಮಾನ ಅವಳದ್ದು) ಅಡಿಗೆಯನ್ನು ಒತ್ತಾಯದಿಂದ 'ಮುಗಿಸ್ರೀ ಇದನ್ನ, ಇಲ್ಲಿದ್ರೆ Waste ಆಗುತ್ತದೆ' ಅಂತ ತಿನ್ನಿಸುತ್ತಿದ್ದಳು. 'ಹೇಗೂ Waste ಆಗ್ತದೆ ಇವರು ತಿಂದು ವೇಸ್ಟ್ ಆಗಲಿ' ಅನ್ನುವ ಸದಭಿಪ್ರಾಯ ಅವಳಿಗಿತ್ತೇ ಅಂತ ಗೊತ್ತಿಲ್ಲ. ನಾನೂ ಎಷ್ಟೊಂದು ದುಬಾರಿ ಆಹಾರಧಾನ್ಯ, ಅಡಿಗೆ ಸಾಮಾನು, ಇವಳ ಶ್ರಮ ವ್ಯರ್ಥವಾಗುತ್ತದಲ್ಲ' ಅನ್ನುವ ವ್ಯಥೆ ತಡೆಯಲಾಗದೇ ತಿಂದು ಪಾಡು ಪಡುತ್ತಿದ್ದೆ. ತಿನ್ನಲಾಗದಿದ್ದಾಗ ಆಗುತ್ತಿದ್ದ Waste ನಿಂದ Worry ಆಗುತ್ತಿತ್ತು. ತಿಂದಾಗ ನನ್ನ Waistನ ಗಾತ್ರ ವೃದ್ಧಿಸುತ್ತಿತ್ತು.

ಈಗ ನಮ್ಮ ಫ್ರಿಜ್‌ನ ದಯೆಯಿಂದ ಅವ್ಯಾವ ಸಮಸ್ಯೆಗಳು ಇಲ್ಲ! ಏನೇ ಎಷ್ಟೇ ಹೆಚ್ಚು ಉಳಿದರೂ ಶ್ರೀಮತಿ ಗೊಣಗದೆ, ಒತ್ತಾಯಿಸದೇ ಅವನ್ನು ಫ್ರಿಜ್‌ನೊಳಕ್ಕೆ ಪೇರಿಸಿಡುತ್ತಾಳೆ. ಹಾಗೆ ಒಳಹೋದದ್ದೆಲ್ಲಿ ಪರಿಣಾಮಕಾರಿಯಾಗಿ recycle ಆಗುವ ಭರವಸೆಯಿಲ್ಲ. ಅದರಲ್ಲಿ ಮುಕ್ಕಾಲುವಾಸಿ ಶೆಲ್ಫಿನಲ್ಲಿ ಹಿಂದು ಹಿಂದಕ್ಕೆ ಸರಿದು ಹಳಸಿ ಹೋಗುತ್ತವೆ. ಹಾಗೆ ಹಳಸಿದ್ದನ್ನು ನನ್ನವಳು ಹಸನ್ಮುಖಿಯಾಗೇ ಹೊರಗೆಸೆಯುತ್ತಾಳೆ.

ಎಂಥಾ ಮಾನಸಿಕ ನೆಮ್ಮದಿ! ಹಳಸಿದ್ದನ್ನು ತಾನೇ ಬಿಸಾಡುವುದು! ಅದೇ ಬಿಸದನ್ನೇ ಬಿಸಾಡಬೇಕೆಂದರೆ ಎಂತಾ ಮನೋದುಗುಡ. 'ಅದನ್ನು ತಪ್ಪಿಸುತ್ತಲಿರುವ ನಮ್ಮ ತಂಗಳು ಪೆಟ್ಟಿಗೆಯ ಹೊಟ್ಟೆ ತಣ್ಣಗಿರಲಿ!' ಎಂದು ಹಾರೈಸುತ್ತೇನೆ ಹೀಗೆ ಬಿಸಿದನ್ನು ತಣ್ಣಗಾಗಿಸಿ, ತಂಪಾಗಿರಿಸಿ, ಹಳಸಿಸಿ ಬಿಸಾಡುವ ವಿಧಾನಕ್ಕೆ ನಾನಿತ್ತಿರುವ ಹೆಸರು "Wasting through proper channel!'

ನೋಡಿದ್ರಾ ಹೊಸ ಆಲೋನೆಯ advantage ನ್ನು! ನನ್ನ ಮಗನ ಬಹಳ ದಿನಗಳ ಬೇಡಿಕೆಯೊಂದಿತ್ತು. ಅವನಿಗೆ ಸಂಗೀತದ ಗೀಳು. 'ಎಲೆಕ್ಟ್ರಾನಿಕ್ ಪಿಯಾನೋ ಬೇಕು' ಅಂತ ನನ್ನನ್ನು ಅವರಮ್ಮನನ್ನು ಕಾಡಿದ್ದೇ ಕಾಡಿದ್ದು. 'ಈಗಲೇ ಇವನಿಗೆ ಹಲವಾರು ಹಳವಂಡಗಳು, ಅದರಲ್ಲಿ ಇದನ್ನೂ ಕೊಡಿಸಿಬಿಟ್ಟರೆ ಇವನು ಓದುವದ್ಯಾವಾಗ' ಅನ್ನುವ ಆತಂಕದಿಂದ ಅವನ ಬೇಡಿಕೆಯ ಈಡೇರಿಕೆಯನ್ನು ಮುಂದೂಡುತ್ತಲೇ ಇದ್ದೆ. ಅವನು ಅವರಮ್ಮನಿಗೆ ದುಂಬಾಲು ಬಿದ್ದು ನನ್ನನ್ನು Through proper channel ಒತ್ತಾಯಿಸತೊಡಗಿದ. ಅವಳಿಗೆ ಹೇಗಾದ್ರೂ ಮಾಡಿ ಅವನ ಕೋರಿಕೆಯನ್ನು ನನ್ನಿಂದ ಸ್ಯಾಂಕ್ಷನ್ ಮಾಡಿಸುವ ಆಸೆ. ಆದರೆ ನನಗಿದ್ದ ಆತಂಕ ಅವಳಿಗೂ ಇತ್ತು. ಕೊನೆಗೆ ಉಪಾಯವಾಗಿ 'ಈ ಸಾರಿ ತೊಂಭತ್ತು ಪರಸೆಂಟ್

ಅಂಕ ತಗೊಂಡು ಪಾಸಾದರೆ ಕೊಡಿಸ್ತೀನಿ ಅಂತ ಹೇಳ್ರಿ,' ಅಂದಳು. ನನ್ನಿಂದ ಹಣ ಕೀಳಿಸಿ ಮಗನಿಗೆ ಕೀಬೋರ್ಡ್ ಕೊಡಿಸಿದ ಕೀರ್ತಿಗೆ ಪಾತ್ರಳಾಗುವುದರ ಜೊತೆಗೆ ಅವನನ್ನು ಗುರಿ ಸಾಧನೆಗೆ ಪ್ರೇರೇಪಿಸುತ್ತಿರುವ ಇವಳ ಆಲೊಚನಾ ವೈಖರಿಯನ್ನು ಪ್ರಶಂಸಿಸದಿರಲಾದೀತೆ. 'ನಾನೇನು ಕಮ್ಮಿ?' ಅಂತ ನನ್ನ ಆಲೋಚನಾ ವಿಧಾನವೂ ಜಾಗ್ರತವಾಯ್ತು, ಹೇಳಿದೆ.

'ಊಹೂಂ, ಅವನು ತೊಂಬತ್ತು ಪರಸೆಂಟ್ ತಂದರೆ ಅಲ್ಲ ಅವನು ಫೇಲಾದ್ರೇ ಕೊಡಿಸಬೇಕಾದೀತು ಕೀ ಬೋರ್ಡ್' ಅವಳಿಗಿದರ್ಥವಾಗಲಿಲ್ಲ 'ಯಾಕೆ?' ಅಂದಳು.

'ಇನ್ನೇನು? ನೀನು ಓದಿಯಂತೂ ಉದ್ಧಾರವಾಗಲಿಲ್ಲ. ಇದನ್ನಾದ್ರೂ ಬಾರಿಸಿಕೊಂಡು ಜೀವನ ಮಾಡು ಅಂತ ಹೇಳೋಕೆ' ಅಂದೆ

ತನ್ನ ಅಪೂರ್ವ ಆಲೋಚನೆಯನ್ನು ಅವಮಾನಿಸಿದ್ದಕ್ಕೆ ಅರ್ಧಾಂಗಿ ಕೆಂಡಾಮಂಡಲವಾದಳು.

ಇದು ಅಸಾಧಾರಣ ಆಲೋಚನೆಯ ಅವಾಂತರ!

ನನ್ನ ಚಾಣಾಕ್ಷಮತಿ ಚಲಾಯಿಸಿ ಹೋಗಿ ಒಮ್ಮೆ ಪೇಚಿಗೆ ಸಿಲುಕಿದ್ದೆ. ನನ್ನ ಹೊಸ ಹುದ್ದೆಗೆ ಸೇರಿದ ಹೊಸತು. ನನ್ನ ಅಸಿಸ್ಟೆಂಟ್ ಕಿಶನ್ 'ಸರ್ ಮಧ್ಯಾಹ್ನ ರಜೆ ಬೇಕು' ಅಂದ.

'ಯಾಕೆ?' ಕೇಳಿದೆ.

'ನನ್ಹೆಂಡ್ತಿಗೆ ಹುಷಾರಿಲ್ಲ. ಅವಳನ್ನ ಡಾಕ್ಟ್ರ ಹತ್ರ ಕರ್‍ಕೊಂಡ್ಹೋಗ್ಬೇಕು'

ಇನ್ನೂ ಕಿರಿಯ ವಯಸ್ಸಿನ ಕಿಶನ್‌ನನ್ನು ಕಿಚಾಯಿಸುವ ಮನಸಾಯ್ತು. 'ನಿಮ್ಹೆಂಡ್ತಿ ಇದೇ ಈಗ ಫೋನ್ ಮಾಡಿದ್ರಲ್ಲ, ಮೆಜೆಸ್ಟಿಕ್ ಹತ್ರ ಇದ್ದೀನಿ ಮ್ಯಾಟ್ನಿ ಶೋಗೆ ಟಿಕೆಟ್ ಸಿಕ್ಕಿವೆ ಅವರ್ನ ಬೇಗ ಬರೋಕ್ಹೇಳಿ ಅಂತ'

ಕಿಶನ್ ಮುಖ ಬಿಳಿಚಿಕೊಂಡಿತು. 'ಸರ್, ಸರ್ ಅದೂ ತೊದಲಿದ. ಸುಳ್ಳು ಹೇಳಲು ಹೋಗಿ ಸಿಕ್ಹಾಕಿಕೊಂಡದ್ದು ಸ್ಪಷ್ಟವಾಗಿತ್ತು.

'ಏನ್ರೀ, ನನಗೇ ಸುಳ್ಹೇಳ್ತೀರಾ?'

'ಅಲ್ಲಸಾರ್ ಅದು ಮೆಜೆಸ್ಟಿಕ್ ಅಲ್ಲ'

'ಇನ್ಯಾವ ಥೇಟರ್ ನೀವೇ ಹೇಳ್ರೀ'

'ಸಾರ್, ಇದೇನ್ಸಾರ್? ನಾನೇನೋ ಚಿಕ್ಕವ ಸುಳ್ಹೇಳಿದೆ ಅಂತ ನೀವೂ ಸುಳ್ಹೇಳೋದಾ?'

'ಎಲಾ ಇವನ ಚಿಕ್ಕವರು ಮಾತ್ರ ಸುಳ್ಳು ಹೇಳಬಹುದು ಅನ್ನುವಂತಿದೆಯಲ್ಲ ಇವನ ಮಾತಿನ ಧಾಟಿ' ಅಂದ್ಕೊಂಡು

ಕೇಳಿದೆ 'ಏನ್ರೀ ನಾನು ಸುಳ್ಹೇಳ್ತಿದ್ದೀನಾ?'

'ಇನ್ನೇನ್ಸಾರ್ ನನಗೆ ಮದುವೇನೇ ಆಗಿಲ್ಲ ಹೆಂಡ್ತಿ ಎಲ್ಬಂದ್ಲು ಅವಳ್ಯಾವಾಗ ನಿಮಗೆ ಫೋನ್ ಮಾಡಿದ್ಲು?'

ಬೆಚ್ಚಾಗುವ ಸರದಿ ನನ್ನದಾಗಿತ್ತು.

ಹೀಗೆ ನನ್ನ ಅಸಾಧಾರಣ ಆಲೋಚನಾ ಸಾಮರ್ಥ್ಯದಿಂದ ಆದ ಲಾಭ ಹಾನಿಗಳೇನೇ ಇರಲಿ. ಅವನ್ನು ಮೆಲುಕು ಹಾಕುವುದೇ ಮಜಾ.

ಈಗ್ಲಾದ್ರೂ ಒಪ್ತಿರಾ ನಮ್ಮ ಗಲಗಲಿ ಮಾಸ್ತರರು ಹೇಳಿದ್ದು ಖರೇ. ಈಗಿನ ಬೆಳೆಯ ಸಿರಿಯನ್ನು ಅವರು ಮೊಳಕೆಯಲ್ಲೇ ಗುರುತಿಸಿದ್ರು ಅನ್ನುವ ಮಾತನ್ನು?

ನನ್ನ ಅನುಮಾನ ನಿಜವೇ? ದಯವಿಟ್ಟು ಹೇಳಿ.

---




ನಿಮ್ಮನ್ಯಾರ್ರೀ ಕೇಳಿದ್ದು, ಅದನ್ನೆಲ್ಲಾ?..

# PROAGRO Group of Companies

## PROAGRO SEED COMPANY LIMITED

Hybrid Seeds of

| | | |
|---|---|---|
| Yellow Corn | : | 3436, 3438, 3455, 3485, 3461, 4640 |
| White Corn | : | Apna Macca |
| Grain Sorghum | : | 8320, 8340, 8350, 8360, 8562 |
| Fodder Sorghum | : | Proagro Chari, Harasona, Safed Moti |
| Sunflower | : | Jwalamukhi, Divyamukhi, Badshah & Raja |
| Pearl Millet | : | 7501, 7701, 9401, 9402, Super 7701 |

## PROAGRO-PGS INDIA LIMITED

Hybrid Seeds of

| | | |
|---|---|---|
| Tomato | : | Apoorva, Divya, Pragya, Abhiman |
| Brinjal | : | Rajani, Ragini, Mohini |
| Cabbage | : | Bahar, Pragati, Unnati |
| Chill | : | Karishma, Kranti, Sholay, Vardaan |
| Okra (Bhendi) | : | Uphar, Komal |
| Watermelon | : | Suruchi |
| Cucumber | : | Aman, Amrut |

## HYBRID RICE INTERNATIONAL LTD.,

Hybrid Rice : 6201

**We put the power of heterosis at the service of the farmers**

## QUALITY IS OUR TOP PRIORITY

**Corporate & Registered Office**
A-305, 309, 311, Ansal Chambers 1
Tel:011-6185082, 6191163,
6101650, 6174120, 6181622
Fax No. 011-6192084, 6194185

**Proagro Seed Company Ltd.,**
8-139, Toli Chowki, Hyderabad-500 008
Tel:040-3513522,251783,3518047,3518046
3518048, Plant Phone : 3511271
Fax No. 40-3513029

**Proagro-PGS India Ltd.,**
498, 1st Floor, V.V. Nagar,
H.M.T. Layout, G. Nagar, Extn.,
Bangalore-560 032.
Tel. & Fax : 339516.

# ಟೂ ಫಾದರ್ ಕಿಡ್

## (ಲಲಿತ ಪ್ರಬಂಧ?)

**ಹೆಚ್. ಗೋಪಾಲಕೃಷ್ಣ**

ಸಪ್ಲಿಮೆಂಟರಿ ಪರೀಕ್ಷೆಯ ರಿಸಲ್ಟ್ ಬಂದ ಒಂದೇ ತಿಂಗಳಲ್ಲಿ ಬೆಂಗಳೂರಿನ ಕಾರ್ಖಾನೆಯೊಂದರಿಂದ ಕೆಲಸದ ಆದೇಶ ಬಂತು. ಮೊದಲು ಆರುತಿಂಗಳು ಎಂಬತ್ತು ರೂಪಾಯಿಗಳ ತರಬೇತಿ ಸ್ಟೈಪಂಡ್, ಆರು ತಿಂಗಳಲ್ಲಿ ಮೂರು ಪರೀಕ್ಷೆಗಳು, ಪರೀಕ್ಷೆ ಪಾಸಾದ ನಂತರ ನೂರ ಅರವತ್ತು ರೂಪಾಯಿ ಮೂಲವೇತನವಾಗಿ ನೇಮಕ ಮಾಡಿಕೊಳ್ಳುವ ಆದೇಶ ಅದು. ಬ್ಯಾಂಕು, ಸರಕಾರಿ ಕಛೇರಿ ಇತ್ಯಾದಿ ಸಂಬಳ ನೀಡುವ ಸಂಸ್ಥೆಗಳಿಗೆ ಹೋಲಿಸಿದರೆ ಅದು ಅಂತಹ ಉತ್ತೇಜಕ ಸಂಬಳ ಅಲ್ಲದೇ ಇದ್ದರೂ ಸೇರಿಕೊಳ್ಳೋಣ ಕೆಲಸಕ್ಕೆ ಅಂತ ಅನಿಸಿತ್ತು. ಗೆಳೆಯರು ಅಣ್ಣಂದಿರೂ ಸಹ ಸೇರೋ ಪರವಾಗಿಲ್ಲ ಅಂದರು. ಬಂಧು-ಮಿತ್ರರು ಬೆಂಗಳೂರಲ್ಲೇ ಕೆಲಸ, ಟ್ರಾನ್ಸ್‌ಫರು ಗ್ರೀನ್ಸ್‌ಫರು ಇರುಲ್ಲ. ರೀಟೈರು ಆಗೋವರೆಗೂ ಬದುಕಿದ್ದರೆ ಬೆಂಗಳೂರಲ್ಲೇ ಇರುವುದು. ಹೇಗಾದರೂ ಸರಿ ಒಳಗೆ ತೂರ್ಕ್ಕೋ ಅಂತ ಅಡ್ವೈಸಿದರು. ನನ್ನ ಜೊತೆ ಪಲ್ಟಿ ಹೊಡೆದಿದ್ದ ಕೆಲವು ಗೆಳೆಯರು ಆಗಲೇ ಬ್ಯಾಂಕುಗಳಿಗೆ ಸೇರುವ ಹುನ್ನಾರ ನಡೆಸಿದ್ದರು. ಕೆನರಾಬ್ಯಾಂಕ್‌ನಲ್ಲಿ ಅವರು ಗೊತ್ತು, ಸಿಂಡಿಕೇಟ್ ಬ್ಯಾಂಕ್‌ನಲ್ಲಿ ಅಪಾಯಿಂಟ್‌ಮೆಂಟ್ ನಡೆಸೋ ಜನ ನನ್ನ ಚಿಕ್ಕಪ್ಪನ ಕಲೀಗು... ಈ ರೀತಿ ಅವರುಗಳು ವಶೀಲಿಬಾಜಿ ನಡೆಸಿದ್ದರು. ಹೇಳಿಕೇಳಿ ನಾವಿದ್ದದ್ದು ಫ್ಯಾಕ್ಟರಿ ಕೆಲಸಕ್ಕೆ ಹೋಗೋ ಜನವೇ ಇದ್ದ ಲೇಬರ್ ಕಾಲನಿ ಆಗಿದ್ದರಿಂದ ಬ್ಯಾಂಕು ಸರಕಾರಿ ಕಛೇರಿಗಳಲ್ಲಿ ಕೆಲಸ ಮಾಡುವವರ ಸಂಪರ್ಕವೇ ನಮ್ಮ ಮನೇಲೀ ಯಾರಿಗೂ ಇರಲಿಲ್ಲ! ತಿಂಗಳಿಗೆರಡು ಸಲ ಬ್ಯಾಂಕಿಗೆ ಹೋಗಿ ನಮ್ಮ ಅಣ್ಣನ ಸಂಬಳದ ದುಡ್ಡನ್ನು ಬ್ಯಾಂಕಿನಿಂದ ತರೋದು ಅಷ್ಟೇ ಗೊತ್ತಿದ್ದದ್ದು.

ಹೀಗಾಗಿ ಇಪ್ಪತ್ತೈದು ವರುಷದ ಹಿಂದೆ ನಾನು ಬಿ.ಇ.ಎಲ್. ಸೇರಿದ್ದು. ಬಿ.ಇ.ಎಲ್. ಎಲ್ಲಿ ಅಂತ ಆಗ ಗೊತ್ತಿರಲಿಲ್ಲ. ರಾಜಾಜಿನಗರದ ಮನೆಯಿಂದ ಫ್ಯಾಕ್ಟರಿ ಬಸ್‌ನಲ್ಲಿ ಕೂತು ಬಂದರೆ ಯಶವಂತಪುರದ ಟೋಲ್ ಗೇಟ್ ನಂತರ ಕಾರ್ಖಾನೆವರೆಗೆ ಬಟಾನು ಬಯಲು. ರಾತ್ರಿ ಹನ್ನೊಂದೂವರೆಗೆ ಕೆಲಸ ಮುಗಿಸಿ ಮನೆಗೆ ಹೋಗಬೇಕಾಗದರಂತೂ ಕರೀಕಗ್ಗತ್ತಲು ಮತ್ತು ಇಂತಹ ಕಾಡಿನಲ್ಲಿ ಯಾಕೆ ಫ್ಯಾಕ್ಟರಿ ಮಾಡಿದರು ಅಂತನಿಸುತ್ತಿತ್ತು. ಕೋಟಿ ರೂಪಾಯಿ ಕೊಟ್ಟರೂ ಇಂತಹ ಕಡೆ ಮನೆ ಮಾಡಬಾರದು ಅಂತ ಅಂದುಕೊಳ್ಳುತ್ತಿದ್ದೆ.

ನನಗೆ ತರಬೇತಿ ನೀಡಲು ಎಂದೋ ಏನೋ ಕೇರಳದ ಎಕ್ಸ್ ಮಿಲಿಟರಿ ಯೋಧನ ಸಂಗಡ ನಿಯೋಜಿಸಿದರು. ಈತನ ಹೆಸರು ಸೂಲಪಾಣಿ ವಾರಿಯರ್ ಅಂತ. ಸುಮಾರು ದಿವಸ ಮಿಲಿಟರಿಯಲ್ಲಿ ಇದ್ದದ್ದರಿಂದ ಅವನ ಮಾತೃಭಾಷೆ ಮರೆತಿದ್ದ. ಸಂಪರ್ಕದಿಂದ

ಭಾಷೆಗಳನ್ನು ಕೊಂಚ ಕೊಂಚ ಕಲಿತಿದ್ದ. ಆತನ ಒಂದು ವಾಕ್ಯದಲ್ಲಿ ಇಂಗ್ಲಿಷ್, ತಮಿಳು, ಮಲೆಯಾಳಂ, ಹಿಂದಿ ಈ ಭಾಷೆಗಳ ಪದಗಳು ಲೀಲಾಜಾಲವಾಗಿ ನಲಿಯುತ್ತಿದ್ದವು. ಅತಿ ಕೋಪಬಂದಾಗ ''ಉಲ್ಲೂಕ ಪಟ್ಟಾ'' ಎಂದು ಬೈಯುತ್ತಿದ್ದ. ಈ ಉಲ್ಲೂಕ ಪಟ್ಟದ ಅರ್ಥ ಈ ತನಕ ನನಗೆ ಆಗಿಲ್ಲ. ಮಷೀನ್‌ಶಾಪ್‌ನಲ್ಲಿ ಕೆಲಸ ನಡೆಸುತ್ತಿದ್ದ ಆಪರೇಟರುಗಳು ಎಸ್ಸೆಸ್ಸೆಲ್ಸಿ ಫೇಲೋ ಪಾಸೋ ಆಗಿ ಮೆಕ್ಯಾನಿಕ್ ತರಪೇತಿ ಪಡೆದು ಆಪರೇಟರ್‌ಗಳಾಗಿ ಕೆಲಸ ನಿರ್ವಹಿಸುತ್ತಿದ್ದರು. ಅವರ ಮಧ್ಯ ಒಬ್ಬ ಬಿಎಸ್‌ಸಿ ಗ್ರಾಜ್ಯುಯೇಟ್ ಬಂದಿದ್ದು ಅವರಿಗೆ ಒಂದು ರೀತಿ ಹೆಮ್ಮೆ ಅಂತ ಅನಿಸಿತ್ತಂತೆ (ಈ ವಿಷಯ ಅವರ ಸಂಗಡ ಪಳಗಿದ ನಂತರ ನನಗೆ ತಿಳಿದುಬಂದಿದ್ದು) ಪ್ರತಿಯೊಬ್ಬರಿಗೂ ಇಂಗ್ಲೀಷಿನಲ್ಲಿ ಮಾತನಾಡಬೇಕು ಅನ್ನೋ ವಾಂಛೆ. ಈ ವಾಂಛೆಯಿಂದ ಹಲವಾರು ಬಾರಿ ನನ್ನನ್ನೂ ಗೊಂದಲದಲ್ಲಿ ಮುಳುಗಿಸಿ ಅವರೂ ಗೊಂದಲಕ್ಕೆ ಒಳಗಾಗುತ್ತಿದ್ದರು.

ವಾರಿಯರ್ ಮಾಜಿ ಯೋಧ ಅಂತ ಹೇಳಿದೆ. ಶೀಟ್‌ಮೆಟಲ್ ಷಾಪ್‌ಲ್ಲಿ ಈತ ಯೋಧರು ಉಪಯೋಗಿಸುವಂತ 'ಮಗ್'ಗಳನ್ನು ಸ್ಟೀಲ್ ಹಾಳೆಯಲ್ಲಿ ಮಾಡಿಸಿ ತಂದಿಟ್ಟಿದ್ದ. ಕಾರ್ಖಾನೆಗೆ ಸೇರಿದ ಈ ಫ್ಲೋರ್‌ಗೆ ಬಂದ ಮೊದಲನೇ ದಿವಸವೇ ನನಗೆ ಈ 'ಮಗ್'ಗಳಿಂದ ಆದ ಆಘಾತ ಇನ್ನೂ ನೆನಪಿನಲ್ಲಿದೆ. ಆರೂವರೆಗೆ ಸೆಕ್ಷನ್ನಿಗೆ ಬಂದ ಕೂಡಲೇ ನೂರುಜನ ಆಪರೇಟರು ನಮ್ಮ ಕೊಠಡಿ ಮುಂದೆ ನೆರೆದಿದ್ದರು. ಏನಾಯಿತೋ ಎಂಬ ಗಾಬರಿಯಲ್ಲಿ ಕೊಠಡಿ ಸೇರಿದರೆ ವಾರಿಯರ್ ಎಲ್ಲರಿಗೂ ಮಗ್‌ಗಳನ್ನು ಹಂಚುತ್ತಿದ್ದಾನೆ! 'ಏಕೆ ಹೀಗೆ?' ಅಂದೆ. ಅಂದಾಳು ವೆಚ್ಚಕೊಳ್ರದಿಕ್ಕೆ ನೈಹೋತಾ ದೇ ಡೋಂಟ್ ಕೀಪ್ ಸೇಫಿಲಿ. ಐಯಾಮ್ ಕಸ್ಟಡಿಂಗ್ ದೀಸ್ ಮಗ್ಸ್ ಅಂದ! ಅವರು ಕಾಫಿ ಕುಡಿದ ನಂತರ ಈತನೇ ಹೋಗಿ ಮಗ್‌ಗಳನ್ನು ಹಿಂದೆ ತಂದು ಒಂದು ಪೆಟ್ಟಿಗೆಯಲ್ಲಿ ಹಾಕಿಟ್ಟ. ಇದರ ಪುನರಾವರ್ತನೆ ಮತ್ತೆ ಒಂದೂವರೆಗೆ ಟೀ ಸಮಯದಲ್ಲಿ ನಡೆಯಿತು.

ಅಲ್ಲಾ ವಾರಿಯರ್ ನಿನ್ನ ಇಡೀ ಸಮಯ ಇದಕ್ಕೇ ಹೋಗುತ್ತಲ್ಲಾ?

ಅದಕ್ಕಿಂತಲೂ ಬೇರೆ ಕೆಲಸ ಎನ್ನ ಇರ್ಕಿ?

ಇದಕ್ಕೆ ನನ್ನ ಹತ್ತಿರ ಉತ್ತರ ಇರಲಿಲ್ಲ.

ಒಂದೆರಡು ತಿಂಗಳ ನಂತರ ವಾರಿಯರ್ ರಜಾಹಾಕಿ ಒಂದುವಾರ ಊರಿಗೆ ಅಂತ ಹೋದ. ನನ್ನ ಕೊಠಡಿನಲ್ಲಿ ನಾನೇ ಮಹಾರಾಜ. ಪ್ರತಿದಿವಸ ಬಂದ ಕೂಡಲೇ ಈ ಮಗ್ ಪುರಾಣ ನೋಡಿ ನೋಡಿ ಬೇಸರ ಬಂದುಹೋಗಿತ್ತು. ಜೀವಮಾನ ಪೂರ್ತಿ ಈ ಮಗ್ಗುಗಳನ್ನು ಹಂಚುವ ವಾಪಸು ತೆಗೆದುಕೊಳ್ಳುವ ಕೆಲಸವೇ ನಡಿಯುವುದು ಎಂಬ ಹೆದರಿಕೆ ಶುರುವಾಗಿತ್ತು. ಎಂದಿನಂತೆ ಬೆಳಿಗ್ಗೆ ವಾರಿಮರ್ ರಜಾಹಾಕಿದ ಮೊದಲೇ ಬೆಳಿಗ್ಗೆ ಕೊಠಡಿ ಪ್ರವೇಶಿಸಿದೆ. ಐದಾರು ನಿಮಿಷದಲ್ಲಿ ಹೊರಗಡೆ ಆಪರೇಟರುಗಳ ಗುಂಪು. ವಾರಿಮರ್ ಎಂಗೆ ಮಗ್? ಮಗ್ ಕುಡುಚಾರ್ ಎಂಬ ಮಾತುಗಳು. ಮಗ್‌ಗಳನ್ನು ತುಂಬಿದ್ದ ಟ್ರಂಕ್ ತಂದು ಆಚೆ ಇರಿಸಿದೆ.

ನಿಮ್ಮ ನಿಮ್ಮ ಮಗ್‌ಗಳನ್ನು ತೆಗೆದುಕೊಳ್ಳಿ. ಇದನ್ನು ನೀವ್ ಇಟ್ಕೊಳ್ಳಿ ವಾಪಸ್ ತರಬೇಡಿ ಅಂದೆ' ಒಂದು ವ್ಯವಸ್ಥೆಗೆ ಹೊಂದಿಕೊಂಡಿದ್ದ ಆಪರೇಟರುಗಳು ಒಂದೆರಡು ನಿಮಿಷ ಬಾಯಿಬಿಟ್ಟು ನಿಂತರು. ''ಎಡೆತುಕೋಂಗಲ್ಡಾ ಇವನ್ನ ಯಾ ಕೇಕರದಿ'' ಅಂತ ಒಂದು ಧ್ವನಿ ಆಕಡೆಯಿಂದ ಬಂತು. ಎರಡೇ ನಿಮಿಷದಲ್ಲಿ ಮಗ್‌ಗಳು ಖಾಲಿಯಾಗಿ ಬರಿದಾದ ಟ್ರಂಕ್ ಬಿದ್ದಿತ್ತು. ಟ್ರಂಕ್ ಒಳಗಿರಿಸಿದೆ. ಮಗ್‌ಗಳನ್ನು ಯಾರೇ ವಾಪಸ್ ತಂದರೂ 'ತಗೊಳ್ಳಲ್ಲ' ಅಂದೆ. ಮೂರನೇ ದಿವಸ ಕೆಲಸಕ್ಕೆ ಬಂದರೆ ಆರೂವರೆಯಿಂದ ಎಂಟರವರೆಗೆ ಅಂದರೆ ಕಾಫಿ ಸಮಯದ ತನಕ ಟೆನ್ಶನ್ ಫ್ರೀ ಸಮಯ ಕಳೆದೆ. ಈ ಹೊಸಾ ಸಿಸ್ಟಂಗೆ ನಾನು ಅಡ್ಜಸ್ಟ್ ಆಗುವ ಸಮಯಕ್ಕೆ ವಾರಿಮರ್ ರಜಾ ಮುಗಿಸಿ ಬಂದ. ಹಾರೊಡೆದಿರವ ಟ್ರಂಕ್, ಮಗ್‌ಗಳು ಆಪರೇಟರ್ ಹತ್ತಿರ ನೋಡಿದ. ಸಾಮ್ರಾಜ್ಯ ಕಳೆದುಕೊಂಡ ಚಕ್ರವರ್ತಿಯ ಮುಖ ನಾನು ನೋಡಿರಲಿಲ್ಲ. ಆದರೆ ಈಗಿನ ವಾರಿಮರ್ ಮುಖ ಆ ಚಕ್ರವರ್ತಿ ಮುಖದ ಹಾಗೇ ಆಗಿತ್ತು ಅಂತ ಹೇಳಬಹುದೇನೋ! ವಾರಿಮರ್‌ಗೆ ಕೋಪ ಬಂತು ಒಂದೆರಡು ನಿಮಿಷ ಚಡಪಡಿಸಿದವನು ಉಲ್ಲೂಕ ಪಟ್ಟಾ ಕ್ಯಾ ಬನಾದಿಯಾರೇ... ಅಂದ! ಇಂತಹ ವಾರಿಮರ್ ಸಂಗಡ ಸುಮಾರು ಹತ್ತುವರ್ಷ ನನ್ನ ಸಹೋದ್ಯೋಗ ನಡೀತು.

ಆಪರೇಟರುಗಳಿಗೆ ಇಂಗ್ಲೀಷ್ ಮಾತಾಡಬೇಕು ಅಂಬೋ ವಾಂಛೆ ಅತಿ ಅಂತ ಹೇಳಿದೆ. ಪಾರ್ಥಸಾರಥಿ ಅಂಬೋ ಆಪರೇಟರು ಒಂದು ಸಲ ಹೊಸಾ ಡ್ರಿಲ್‌ಬಿಟ್ ತಗೊಂಡು ಹೋದ (ಡ್ರಿಲ್‌ಬಿಟ್ Drill bit ರಂಧ್ರ ಕೊರೆಯುವ ಸಾಧನ) ಎರಡೇ ನಿಮಿಷದಲ್ಲಿ ಐವಾಂಟ್ ಬೇರೆ ಅಂತ ಬಂದ. 'ವೈಯು ವಾಂಟ್ ಬೇರೆ?' ಇದು ವಾರಿಮರ್ ಪ್ರಶ್ನೆ. 'ಯುವರ್ ಸಾಮಾನ್ ಈಸ್ ಬೆಂಡ್ ಹೈ' ಇದು ಅವನ ಉತ್ತರ. ಅಶ್ಲೀಲವಾಗಿ ಈತ ಹಂಗಿಸಿದ ಅಂತ ವಾರಿಮರ್ ದೂರು ನೀಡಿದ. ಆಪರೇಟರುಗಳ ಇಂಗ್ಲೀಷ್ ವ್ಯಾಮೋಹ ತಿಳಿದಿದ್ದ ಅಧಿಕಾರಿ ಇಬ್ಬರನ್ನೂ ಕರೆಸಿ ರಾಜಿ ಮಾಡಿಸಿದ.

ಶಿವಶಂಕರ್ ಅಂತ ಮತ್ತೊಂದು ಪ್ರಾಣಿ ಆಪರೇಟರ್ ಆಗಿತ್ತು. ನಾನು ಎಸ್ಸೆಲ್ಸಿ ಫೈಲ್ ಗ್ರಾಜುಯೇಟ್ ಅಂತ ಆಗಾಗ ಈತ ತನ್ನ ಬಗ್ಗೆ ಹೇಳಿಕೊಳ್ಳುತ್ತಿದ್ದ. ಒಂದು ಸಲ ಯಾವುದೋ ಮಾತಿಗೆ ನೀನೇನು ಇನ್ನೂ ಮಗುವೇ? ಅಂತ ರೇಗಿದೆ. ಶಿವಶಂಕರ್ ತಟಕ್ಕನೆ 'ಐಯ್ಯಾಮ್ ಟೂ ಫಾದರ್ ಕಿಡ್ ಸರ್' ಅಂದ.

ಈತನ ಈ ಟೂ ಪಾದರ್ ಕಿಡ್ ವಾಕ್ಯದ ಅರ್ಥ ನನಗೆ ಆಗಲು ಮತ್ತೂ ಎರಡು ವರ್ಷ ಬೇಕಾಯಿತು! ನಾನು ಎರಡು ಮಕ್ಕಳ ತಂದೆ ಅಂತ ಆ ವಾಕ್ಯದ ಅರ್ಥವಂತೆ.

ಕೆಲಸಕ್ಕೆ ಸೇರಿದವರಿಗೆ ಕಾರ್ಖಾನೆಯಲ್ಲಿ ಟೋಕನ್ ನಂಬರ್ ಅಂತಲೋ ಸ್ಟಾಫ್ ನಂಬರ್ ಅಂತಲೋ ಒಂದು ನಂಬರು ನೀಡುತ್ತಾರೆ. ಆ ನಂಬರಿನಿಂದಲೇ ಆತ ಮುಂದೆ ಫ್ಯಾಕ್ಟರಿಯ ದಾಖಲೆಗಳಲ್ಲಿ ಗುರುತಿಸಿಕೊಳ್ಳುತ್ತಾನೆ. ಇದೇ ಶಿವಶಂಕರ ಒಮ್ಮೆ ನನ್ನ ಬಳಿ ಬಂದು 'ಹೌ ಈಸ್ ಇವರ್ ಸ್ಟಾಪ್ ನಂಬರ್? ಅಂತ ಕೇಳಿದ.

'ಮೈನಾ? ಇಟ್ ಈಸ್ ಓಕೆ...' ಅಂದೆ.

ಮತ್ತೆ ಮೊದಲನೇ ಪ್ರಶ್ನೆ ಎಸೆದ. ನಿಮಗೇನುಬೇಕು ಹೇಳ್ರೀ? ಅಂದೆ. 'ನಿಮ್ಮ ನಂಬರು ಹೇಳಿ ಸಾರ್, ನನ್ನಂತಹ ಎಸ್ಸೆಲ್ಸಿ ಫೈಲ್ಡ್ ಗ್ರಾಜ್ಯುಯೇಟ್‌ನ ಇಂಗ್ಲಿಷ್ ನಿಮಗೆ ಅರ್ಥ ಆಗುಲ್ಲ ಅಂದರೆ ಕಾಲೇಜ್ನಲ್ಲಿ ಅದೇನು ಕಲಿತ್ರೋ ಅಂತ ಗೊಣಗುತ್ತಾ ಹೋದ. ಕಾರ್ಖಾನೆಗೆ ಸಂಬಂಧಿಸಿದ ಅದೆಷ್ಟೋ ಸರ್ಕ್ಯುಲರುಗಳನ್ನು ಈ ಕಾಲದಲ್ಲೇ ನಾನು ತಿರುವಿಹಾಕಿದ್ದು. ಹೀಗೆ ತಿರುವಿ ಹಾಕಬೇಕಾದರೆ ಒಂದು ಸಲ ಸ್ಥಾಯೀ ನಿಯಮಗಳು ನನ್ನ ಕಣ್ಣಿಗೆ ಬಿದ್ದಿತ್ತು. ಸ್ಥಾಯೀ ನಿಯಮ ಅಂದರೆ ಗೊತ್ತಲ್ಲಾ? Standing orders ಅಂತ ಹೇಳ್ತಾರೆ. ಈ ನಿಯಮಗಳ ಕಂತೆಯನ್ನು ಓದುತ್ತಾ ಹೋದಂತೆ ಈ ನಿಯಮದ ರೀತಿ ನಡೀತಾ ಹೋದರೆ ಒಂದೇ ಒಂದು ನಿಮಿಷ ಯಾರೂ ಈ ಕಾರ್ಖಾನೇಲಿ ಕೆಲಸ ಮಾಡಲು ಆಗದು ಅನಿಸಿತು. ನನ್ನ ಅನಿಸಿಕೆಯನ್ನು ಗ್ಯಾಜುಯೇಟ್‌ಗೆ ಹೇಳಿದೆ. ಇಂಗ್ಲೀಷ್ ಪಂಡಿತ ನನಗೆ ಮಾರುತ್ತರಿಸಿದ್ದು ಹೀಗೆ -ವೈ ವರಿ ಸಾರ್? ಸೀ ಐಮಾಮ್ ಫಾರ್ಟಿ ಫೋರ್ ಇಯರ್ಸ್, ಪುಟ್ಟಿಡ್ ಫಿಫ್ಟೀನ್ ಇಯರ್ಸ್. ಹಿಯರು ನಥಿಂಗ್ ಚಾರ್ಜ್‌ಷೀಟು ಮೆಮೋ ಗಾಟೆಡ್. ಸಿಂಪ್ಲಿ ಆರ್ಡರ್ಸ್ ಫಾರ್ ಆರ್ಡರ್ ಕಂ ಪಂಚ್ ಎಂಡ್ ಗೋ....

(ನನಗೆ ನಲವತ್ತನಾಲ್ಕು, ಹದಿನೈದು ವರ್ಷ ಸರ್ವೀಸು ಇಲ್ಲಿ ಯಾವುದೂ ಚಾರ್ಜ್‌ಲ್ಲಿರೋ ಮೆಮೋ ಬಂದಿಲ್ಲ. ಆರ್ಡರ್ ಪಾಡಿಗೆ ಆರ್ಡರು. ಬಾ ಪಂಚ್ ಮಾಡು ಹೋಗು.)

ಆಡಳಿತ ವರ್ಗದ ಸಂಗಡ ಸಂಪರ್ಕ ನಡೆಸಲು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳನ್ನು ಉಪಯೋಗಿಸಬೇಕು ಎಂಬುದೊಂದು ನಿಯಮ ನಮ್ಮ Standing orders ನಲ್ಲಿ ಕಾಣಿಸಿತ್ತು. ಅದರಂತೆ ಕನ್ನಡದಲ್ಲಿ ರಜೆ ಅರ್ಜಿ ಬರೆದು ರವಾನಿಸಿದೆ. ಆಗ ನಮ್ಮ ಇಲಾಖೆಗೆ ಅಪ್ಪಟ ತಮಿಳು ಅಧಿಕಾರಿ ಬಾಸು ಬೆಂಬಳೂರಿಗೆ ಬಂದು ಮೂವತ್ತು ವರ್ಷ ಆಗಿದ್ದರೂ ಕನ್ನಡ ಮಾತು ಕೇಳಿದರೆ ಮುಖ ಸಿಂಡರಿಸುತ್ತಿದ್ದ. ಅವನ ಮುಖ ಇರೋದೇ ಹಾಗೆ ಅಂತ ನಾವು ನಂಬಿದ್ದೆವು. ಆತ ಕರೆದ 'ಎನ್ನಾ ಇದಿ?' ಅಂದ ನನ್ನ ಲೀವ್ ಲೆಟರ್ ತೋರಿಸಿ 'ಏನು?' ಅಂದೆ (ತಮಿಳು ಪ್ರಶ್ನೆಗೆ ಉತ್ತರ ನೀಡಲಾರರು ಎಂಬ ಹಮ್ಮು)

''ವಾಟ್ ಈಸ್ ದಿಸ್?''

''ಲೀವ್ ಲೆಟರ್ ಸಾರ್''

''ವೈ ರೈಟ್ ಇನ್ ದಿಸ್ ಲಾಂಗ್ವೇಜ್? ರೈಟ್ ಇನ್ ಇಂಗ್ಲೀಷ್..''

ನೋ ಸಾರ್, ಆಸ್‌ಪರ್ ಸ್ಟ್ಯಾಂಡಿಂಗ್ ಆರ್ಡರ್ ರೂಲ್ಸ್. ಅಂತ ವಿವರಿಸಿ ಕನ್ನಡದಲ್ಲಿ ಬರೀಬಹುದು ಅಂದೆ.

ಡೋಂಟ್ ವೇಸ್ಟ್ ಮೈ ಟೈಂ ಗೋ ಅಂಡ್ ಬ್ರಿಂಗ್ ಇನ್ ಇಂಗ್ಲಿಷ್ ಅಂತ ರಜೆ ಚೀಟಿ ಎಸೆದ. ನನಗೋ ಬಿಸಿರಕ್ತ. ''ಯು ಹ್ಯಾವ್ ಇನ್‌ಸಲ್ಟೆಡ್ ಮಿ ಅಂಡ್ ಮೈ ಮದರ್

ಟಂಗ್ ಐ ವಿಲ್ ನಾಟ್ ಸಿಟ್ ಕ್ವೈಟ್...'' ಅಂತ ರೇಗಿ ಆಚೆ ಬಂದೆ.

ಮಧ್ಯಾಹ್ನವೆ ಕನ್ನಡದ ಅಧಿಕಾರಿ ರಾಮಣ್ಣ ಹತ್ತಿರ ಬಂದರು. 'ಏನ್ರೀ ಪ್ರಾಬ್ಲಂ ನಿಮ್ಮದು ನಟರಾಜನ್ ಹತ್ತಿರ?' ಅಂತ ಕೇಳಿದರು. ಹೇಳಿದೆ, ''ನಾವು ಇಲ್ಲಿಗೆ ಬರೋದು ಇಂತಹ ವಿಷಯಕ್ಕೆ ಜಗಳ ಕಾಯೋದಕ್ಕೆ ಅಲ್ಲಪ್ಪಾ, ಕನ್ನಡದ ಮೇಲೆ ಪ್ರೀತಿ ಇರಲಿ. ನಾನೂ ಐ ಆ್ಯಮ್ ಆಲ್‌ಸೋ ಕನ್ನಡಿಗ. ಕನ್ನಡ ಪುಸ್ತಕ ಓದಿ ಕನ್ನಡ ಸಿನೆಮಾ ನೋಡಿ, ಕನ್ನಡದಲ್ಲಿ ಬರೀರಿ....' ಮೊದಲಾಗಿ ಒಂದು ಘಂಟೆ ಕೊರೆದು ರಜೆ ಚೀಟಿ ವಾಪಸ್ ನೀಡಿ ಹೋದರು! ಇಂತಹವರಿಗೇ ಬೇಡದೇ ಇರೋ ಕನ್ನಡ ನನಗೇಕೆ ಅಂತ ಇಂಗ್ಲೀಷಿನಲ್ಲಿ ರಜೆಚೀಟಿ ಬರೆದೆ.

ಕೋಟಿ ರೂಪಾಯಿ ಕೊಟ್ಟರೂ ಇಂತಹ ಕಡೆ ಮನೆ ಮಾಡುವುದಿಲ್ಲ ಅಂತ ಹೇಳುತ್ತಿದ್ದ ಕಾರ್ಖಾನೆಯಿಂದ ಐದು ಕಿ.ಮೀ. ಆಕಡೆ ನಿಜವಾಗಲೂ ಕಾಡಿನ ಮಧ್ಯೆ (ಅರಣ್ಯಪುರ!) ಮನೆ ಕಟ್ಟಿಕೊಂಡೆ. ಮೂವತ್ತು ಐವತ್ತರ ಸೈಟು ಮೂರು ಸಾವಿರ ಆರ್ನೂರ ಅತವತ್ತಾರು ರೂಪಾಯಿಗೆ ಕಂತಿನಲ್ಲಿ ಖರೀದಿಸಿದ್ದು 1977ರಲ್ಲಿ!

ರಜೆಚೀಟಿ ಪ್ರಸಂಗ ನಡೆದ ಕೆಲವೇ ವರ್ಷಗಳಲ್ಲಿ ಕನ್ನಡಿಗರ ಹಿತ ರಕ್ಷಿಸುವ ಸಂಗ ಹುಟ್ಟಿತು. ಕಾರ್ಖಾನೆ ಒಳಗಿನ ವ್ಯವಹಾರ ಕನ್ನಡದಲ್ಲೇ ನಡೆಯಲಾರಂಭಿಸಿತು. ಕನ್ನಡೇತರರಿಗೆ ಕನ್ನಡ ಕಲಿಕೆ ತರಗತಿ ಆರಂಭವಾಯಿತು! ಈಗ ಎಲ್ಲೆಡೆ ಕನ್ನಡದ ಕಸ್ತೂರಿ ಘಮಘಮಾಡಿಸ್ತಿದೆ! ಕನ್ನಡಿಗರೂ ತಮಿಳು ಕಲಿತಿದ್ದಾರೆ!!

ಮೇಲೆ ಹೇಳಿದ ರಾಮಣ್ಣ ಕಾರ್ಖಾನೆಯ ಅತ್ಯುನ್ನತ ಹುದ್ದೆ ಅಲಂಕರಿಸಿದರು. ಅವರನ್ನು ಯಾವುದೋ ಸಂಗತಿಗೆ ಕಾಣಲು ಹೋದೆ. ಈ ವೇಳೆಗೆ ಕನ್ನಡದಲ್ಲಿ ಒಂದು ಚೂರು ಚೂರು ಸಾಹಿತ್ಯ ಪಾಹಿತ್ಯ ಅಂತ ಮಾಡಿದ್ದೆ. ನಾಲ್ಕು ಪುಸ್ತಕಗಳು ಅಚ್ಚಾಗಿದ್ದವು. ಸಮಯ ಮಾಡಿಕೊಂಡು ಲಾ ಮುಗಿಸಿದ್ದೆ. ನನ್ನ ಎರಡು ಪುಸ್ತಕ ರಾಮಣ್ಣ ಅವರಿಗೆ ನೀಡಿದೆ. ಹಳೇಕತೆ ('ಕನ್ನಡ ಓದಿ, ಬರೀರಿ') ನೆನಪಿಸಿದೆ.

'ಇಪ್ಪಡಿ ಆಚಿ ಸರ್' ಅಂದೆ

ಅವರು ನಕ್ಕರು. 'ನೋಡಿ ನೌಯು ಹ್ಯಾವ್ ಮೆಚ್ಯೂರ್ಡ್. ನನ್ನ ಹತ್ತಿರವೇ ತಮಿಳು ಮಾತಾಡಿದ್ರಿ...' ಅಂತ ಮತ್ತೆ ನಕ್ಕರು. 'ಐ ಯಾಂ ಟೂ ಫಾದರ್ ಕಿಡ್‌ಸರ್' ಅಂದೆ! ಎರಡು ಮಕ್ಕಳ ತಂದೆಯಾಗಿಯೂ ಮೆಚ್ಯುರ್ ಆಗಿಲ್ಲ ಅಂದರೆ?

---

**ಕಲಬೆರಕೆ**

**ಇದೆ**

**ಕಸಪೊರಕೆ**

**ಯಲ್ಲೂ**

**- ಶಂಸ**

# ''ಕನಕ ಸುಂದರಿ''

## -: ಜಾಹೀರಾತು :-

- ಸೀ.ಆರ್. ಸತ್ಯ

ಬೆಂಗಳೂರಿನ ಕನಕಪುರ ರಸ್ತೆಯಲ್ಲಿರುವ ಮಹಿಳೆಯರಿಗೆ ನಾಡಿನಾದ್ಯಂತ ದೂರದರ್ಶನದಲ್ಲಿ ರಾರಾಜಿಸಲು ಇದೊಂದು ಉತ್ತಮ ಅವಕಾಶ! ಬರುವ ಯುಗಾದಿಯ ದಿನ ಆರ್ಮುಗಂ ಅಚ್ಚನ್ ಕಾರ್ಪೊರೇಷನ್‌ರವರು ''ಕನಕ ಸುಂದರಿ'' ಸ್ಪರ್ಧೆಯನ್ನು ನಡೆಸಲಿದ್ದಾರೆ. ಸ್ಥಳ: ಕಂಠೀರವ ಸ್ಟೇಡಿಯಂ. ಕೆಳಕಂಡ ನೀತಿ ನಿಯಮಗಳನ್ನು ಗಮನಿಸಿ:

ಈ ಸ್ಪರ್ಧೆ ಕನಕಪುರದ ರಸ್ತೆಯಲ್ಲಿ (ಕಾರ್ಪೊರೇಷನ್ ಲಿಮಿಟ್ ಒಳಗಡೆ ) ವಾಸಿಸುವ ಮಹಿಳೆಯರಿಗೆ ಮಾತ್ರ ಮೀಸಲು (ಈ ಬಾರಿ ಸ್ಪರ್ಧೆ ಯಶಸ್ವಿಯಾದರೆ ಮುಂದಿನ ವರುಷ ಬುಲ್ ಟೆಂಪಲ್ ರಸ್ತೆಯನ್ನೂ ಸೇರಿಸಲಾಗುತ್ತೆ)

ವಯಸ್ಸು ಮಿತಿ: 30 ರಿಂದ 45 ವರುಷಗಳು (ಮದುವೆಯಾದ ಮಹಿಳೆಯರೂ ಸೇರಬಹುದು) ಈ ಬಗ್ಗೆ ಸುಳ್ಳು ಹೇಳಬೇಡಿ ಅಷ್ಟೆ.

ಎತ್ತರ, ಮೈಕಟ್ಟು, ತೂಕ, ಬಣ್ಣ ಇತ್ಯಾದಿ: ದೇವರು ಕೊಟ್ಟಹಾಗೆ ಇರಲಿ, ಸಧ್ಯ ನೀವೇನೂ ಬದಲಾಯಿಸಿಕೊಳ್ಳಲು ಹೋಗಬೇಡಿ. ಸ್ಪಧೆಯನ್ನು ಮೂರು ಭಾಗಗಳಾಗಿ ಏರ್ಪಡಿಸಲಾಗಿದೆ.

**1. ಮಿಸ್‌ರೋಡ್ Wear (ಸಾರಿ, ಮಿಸ್ ಬೀಚ್‌ವೇರ್ ಅಲ್ಲ!)**

ಪ್ರಾಯೋಜಕರು: ಅಚ್ಚನ್ ಸ್ಯಾರಿ ಹೌಸ್, ಆರ್ಮುಗಂ ಪ್ಲಾಸ್ಟಿಕ್ ಮಾರ್ಟ್, ಬೆಂಗಳೂರು ಆಟೋ ಗ್ರಾಹಕರ ಸಂಘ ಮತ್ತು ಸೇಲಂ ಕಿಡ್ಸ್ ಮಾರ್ಟ್.

ಈ ಸ್ಪರ್ಧೆಯಲ್ಲಿ ಭಾಗವಹಿಸುವ ಮಹಿಳೆಯರು ಒಂದು ಸೊಂಟದಲ್ಲಿ ಮೂರು ವರುಷದ ಮಗು ಒಂದನ್ನು ಎತ್ತಿಕೊಂಡು (ಮಗುವನ್ನು ಪ್ರಾಯೋಜಿಕರು ಒದಗಿಸುತ್ತಾರೆ), ಇನ್ನೊಂದು ಕೈನಲ್ಲಿ ತರಕಾರಿ ಮನೇ ಸಾಮಾನು ತುಂಬಿರೋ ಒಂದು ಪ್ಲಾಸ್ಟಿಕ್ ಬಕೆಟ್ ಹಿಡಿದುಕೊಂಡು, ಅಚ್ಚನ್ ಸ್ಯಾರಿಹೌಸಿನ ಕಲಾಪತ್ತಿನ ಸೀರೆ ಉಟ್ಕೊಂಡು, ಆಟೋ! ಆಟೋ!! ಅಂತ ಕೂಗಿಕೊಳ್ಳುತ್ತಾ ಅರ್ಧ ಕಿಲೋಮೀಟರ್ ಓಡಬೇಕು. ಯಾರು ಮುಂದೆ ಗುರಿ ಮುಟ್ಟುತ್ತಾರೋ ಅವರೇ ಮಿಸ್ ರೋಡ್‌ವೇರ್. (ಈ ಓಟದ ಟೀವೀ ಹಕ್ಕುಗಳು ಪ್ರಾಯೋಜಿಕರದ್ದಾಗಿರುತ್ತವೆ)

**2. ಮಿಸ್ ಕಿಚನ್‌ವೇರ್**

ಪ್ರಾಯೋಜಕರು: ಹೆವನ್ಲಿ ಹೋಮ್ ಅಪ್ಲಿಮೆನ್ಸಸ್, ''ಭಾಗ್ಯದೇವರು'' ಪ್ರಾವಿಷನ್ ಮಾರ್ಟ್, ಮಂಗಳೂರು ಸಂಡಿಗೆ ಸ್ಟೋರ್ಸ್.

(ಈ ಭಾಗದ ಸ್ಪರ್ಧೆಯಲ್ಲಿ ಭಾಗವಹಿಸುವವರು ಅವಶ್ಯವುಳ್ಳ ಉಪಕರಣಗಳನ್ನು ಹಾಗೂ ಅಡಿಗೆಸಾಮಾನುಗಳನ್ನು ಪ್ರಾಯೋಜಕರ ಅಂಗಡಿಗಳಿಂದಲೇ ಖಡ್ಡಾಯವಾಗಿ ಕೊಳ್ಳಬೇಕು)

ಈ ಕೆಳಕಂಡ ತಿಂಡಿಗಳನ್ನು ಯಾರು ಬೇಗ ಮಾಡಿ ಮುಗಿಸುತ್ತಾರೋ ಅವರೇ ಮಿಸ್ ಕಿಚನ್ ವೇರ್!

- ಹದಿನೈದು ಅರಳು ಸಂಡಿಗೆ, ಐವತ್ತು ಹಲಸಿನ ಹಪ್ಪಳ.

- ಒಂದು ಪ್ಲೇಟ್ ಶ್ಯಾವಿಗೆ ಭಾತ್, ಒಂದು ಪ್ಲೇಟ್ 'ಭಾಗ್ಯದೇವರು' ಬ್ರಾಂಡ್ ಮಿಕ್ಸಡ್ ವೆಜಿಟೆಬಲ್ ಪಲಾವ್, ಎರಡು ಲೋಟ 'ಭಾಗ್ಯದೇವರು' ಬ್ರಾಂಡ್ ಗಸಗಸೆ ಪಾಯಸ.

- ''ಹೆವನ್ಲಿ'' ಬ್ರಾಂಡ್ ನಾನ್‌ಸ್ಟಿಕ್ ತವದಲ್ಲಿ ಒಂದು ಪ್ಲೇಟ್ ಸೆಟ್‌ದೋಸೆ, ಗ್ಯಾಸ್ ಸಿಲಿಂಡರ್ ಹಾಗೂ ಸ್ಟೌವ್‌ಗಳನ್ನು ಮಾತ್ರ ಸ್ಪರ್ಧಿಗಳೇ ತರಬೇಕು. ಇದಕ್ಕಾಗಿ ಸ್ಪರ್ಧಿಸುವವರ ಗಂಡಂದಿರಿಗಾಗಿ ಅಥವಾ ಆಳುಗಳಿಗಾಗಿ ವಿಶೇಷ ಎಂಟ್ರಿ ಪಾಸುಗಳನ್ನು ಕೊಡಲಾಗುತ್ತೆ, ಸ್ಪರ್ಧೆ ನಡೆಯುತ್ತಿರುವಾಗ ಸಧ್ಯ ಯಾರೂ ಮಾತನಾಡಬೇಡಿ. ಟೀವೀ ಕಾಮೆಂಟರಿಯನ್ನ ಪ್ರಾಯೋಜಕರೇ ಕೊಡುತ್ತಾರೆ. ತೀರ್ಪುಗಾರರು ನೀಡುವ ನ್ಯಾಯವನ್ನು ಯಾವುದೇ ರೀತಿಯಲ್ಲಿ (ನಿಮ್ಮ ಗಂಡಂದಿರು ಎಷ್ಟೇ ದೊಡ್ಡಮನುಷ್ಯರಾಗಿದ್ದರೂ ಸರಿ) ಬದಲಾಯಿಸಲು ಸಾಧ್ಯವಿಲ್ಲ. ಇದರ ಬಗ್ಗೆ ಸುಮ್ಮನೆ ಜಗಳ ಆಡಬೇಡಿ.

**3. ಮಿಸ್ ''ಕನಕ ಸುಂದರಿ''**

ಇದು ಬಹು ಮುಖ್ಯವಾದ ಹಾಗೂ ಅಂತಿಮ ಸ್ಪರ್ಧೆ. ಮಿಸ್ ರೋಡ್‌ವೇರ್ ಹಾಗೂ ಮಿಸ್ ಕಿಚನ್‌ವೇರ್ ಸ್ಪರ್ಧೆಗಳಲ್ಲಿ ಮೊದಲನೇ ಐದು ಸ್ಥಾನಗಳನ್ನು ಗಿಟ್ಟಿಸಿಕೊಂಡ ಮಹಿಳಾ ಅಭ್ಯರ್ಥಿಗಳಿಗೆ ಮಾತ್ರ ಈ ಸ್ಪರ್ಧೆ ಮೀಸಲು. ಈ ಅಮೋಘ ಕಾರ್ಯಕ್ರಮಕ್ಕೆಂದೇ ಕಂಠೀರವ ಸ್ಟೇಡಿಯಂನಲ್ಲಿ ಒಂದು ವಿಶೇಷ ಸಭಾಂಗಣವನ್ನು ಜೋಡಿಸಲಾಗಿದೆ. ಇದರ ಹಿನ್ನೆಲೆಯಲ್ಲಿ ಕನಕಪುರದ ರಸ್ತೆಯ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಪರಿಚಯವನ್ನು ಕೊಡಲಾಗುತ್ತೆ.

ಬನಶಂಕರಿ ದೇವಸ್ಥಾನದ ಮುಂಭಾಗವನ್ನು ''ಸೌಂಡ್ ಎಂಡ್ ಲೈಟ್ ಶೋ'' ನಲ್ಲಿ ಪ್ರೇಕ್ಷಕರಿಗೆ ತೋರಿಸಿ, ಕನಕಪುರದ ಆ ಭಾಗ ರಸ್ತೆಯಲ್ಲಿ ನಡೆಯುವ ದಿನ ನಿತ್ಯ ಕಾರ್ಯಕಲಾಪಗಳನ್ನ ಕಂಪ್ಯೂಟರ್ ಗ್ರಾಫಿಕ್ಸ್ ಸಹಾಯದಿಂದ ದೊಡ್ಡ ಪರದೆಯ ಮೇಲೆ ನೂರಾರು ಜನ ನೋಡುವ ಹಾಗೆ ಬಿತ್ತರಿಸುತ್ತೇವೆ. ಈ ಐದು ನಿಮಿಷಗಳ ರಸವತ್ತಾದ ಕಾರ್ಯಕ್ರಮದಲ್ಲಿ ರೋಡ್‌ಬ್ಲಾಕ್, BTS - ಆಟೋ ಆಕ್ಸಿಡೆಂಟು, ಎಮ್ಮೆ, ಹಸು, ಜನ, ಏಣಿಗಳು ಹಾಗೂ ಬೆತ್ತದ ಬುಟ್ಟಿಯ ಮಾರಾಟ, ಚೈನ್ ಅಪಹರಣ ಹಾಗೂ ನೀರಿನ ಟ್ಯಾಂಕರ್ ಇವೆಲ್ಲಾ ಕಣ್ಮುಂದೆ ಹಾದು ಹೋಗುತ್ವೆ. ಚಿಕ್ಕದಾಗಿ ಹೇಳಬೇಕೆಂದರೆ, ಕನಕಪುರ ರಸ್ತೆಯ ''ಸಂಸ್ಕೃತಿ'' ಈ ಐದು ನಿಮಿಷಗಳಲ್ಲಿ ಪ್ರೇಕ್ಷಕರಿಗೆ ಮನದಟ್ಟಾಗುತ್ತೆ.

ನಂತರ, ಕನಕಪುರದ ಮಿತ್ರ ಮಂಡಳಿಯವರಿಂದ ಮುಕಾಬುಲಾ ಓಲೈಲಾ,

ಓಲ್ಡೈಲಾ ನೃತ್ಯ. ಇದು ಮುಗಿಯುತ್ತಲೇ ಹತ್ತು ಜನ ಸ್ಪರ್ಧಿಗಳೂ ವೇದಿಕೆಯ ಮೇಲೆ ಬಂದು ನಿಲ್ಲಬೇಕು. (ಈ ಸಮಯದಲ್ಲಿ ಗಂಡಂದಿರು ಸುಮ್ಮನೆ ಕೂತಿರಬೇಕಾಗಿ ವಿನಂತಿ) ಪ್ರೇಕ್ಷಕರ ಮುಂಭಾಗದಲ್ಲಿ VIP ಲೈನಿನಲ್ಲಿ ಕುಳಿತಿರುವ ತೀರ್ಪುಗಾರರು ನಂತರ ಒಬ್ಬೊಬ್ಬ ಸ್ಪರ್ಧಿಗೂ ಎರಡೆರಡು ಪ್ರಶ್ನೆಗಳನ್ನ ಹಾಕುತ್ತಾರೆ. (ಅಂದಹಾಗೆ ತೀರ್ಪುಗಾರರ ಪಟ್ಟಿ ಇನ್ನೂ ರೆಡಿಯಿಲ್ಲ. ನಾಡಿನಾದ್ಯಂತ ವಿವಿಧ ರಂಗಗಳಲ್ಲಿ ಹೆಸರುವಾಸಿಯಾದವರು ತೀರ್ಪುಗಾರರಾಗಿರುತ್ತಾರೆ ಎಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ) ಉದಾಹರಣೆಗೆ ಪ್ರಶ್ನೆಗಳು ಹೀಗಿರಬಹುದು:

''ಕನಕಪುರದ ರಸ್ತೆಯಲ್ಲಿ ನೀವೊಬ್ಬರೇ ಶ್ರೀಮಂತರಾಗಿದ್ದರೆ, ಹಣವನ್ನು ಹೇಗೆ ಉಪಯೋಗಿಸುತ್ತೀರಿ''

''ಆತ್ಮ ಸೌಂದರ್ಯಕ್ಕೂ, ಟೀವೀನಲ್ಲಿ ಕಾಣುವ ಹೊರ ಸೌಂದರ್ಯಕ್ಕೂ ಏನಾದರೂ ಸಂಬಂಧ ಇದೆಯೆ?''

''ಕನಕಪುರದ ರಸ್ತೆಯಲ್ಲಿ ಪಬ್‌ಗಳೂ ಪಾರ್ಲರ್‌ಗಳೂ ದಿನನಿತ್ಯ ಹುಟ್ಟುತ್ತಿವೆ. ನಿಮ್ಮ ಪ್ರತಿಕ್ರಿಯೆ?''

''ಹೊರ ದೇಶಗಳಲ್ಲಿ ಇರೋ ಬಡ ಮಕ್ಕಳ ಸ್ಥಿತಿಗತಿಗಳನ್ನು ಸುಧಾರಿಸೋಕ್ಕೆ ನಿಮ್ಮದೇನಾದರೂ ಸಲಹೆ ಇದೆಯೆ? ನಮ್ಮ ದೇಶದ ಮಕ್ಕಳನ್ನು ಬಿಟ್ಟುಬಿಡಿ. ಏನೂ ಮಾಡೋಕ್ಕೆ ಆಗೋಲ್ಲ.''

''ನೀವೂ ನಿಮ್ಮ ಯಜಮಾನರು ಕನಕಪುರ ರಸ್ತೆಯಲ್ಲಿ ಕೈ-ಕೈ ಹಿಡಿದುಕೊಂಡು ವಾಕಿಂಗ್ ಮಾಡುವ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು? ಇದು ನಿಮಗೆ ಇಷ್ಟವೆ? ಅಥವಾ ಆ ರಸ್ತೆಯಲ್ಲಿ ಅದು ಸಾಧ್ಯವೆ?''

ಇಂತಹ ಪ್ರಶ್ನೆಗಳಿಗೆ ತೀಕ್ಷ್ಣವಾಗಿ ಹಾಗೂ ರಸವತ್ತಾಗಿ ಉತ್ತರಿಸಿದವರಿಗೆ ''ಕನಕ ಸುಂದರಿ'' ಪಟ್ಟ ಕಟ್ಟಲಾಗುತ್ತೆ. ಇದರಿಂದ ಅವರಿಗೆ ಲಭ್ಯವಾಗುವ ಬಹುಮಾನಗಳು: ಸೀರೆ, ಪ್ಲಾಸ್ಟಿಕ್ ಬಕೆಟ್‌ಗಳು; ಅಡುಗೆ ಉಪಕರಣಗಳು; ಪಲಾವ್ ಮಿಕ್ಸ್ ಇತ್ಯಾದಿ ಅಡುಗೆ ಪದಾರ್ಥಗಳು ಮತ್ತು ನಗದು ಹಣ! ಫೋಟೋ ಹಾಗೂ ವಿಡಿಯೋಗಳ ಸುರಿಮಳೆ! ಒಂದು ವರ್ಷ ಕನ್ನಡ ನಾಡಿನಾದ್ಯಂತ ಪ್ರಾಯೋಜಕರ ಖರ್ಚಿನಲ್ಲಿ ಭೇಟಿಗಳು, ಉಪನ್ಯಾಸಗಳು, ಊಟ ತಿಂಡಿಗಳು! (ಆದರೆ ಟೀವೀ ಹಕ್ಕುಗಳೆಲ್ಲಾ ಪ್ರಾಯೋಜಕರದ್ದೇ)

ಈ ಸ್ಪರ್ಧೆಯಲ್ಲಿ ಉತ್ಪನ್ನವಾಗುವ ಲಾಭದಲ್ಲಿ ಶೇಕಡಾ ಹತ್ತರಷ್ಟು ಹಣವನ್ನು ಕನಕಪುರದ ರಸ್ತೆಯಲ್ಲಿ ಕಟ್ಟಬೇಕೆಂದಿರುವ ಗೋಶಾಲೆಗೆ ದಾನಮಾಡಲಾಗುತ್ತೆ. ಕನಕಪುರದ ರಸ್ತೆಯ ಮಹಿಳೆಯರೇ, ಬನ್ನಿ, ''ಕನಕ ಸುಂದರಿ'' ಆಗಿರಿ! ಸದಾವಕಾಶವನ್ನು ಕಳೆಯದಿರಿ!!

**ಈ ಜಾಹೀರಾತನ್ನು ಬಿಡುಗಡೆ ಮಾಡಿದವರು:**

**ಆರ್ಮುಗಂ ಅಚ್ಚನ್ ಕಾರ್ಪೊರೇಷನ್ (ಸೀರೆ, ಪ್ಲಾಸ್ಟಿಕ್, ದಿನಸಿ ಹೋಲ್‌ಸೇಲ್), ಬೆಂಗಳೂರು.**

# ನಿದ್ರೆಯ ಮಹತ್ವ

**ಸೂರಿ ಹಾರ್ದಳ್ಳಿ**

ಪ್ರಧಾನಮಂತ್ರಿಗಳು ಗಹನವಾಗಿ ಯೋಚಿಸುವಾಗ, ದೇಶದ ಅನೇಕಾನೇಕ ಸಮಸ್ಯೆಗಳ ಬಗ್ಗೆ ಚಿಂತಿಸುತ್ತಿರುವಾಗ ಪತ್ರಿಕೆಗಳು ಅವರು ನಿದ್ರೆ ಮಾಡುತ್ತಿದ್ದಾರೆ ಎಂದು ವರದಿ ಮಾಡುತ್ತವೆ. ಅವರ ಗಂಭೀರವಾಗಿ ಯೋಚಿಸುವ ಕ್ರಮವೇ ಹಾಗೆ ಎಂಬುದು ಈ ವರದಿಗಾರರಿಗೆ ಗೊತ್ತಿಲ್ಲ. ತಾಪತ್ರಯಗಳು ಹೆಚ್ಚುತ್ತಾ ಹೆಚ್ಚುತ್ತಾ ಹೆಚ್ಚು ಹೆಚ್ಚು ಕಾಲ ನಿದ್ರಾ ಭಂಗಿಯಲ್ಲಿ ಇರಬೇಕಾದುದು ಅನಿವಾರ್ಯ. ಇದು ಅವರ ಸಮಸ್ಯೆ. ಕಳೆದ ವರ್ಷ ವಿಧಾನಸಭೆಯಲ್ಲಿ ಮಂತ್ರಿಯೊಬ್ಬರು ಚಿಂತಾರಹಿತರಾಗಿ ಗೊರಕೆ ಹೊಡೆಯುತ್ತಿರುವದರ ಬಗ್ಗೆ, ಹಾಗೆಂದು ಪತ್ರಿಕೆಗಳು ಕೊರೆದವು. ಇಷ್ಟೊಂದು ಉತ್ತಮ ಉತ್ತರ ಕೊಡಲು ಅವರಿಗೆ ಸಾಧ್ಯವಾಗಲಿಲ್ಲ ಎನ್ನಿ. ದೋಷಾರೋಪಣೆಯನ್ನು ಮಾಡಲಾಗಿತ್ತು.

ಇಲ್ಲಿ ನಾವು ಯೋಚಿಸಬೇಕಾದ ವಿಷಯವೆಂದರೆ ನಿದ್ರೆ ಏನು ಎಂಬುದು. ಬರೀ ಕಣ್ಣು ಮುಚ್ಚಿದರೆ ಮಾತ್ರವೋ, ಅಥವಾ ಎದುರಿಗೆ ಮೇಜಿನ ಮೇಲೆ ತಲೆ ಆನಿಸಿದರೆ ಮಾತ್ರವೋ, ಅಥವಾ ಗೊರಕೆ ಹೊಡೆದರೆ ಮಾತ್ರವೋ ಎಂಬುದು. ಚಿಂತೆ ಇಲ್ಲದವನಿಗೆ ಸಂತೆಯಲ್ಲಿಯೂ ನಿದ್ರೆ ಬರುತ್ತದೆ ಎಂದ ಹಾಗೆ, ಒಬ್ಬ ಜವಾಬ್ದಾರಿಯುತ ಮಂತ್ರಿ, ಅದು ಯಾರೇ ಆಗಿರಲಿ, ನಿದ್ರಿಸುತ್ತಿದ್ದಾರೆ ಎಂದರೆ ಅವರ ಮನಸ್ಸು ಸ್ವಸ್ಥವಾಗಿದೆ, ಅವರಲ್ಲಿ ಶಾಂತತೆ ನೆಲೆಸಿದೆ ಎಂದು. ಇದು ಸಂತೋಷಿಸಬೇಕಾದ ವಿಷಯವೇ ಅಲ್ಲವೆ?

ಆದರೆ ನನಗೆ? ಸೊಗಸಾದ ಹಾಸಿಗೆ, ಮೆತ್ತಗಿರುವ ತಲೆದಿಂಬು, ಹೊದೆಯಲು ಬೆಡ್‌ಶೀಟ್‌ಗಳು, ಇವೆಲ್ಲಾ ಇದ್ದರೂ ಕಣ್ಣುಹತ್ತುವುದಿಲ್ಲ. ನಿದ್ರಿಸಲು ಇಚ್ಛಿಸಿದಾಗೆಲ್ಲಾ ನನ್ನ ಮಸ್ತಿಷ್ಕದಲ್ಲಿ ಸಮಸ್ಯೆಗಳ ಮಹಾಪೂರವೇ ಹರಿದುಬರುತ್ತದೆ. ಮೊದಲು ನನ್ನ ಮನೆಯದು, ಅಂದರೆ, ನನ್ನ ಹೆಂಡತಿಯದು. ಬೆಳಿಗ್ಗೆ ಕಾಫಿಗೆ ಪುಡಿ ಜಾಸ್ತಿ ಹಾಕಿ, ಅದನ್ನು ಸರಿಮಾಡಲು ಮತ್ತೆ ನೀರು ಕಾಯಿಸಿ ಹಾಕಿ, ಅದಕ್ಕೆ ಮತ್ತೆ ಸಕ್ಕರೆ ಕಡಿಮೆಯಾದುದು, ಅದಕ್ಕಿಷ್ಟು ಸಕ್ಕರೆ ಸೇರಿಸಿದ ಮೇಲೆ ಕಲಗಚ್ಚಿನ ಹಾಗೆ ತುಂಬಾ ಆಗಿ, ಕೊನೆಗೆ ಕುಡಿಯಲಾಗದೇ ಚೆಲ್ಲಿದ್ದು..

ಹೀಗಾದರೆ ನಮ್ಮ ದೇಶ ಮುಂದುವರೆಯುವುದು ಹೇಗೆ? ಓ ಭಗವಂತಾ.. ನಮ್ಮ ಜನಗಳಿಗೆ ಬುದ್ಧಿಕೊಡು ಎಂದು ಪ್ರಾರ್ಥನೆ. ಎಲ್ಲಿಯೋ ಹಾರಿಹೋಯಿತು ನಿದ್ರೆ.

ಮತ್ತೆ ಬಲವಂತವಾಗಿ ಕಣ್ಣು ಮುಚ್ಚಿದರೆ ದೇಶದ, ಜಾಗತಿಕ ತೊಂದರೆಗಳು, ನೋವುಗಳು ಕಾಡಲು ತೊಡಗುತ್ತವೆ. ನಿದ್ರೆ ದೂರವೇ ದೂರ ಹಾರಿಹೋಗುತ್ತದೆ.

ಈ ನಿರಂತರ ಪರದಾಟದ ನಡುವೆ ಬದುಕಿನಲ್ಲಿ ಎಲ್ಲಕಿಂತ ಮುಖ್ಯವಾದುದು ನಿದ್ರೆ, ನಿದ್ರೆಯ ವಿನಃ ಇನ್ನೇನೂ ಬೇಕಿಲ್ಲ ಎಂದು ಮನಸ್ಸು ಚೀರಿಚೀರಿ ಹೇಳತೊಡಗಿತು.

ಆದುದರಿಂದಲೇ ನಿದ್ರೆಯ ಮಹತ್ವದ ಬಗ್ಗೆ ಗಾಢವಾಗಿ ಚಿಂತಿಸತೊಡಗಿದೆ.

ನಿದ್ರೆಯ ಬಗ್ಗೆ ಹಗುರವಾಗಿ ಮಾತನಾಡಬಾರದು. ಮನಸ್ಸಿನ, ದೇಹದ ಶಾಂತತೆಯ ಬಗ್ಗೆ ಬಹು ಅವಶ್ಯಕ. ನಿದ್ರಿಸಿದರೆ ಜಗತ್ತಿನಲ್ಲಿ ಭಾಷೆಯ, ಗಡಿಯ, ಕಾವೇರಿಯ, ಧರ್ಮದ, ಜಾತಿಯ, ಮುಂತಾದ ಗಲಭೆಗಳು ಘಟಿಸುವುದಿಲ್ಲ. ಎಲ್ಲೆಡೆ ನಿರ್ಮಲ ವಾತಾವರಣವಿರುತ್ತದೆ. ಬೋಫೋರ್ಸ್, ಹವಾಲಾ, ಫಾಡರ್ಸ್ಸ್ಕಾಮ್, ಕಂಪ್ಯೂಟರ್ ತರಲೆಗಳು, ಇವೆಲ್ಲಾ ನಡೆಯುವುದೇ ಇಲ್ಲ. ಯಾಕೆಂದರೆ ಇದರ ಬಗ್ಗೆ ಯೋಚಿಸಲು ಸಾಧ್ಯವೇ ಆಗುತ್ತಿರಲಿಲ್ಲ. ಹಿಟ್ಲರ್ ನಿದ್ರಿಸುತ್ತಲೇ ಇದ್ದಿದ್ದರೆ ಎರಡನೆಯ ಮಹಾಯುದ್ಧವೇ ನಡಯುತ್ತಿರಲಿಲ್ಲ, ಜಪಾನಿನ ಮೇಲೆ ಬಾಂಬು ಬೀಳುತ್ತಿರಲಿಲ್ಲ, ಲಕ್ಷಾಂತರ ಜನರ ಪ್ರಾಣಹಾನಿಯಾಗುತ್ತಿರಲಿಲ್ಲ ಎಂದು ಯೋಚಿಸಿದೆ.

ಖುಷಿಯಾಯಿತು. ಅರೆ, ಇಲ್ಲಿಯ ತನಕ ಯಾರೂ ಯಾಕೆ ಹೀಗೆ ಯೋಚಿಸಿರಲಿಲ್ಲವಲ್ಲಾ ಎನಿಸಿತು.

ಮಲಗಿದ್ದಾಗ, ಕ್ಷಮಿಸಿ, ನಿದ್ರಿಸಿದ್ದಾಗ ಹಸಿವಾಗುವುದಿಲ್ಲ, ಅಥವಾ ಹಸಿದಿರುವಾಗ ನಿದ್ರೆ ಬರುವುದಿಲ್ಲ ಎಂದರೆ ನನ್ನದೇನೂ ಅಭ್ಯಂತರವಿಲ್ಲ, ಹಾಗಾಗಿ ಆಹಾರದ ಅಭಾವ ಆಗುವುದಿಲ್ಲ. ಆಹಾರದ ಕೊರತೆ ಉಂಟಾಗದಿದ್ದಾಗ ಕೊಲೆ-ಸುಲಿಗೆಗಳು, ಮಾಮೂಲಿನ ಘಟನೆಯಾದ ಬಾಂಬ್ ಸ್ಫೋಟ, ಇವೆಲ್ಲಾ ನಡೆಯುವುದೇ ಇಲ್ಲ. ಹೌದಲ್ಲವೇ?

ಇದನ್ನೆಲ್ಲಾ ಪ್ರಧಾನಮಂತ್ರಿಗಳಿಗೆ ತಿಳಿಸಿ ಹೇಳಿದರೆ ನನಗೆ ಪೆದ್ದಶ್ರೀಯೋ, ಭಾರತ ಮೂರ್ಖ ಪ್ರಶಸ್ತಿಯೋ ದೊರಕಬಹುದು ಎನಿಸಿತು. ಮೊದಲು ಈ ವಿಷಯವನ್ನು ನನ್ನ ಬಿಟರ್ ಹಾಫ್, ಅರ್ಥಾತ್ ಬೆಟರ್ ಹಾಫ್ ಅಂದರೆ ಅರ್ಧ ಅಂಗಿಣಿ, ಇವಳಿಗೆ ಹೇಳಿದೆ.

ಅವಳು ನನ್ನತ್ತ ಮಾಮೂಲಿನ ಭಂಗಿಯಲ್ಲಿ ನೋಡಿದಳು. ಕಳೆದ ಹತ್ತು ವರ್ಷಗಳಿಂದ ನನ್ನ ಜೊತೆ ಇದ್ದ ಅವಳು ತೋರಿಸುವ ಮುಖಭಾವವು ಹೊಗಳಿಕೆ, ತೆಗಳಿಕೆ, ಅಯ್ಯೋಪಾಪ ಎನ್ನುವ ನೋಟ, ಮೆಚ್ಚಿಗೆ, ಪ್ರೀತಿ, ಇವೆಲ್ಲವುಗಳ ಕಲಸು ಮೇಲೋಗರವಾಗಿತ್ತು. ಇವಳ ಪ್ರತಿಕ್ರಿಯೆಗೆ ಕಾಯುವ ಬದಲು ಸೀದಾ ಪ್ರಧಾನಮಂತ್ರಿಗಳನ್ನೇ ಕಂಡರೆ ಹೇಗೆ ಅಂದುಕೊಂಡೆ.

ಮಂತ್ರಿಗಳು ಮಲಗಿದ್ದರು, ಕ್ಷಮಿಸಿ, ಯೋಚಿಸುತ್ತಿದ್ದರು. ತುಂಬಾ ಹೊತ್ತು ಕಾದು ಕೊನೆಗೂ ಅವರನ್ನು ಕಂಡು ನನ್ನ ತಲೆಗೆ ಬಂದ ವಿಷಯವನ್ನು ಅರುಹಿದೆ. 'ಅದನ್ನೇ ಕಣ್ರೀ ಮಣ್ಣಿನ ಮಗನಾದ ನಾನು ಈ ತನಕ ಯೋಚಿಸುತ್ತಿದ್ದುದು. ಆ ವೆಂಕಟಗಿರಿ ಗೌಡ ಬರೀ ನಿದ್ರೆ ಮಾಡುತ್ತಲೇ ಇದ್ದಿದ್ದರೆ ಆ ಪುಸ್ತಕಗಳನ್ನು ಬರೆಯುತ್ತಿರಲಿಲ್ಲ, ನನ್ನ ನಿದ್ರೆ, ಅಲ್ಲಲ್ಲ, ನನ್ನ ಯೋಚನೆಯನ್ನು ಭಂಗಮಾಡುತ್ತಿರಲಿಲ್ಲ' ಎಂದರು. ಹೋ ಎಂದು ಸಂತೋಷದಿಂದ ಚೀರಿದೆ. ಎಚ್ಚರವಾಯಿತು. ಎದುರಲ್ಲಿ ಯಾರೂ ಇರಲಿಲ್ಲ.

# ನಿಯರ್ ಮಿಸ್

- ಆರತಿ



ಭೇಟಿಯಾದೆವು ನಾನು ನೀನು
ಅಡ್ಡ ರಸ್ತೆಯೆ ಅಂತರ
ಭೇಟಿ ಎಂದೆನೆ, ಇಲ್ಲ, ಇಲ್ಲವು
ತಪ್ಪಿದುದು ಗಂಡಾಂತರ

ಓವರ್ ಟೇಕುತಿದ್ದೆ ನೀನು
ಹಾಲ್ಟು ಬೋರ್ಡಿನ ಹತ್ತಿರ
ವೇಗದಿಂದಲಿ zoom ಉತಿದ್ದೆನಾ
ಕಾಲೇಜ್ ಸೇರುವ ಆತುರ

ರೀಚಿದೆಯ ನೀ ಬ್ರೇಕು ಪೆಡಲಿಗೆ
ಭೇಟಿ ಮುಂಚಿನ ಆ ಕ್ಷಣ
ಅಥವಾ ಒಪ್ಪಿಸಿ ವಿಧಿಗೆ ಜೀವವ
ನೆನೆಯುತಿದ್ದೆಯ ದೇವನ

ಒಟ್ಟಿನಲಿ ವಿಧಿ ಬಯಕೆಯಂತೆಯೆ
ಬದುಕಿದೆವು ನಾವಿಬ್ಬರೂ
ನಡೆಸು ವಾಹನ ಕೇರಿನಿಂದಲಿ
ಹೋಗಲಿ ಇನ್ನಾದರೂ

# ಆಧುನಿಕ ಸಂಸ್ಕೃತಿಗಳು

**- ಶಂಸ**

ನಾನೊಬ್ಬ ಅಸಂಶೋಧಕ; ನೈಲ್ ನದೀ ಕಣಿವೆ, ಸುಮೇರಿಯನ್, ಹರಪ್ಪ, ಮೊಹೆಂಜುದಾರೊ ಮೊದಲಾದ ಪ್ರಾಚೀನ ಸಂಸ್ಕೃತಿಗಳನ್ನು ಕುರಿತು ವಿದ್ವನ್ ಲೇಖನಗಳನ್ನು ಸಲೀಸಾಗಿ ಬರೆದೆಸೆಯುವ ತಾಖತ್ತು ನನಗಿಲ್ಲ. ಕೇವಲ ನಿಯತಕಾಲಿಕಗಳಿಗಾಗಿ ಆಗಾಗ ಏನಾದರೂ ಗೀಚುವ ಚಿಲ್ಲರೆ ಬರಹಗಾರನಾದ ನಾನೀಗ ಬರೆಯತೊಡಗಿರುವುದು ಕೆಲವು ಆಧುನಿಕ ಸಂಸ್ಕೃತಿಗಳ ಬಗ್ಗೆ, ನಡು ವಯಸ್ಸು ದಾಟುತ್ತಿರುವ, ಸಾಂಪ್ರಾಯಿಕ ಮನೋಭಾವದ ಜನರಿಗೆ ಆಶ್ಚರ್ಯ - ದಿಗ್ಭ್ರಮೆಗಳನ್ನು ಉಂಟುಮಾಡುವ ಹಾಗೂ ಬಣ್ಣ ಬದಲಾಯಿಸುತ್ತ ಮುಂದುವರಿಯುವ ಕೆಲವು ಹೊಸ ಸಂಸ್ಕೃತಿಗಳ ಬಗ್ಗೆ.

ಮೊದಲು ಊಟದಿಂದಲೇ ಪ್ರಾರಂಭ ಮಾಡೋಣ. ಕೇವಲ ಒಂದೆರಡು ದಶಕಗಳ ಹಿಂದೆ. ಮದುವೆ ಮುಂಜಿ ಮನೆಯೊಕ್ಕಲು ಮುಂತಾದ ಸಮಾರಂಭಗಳಲ್ಲಿ ನಡೆಯುತ್ತಿದ್ದ ಸಮಾರಾಧನೆ ಅರ್ಥಾತ್ ಭೂರಿಭೋಜನವನ್ನೇ ನೆನಪಿಗೆ ತಂದುಕೊಳ್ಳೋಣ. ತೆಂಗಿನ ಹಸಿರು ಮಡಲುಗಳನ್ನು ಬಳಸಿ ಅಂಗಳದ ಉದ್ದಗಲಕ್ಕೂ ಹಾಕಿದ ವಿಶಾಲ ಚಪ್ಪರದ ಕೆಳಗೆ ಬಾಳೆ ಎಲೆಯ ಸಾಲುಗಳು; ಊಟಕ್ಕೆ ಕುಳಿತುಕೊಳ್ಳುವವರಿಗೆ ಮಣೆಗಳು (ಇವುಗಳ ಸಂಖ್ಯೆ ಸಾಕಷ್ಟಿಲ್ಲದಿರುವಾಗ ಮಾತ್ರ ಚಾಪೆಗಳು); ಒಬ್ಬರ ಹಿಂದೆ ಒಬ್ಬರಂತೆ, ಉಪ್ಪಿನ ಹರಳು, ಉಪ್ಪಿನಕಾಯಿ, ಕೋಸಂಬರಿ, ಸಾಸಿವೆ, ಪಲ್ಯ- ಹೀಗೆ ಆಹಾರ ಪದಾರ್ಥಗಳನ್ನು ಬಡಿಸುತ್ತ ಬರುವ ಹದಿಹರೆಯದ ಬ್ರಾಹ್ಮಣ ತರುಣರು (ಇವರ ಉಡುಗೆಯ ಸೊಗಸೇ ಬೇರೆ: ತೆರೆದೆದೆ, ಕಚ್ಚೆಹಾಕಿ ಉಟ್ಟ ಮಡಿ ಪಂಚೆ...). ತಯಾರಾದ ಪಾಕ ಪದಾರ್ಥಗಳಿಗೆಲ್ಲ ಬಾಳೆಯೆಲೆಯ ಮೇಲೆ ಅವುಗಳದೇ ನಿರ್ದಿಷ್ಟ ಸ್ಥಾನ ಬಡಿಸಲು ಶುರುವಾದೊಡನೆ ಯಾರೊಬ್ಬರೂ ಊಟಮಾಡಲು ತೊಡಗುವಂತಿಲ್ಲ. ತೊವ್ವೆ, ತಂಬುಳಿ, ಆಮೇಲೆ 'ಅಭಿಗಾರ' (ಅರ್ಥಾತ್ ತುಪ್ಪ) ಬಡಿಸಿದ ಅನಂತರ, 'ಹರಹರಾ ಮಹಾದೇವ;' ಎಂಬ ಘೋಷಣೆ- ತರುವಾಯವೇ ಬಾಳೆಯೆಲೆಗೆ ಕೈ ಹಚ್ಚಬೇಕು. ಬಡಿಸುವವರಿಂದ 'ಇನ್ನೂ ಸ್ವಲ್ಪ ಹಾಕಿಸಿಕೊಳ್ಳಿ' ಎಂಬ ಪ್ರೀತಿಯ ಒತ್ತಾಯ, ಅತಿಥೇಯನಿಂದ 'ನಿಧಾನವಾಗಿ ಊಟಮಾಡಿ' ಎಂಬ ಉಪಚಾರದ ಮಾತು, ಅಕ್ಕಪಕ್ಕದವರೊಡನೆ ಆತ್ಮೀಯ ಮಾತುಕಥೆ,- ಒಂದು ಗಂಟೆಗಿಂತಲೂ ಹೆಚ್ಚು ಕಾಲ ತೆಗೆದುಕೊಳ್ಳುವ ಭೋಜನ ಕಾರ್ಯಕ್ರಮ. ಅನಂತರ ತಾಂಬುಲ ಚರ್ವಣ. ಎಲ್ಲ ಪಂಕ್ತಿಗಳೂ ಮುಗಿದ ಮೇಲೆ 'ಪುನಃ ಪೂಜೆ,' ಅರ್ಥಾತ್ ಕಾಫಿ ಕುಡಿತ, ಅತಿಥಿಗಳ ನಿರ್ಗಮನವೇನಿದ್ದರೂ ನಾಲ್ಕುಗಂಟೆಯ ತರುವಾಯ.

ಆದರೆ ಈಗ? ಎಲ್ಲಿ ತಾನೇ ಕಾಣಬಹುದು ನಾವು ಈ ಕುಡಿ ಬಾಳೆಯೆಲೆ

ಭೋಜನ ಸಂಸ್ಕೃತಿಯನ್ನು? ಅನಂತರ ಬದಲಿಸಿದ ಮೇಜೂಟ ಸಂಸ್ಕೃತಿಯೂ ಬಹುಕಾಲ ಬಾಳುವ ಶಕ್ತಿ ತಾಳಲಿಲ್ಲ. ಈಗ ರಾರಾಜಿಸುತ್ತಿರುವುದೇನಿದ್ದರೂ 'ಬುಫೇ' ಸಂಸ್ಕೃತಿ. ವೈಯಕ್ತಿಕ ಸ್ನೇಹಪಿಶ್ವಾಸಗಳ: ಸಂಬಂಧವೇ ಇಲ್ಲದ, ಹುಸಿ ಪ್ರತಿಷ್ಠೆಯ, ಆಡಂಬರದ ಸಮಾರಾಧನ ಸಂಸ್ಕೃತಿ. ಸ್ಥಿರವಾದ ಕಂಬಗಳ ಮೇಲೆ ನಿಂತ ಹಸಿರು ಚಪ್ಪರದ ಬದಲಿಗೆ, ಗಾಳಿಗೆ ನೃತ್ಯಮಾಡುತ್ತ, ಈಗಲೋ, ಇನ್ನೊಂದು ಕ್ಷಣಕ್ಕೋ ಬಿದ್ದುಬಿಡುತ್ತೇನೆ ಎಂದು ಹೆದರಿಸುವ ಶಾಮಿಯಾನ ಅಥವಾ ಈ ವ್ಯವಸ್ಥೆಯೂ ಇಲ್ಲದ ಬಯಲು ಭೋಜನಶಾಲೆಯಾಗಿದ್ದರೂ ಅಚ್ಚರಿಯೇನಿಲ್ಲ. ಆರಾಮವಾಗಿ ಕುಳಿತುಕೊಳ್ಳುವುದಿರಲಿ, ನಿಂತುಕೊಳ್ಳಲೂ ಕೂಡ ಸ್ಥಳವಿಲ್ಲದ ನೂಕುನುಗ್ಗಲು. ಹಸಿದ ಹೊಟ್ಟೆಯನ್ನು ತೃಪ್ತಿಪಡಿಸಿಕೊಳ್ಳಬೇಕೋ- ಸಂತೆಯಲ್ಲಿ ಮುನ್ನುಗ್ಗಬೇಕು. ಪ್ಲೇಟು-ಚಮಚಗಳನ್ನು ಕೈಗೆತ್ತಿಕೊಳ್ಳಲು ಯುದ್ಧವನ್ನೇ ಮಾಡಬೇಕು. ಸಾಲುಮೇಜುಗಳ ಮೇಲೆ ತಣಿದು ಹೋದ ಸಾರು, ಪಲ್ಯ, ಪೂರಿ, ಬಾತ್‌ಗಳ ಪಾತ್ರೆಗಳು, ಸ್ವಸಹಾಯ ಸಿಸ್ಟಮ್ಮು. ಬೇಕಾದ ಪದಾರ್ಥಗಳನ್ನು ಪಡೆಯಲೂ ಸರದಿಯ ಸಾಲಿನಲ್ಲಿ ಸಾಗಬೇಕು. ಪ್ಲೇಟು ಹಿಡಿದುಕೊಂಡು ಮುನ್ನಡೆಯುವ (ಅಥವಾ ಹಿಂದೆ ಬರುವವರಿಂದ ತಳ್ಳಿಸಿಕೊಳ್ಳುವ) ಅತಿಥಿಗಳನ್ನು ಕಂಡವರಿಗೆ ಭಿಕ್ಷುಕರ ಸಾಲಿನ ನೆನಪು. ಯಾವುದೋ ಒಂದು ಮೂಲೆಯಲ್ಲಿ ನಿಂತು ಅವಸರವಸರದಿಂದ ತಿನ್ನಬೇಕು (ನುಂಗಬೇಕು!) ಹೆಚ್ಚು ಸಮಯ ಅಲ್ಲಿ ಉಳಿದರೆ, ಇತರರಿಗೆ ತೊಂದರೆ, ನೀರೆಲ್ಲಿದೆ? ಅಲ್ಲಿದೆ. ಆದರೆ ಲೋಟ? ತೊಳೆದ ಲೋಟಗಳು ಇನ್ನೂ ಬಂದಿಲ್ಲ. ಕಾಯುವುದೊಂದೇ ಉಳಿದ ದಾರಿ. ತಾಂಬೂಲದ ಹರಿವಾಣವೂ ಇರಬಹುದು. ಆದರೆ ಎಲ್ಲಿದೆಯೆಂದು ಹುಡುಕುವ ಪುರುಸೊತ್ತು ಯಾರಿಗಿದೆ? ಬಾಳೆಹಣ್ಣು? ಪತ್ತೆ ಮಾಡುವ ಹೊಣೆ ನಿಮಗೇ ಸೇರಿದ್ದು... ಶಾಮಿಯಾನದ ಎಲ್ಲೆಡೆ ಎಂಜಲು ಪ್ಲೇಟು, ಲೋಟಗಳು; ಬಾಳೆಹಣ್ಣಿನ ಸಿಪ್ಪೆಗಳು; (ಪೇಪರ್ ಪ್ಲೇಟ್‌ಗಳಾಗಿದ್ದರಂತೂ ಅವು ಅಂತರಿಕ್ಷದಲ್ಲಿ ಹಾರಾಡುತ್ತಾ ಇರುತ್ತವೆ.) ದಯವಿಟ್ಟು ಅಸಹ್ಯ ಪಡಬೇಡಿ.

ಈ ಸಂದರ್ಭದಲ್ಲಿ ಮೊನ್ನೆತಾನೇ ನಾನು ಹಾಜರಾಗಿ ಬಂದ, ನಮ್ಮೂರ ಅತಿಗಣ್ಯ ವ್ಯಕ್ತಿಗಳೊಬ್ಬರ ಮಗಳ ಮದುವೆಯ ಆರತಕ್ಷತೆಯ ನೆನಪಾಗುತ್ತದೆ ಅಲ್ಲಿ ಊಟದ ಏರ್ಪಾಟೊಂದೇ ಅಲ್ಲ. ಇತರ ತಿಂಡಿ ತೀರ್ಥಗಳ ಬಾದಾಮಿಹಾಲು, ಪಾನಿಪೂರಿ, ಸೆಟ್‌ದೋಸೆ ಇತ್ಯಾದಿ ವ್ಯವಸ್ಥೆಯೂ ಇತ್ತು. ಒಂದು ರೀತಿ, ದಸರ ವಸ್ತು ಪ್ರದರ್ಶನದ ಆವರಣದಲ್ಲಿ ಕಂಡುಬರುವಂಥ ಅಮೋಘ ದೃಶ್ಯ. ಆತ್ಮೀಯತೆಯ ಲವಲೇಶಸ್ಪರ್ಶವೂ ಇಲ್ಲ. ಉಡುಗೊರೆ ಕೊಟ್ಟ ತಪ್ಪಿಗಾಗಿ ಊಟಮಾಡಿ ಬರಬೇಕು; ಹೊಟ್ಟೆತುಂಬದೆ ಇದ್ದರೆ, ಮನೆಗೆ ಬಂದು ಮತ್ತೆ ಊಟಾ ಮಾಡಬೇಕು.

ಬುಫೆಯೇ ಭೋಜನ ಸಂಸ್ಕತಿಯ ಅಂತಿಮ ರೂಪವೆಂದು ಹೇಳುವಂತಿಲ್ಲ. ಆಯ್ದ ಕೆಲವು ಹೋಟೆಲುಗಳಲ್ಲಿನ ಊಟದ ಟಿಕೆಟ್‌ಗಳನ್ನು ಅತಿಥಿಗಳಿಗೆ ಹಂಚಿ

ಕಳುಹಿಸುವ ಟೋಕನ್ ಭೋಜನ ಸಂಸ್ಕೃತಿಯೂ ಉದಯಿಸಬಹುದು. ಸಂಸ್ಕೃತಿ ಬದಲಾದರೇನು? ಭೋಜನ ಪದ್ಧತಿ ಮುಂದುವರಿಯುವುದಂತೂ ಖಚಿತ. ಅದು ಮುಂದುವರಿಯಲೇ ಬೇಕು ಕೂಡ.

ವಿನಾಶದ ಅಂಚಿನತ್ತ ಸಾಗಿರುವ ಇನ್ನೊಂದು ಸಂಸ್ಕೃತಿಯನ್ನೂ ಇಲ್ಲಿ ಉಲ್ಲೇಖಿಸಬೇಕು. ಅದೇ ಅರಣ್ಯ ಅಥವಾ ಮರಮುಟ್ಟುಗಳ ಸಂಸ್ಕೃತಿ. ಮನೆಯ ಮಾಡು ಕಿಟಕಿ ಬಾಗಿಲುಗಳಿಗೂ ಕಪಾಟು ಮತ್ತು ಪೀಠೋಪಕರಣಗಳಿಗೂ ಮರವನ್ನು ಬಳಸುತ್ತಿದ್ದ ಕಾಲವೊಂದಿತ್ತು. ಈಗ? ಮರಗಳು ಸಿಕ್ಕರೆ ತಾನೇ ಅವುಗಳ ಬಳಕೆ? ಈಗ ಪ್ರವರ್ಧಮಾನಕ್ಕೆ ಬಂದಿರುವುದು, ಉಕ್ಕು, ಕಬ್ಬಿಣ, ಸಿಮೆಂಟ್‌ಗಳ ಕಾಂಕ್ರೀಟ್ ಸಂಸ್ಕೃತಿ. ಮನೆ ಕಟ್ಟುವವರಿಗೆ ಈಗ ಬಡಗಿಗಳ ಹಂಗೇ ಇಲ್ಲ. ಕಬ್ಬಿಣದ ಸಿದ್ಧ ಕಿಟಕಿಬಾಗಿಲುಗಳು; ಗಾಡ್ರೇಜ್ ಕಿರ್ಲೋಸ್ಕರ್ ಮುಂತಾದ ವಿಖ್ಯಾತ ಕಂಪೆನಿಗಳ ಕುರ್ಚಿಮೇಜು ಸ್ಟೂಲ್ ಮತ್ತು ಅಲ್ಮೆರಾಗಳು. ದಪ್ಪಗಾತ್ರದ ಮರದ ಕಂಬಳನ್ನೂ ಬಾಗಿಲು ಚೌಕಟ್ಟುಗಳ ಕುಸುರಿ ಕೆತ್ತನೆ ಕಲೆಗಳನ್ನೂ ಈಗ ಹಳ್ಳಿಗಳ ಹಳೆಯ ಮನೆಗಳಲ್ಲಷ್ಟೇ ಕಾಣಬಹುದು. ಅರಣ್ಯಗಳು ಈಗಿಲ್ಲ ಎನ್ನುವವರಾರು? ಅವು ಈಗಲೂ ಇವೆ. ಆದರೆ ಅರಣ್ಯಗಳಲ್ಲಿ ನಾವೀಗ ಕಾಣಬಹುದಾದದ್ದು ಮರಗಿಡ ಪೊದೆಬಳ್ಳಿಗಳನ್ನಲ್ಲ; ಪಶುಪಕ್ಷಿ ಕ್ರಿಮಿಕೀಟಗಳನ್ನಲ್ಲ. ಬದಲಾಗಿ ಬಹುಮಹಡಿಗಳ ಕಾಂಕ್ರೀಟ್ ಕಟ್ಟಡಗಳನ್ನು. ಪ್ರತಿಯೊಂದು ನಗರಗಳೂ ಈಗ ಒಂದೊಂದು ಕಾಂಕ್ರೀಟ್ ಗೊಂಡಾರಣ್ಯಗಳಾಗಿ ಬೆಳೆದುಬಿಟ್ಟಿವೆ; ಬೆಂಕಿಪೊಟ್ಟಣಗಳ ಸಂಕೀರ್ಣಗಳಾಗಿ, ಸಮುಚ್ಚಯಗಳಾಗಿಬಿಟ್ಟಿವೆ.

ಸತ್ತವರ ಶರೀರಗಳನ್ನು ಅಗ್ನಿದೇವನಿಗೆ ಅರ್ಪಿಸಲು ಕೂಡ ಈಗ ಮರದ ರೆಂಬೆ ಕೊಂಬೆಗಳನ್ನು ಬಳಸಿ ಚಿತೆ ತಯಾರಿಸಬೇಕಾಗಿಲ್ಲವಲ್ಲ? ಕೆ.ಇ.ಬಿ. ಕೃಪೆಯಿಂದ ಕರೆಂಟ್ ಇದ್ದರೆ, ಕಳೇಬರಗಳು ಕ್ಷಣಾರ್ಧದಲ್ಲಿ ಬೂದಿರಾಶಿಗಳಾಗುತ್ತವೆ.

ಶೈಕ್ಷಣಿಕ ಕ್ಷೇತ್ರದಲ್ಲಂತೂ ಹತ್ತು ಹಲವು ಹೊಸ ಸಂಸ್ಕೃತಿಗಳ ಮಹಾ ಪೂರವೇ ಹರಿದುಬಂದಿದೆ. ಕನ್ನಡ ಕಾಗುಣಿತಗಳನ್ನು ಕಲಿಸುವ ಮೊದಲೇ ಇಂಗ್ಲೀಷ್ ಭಾಷೆಯನ್ನೂ, ವ್ಯಾಕರಣವನ್ನೂ ಬೋಧಿಸತೊಡಗುವ ಕಾನ್ವೆಂಟ್ ಸಂಸ್ಕೃತಿ, ಎಲ್‌ಕೆಜಿ ಯುಕೆಜಿಗಳಿಂದ ಹಿಡಿದು ಮೆಡಿಕಲ್-ಇಂಜಿನಿಯರಿಂಗ್ ಶಿಕ್ಷಣದವರೆಗೆ ವ್ಯಾಪಿಸಿದ ಟ್ಯೂಷನ್ ಸಂಸ್ಕೃತಿ, ಸೊಪ್ಪು ತರಕಾರಿಗಳನ್ನು ಕೊಳ್ಳುವ ರೀತಿಯಲ್ಲಿಯೆ, ಟಿಸಿಎಚ್, ಬಿಇಡಿ, ಮೆಡಿಕಲ್, ಫಾರ್ಮಸಿ, ಇಂಜಿನಿಯರಿಂಗ್ ಸೀಟುಗಳನ್ನು ಖರೀದಿಸಬಹುದಾದ ಡೊನೇಷನ್ ಸಂಸ್ಕೃತಿ, ಚಿಕ್ಕಪುಟ್ಟ ಕಾರಣಗಳಿಗಾಗಿ-ಅಥವಾ ಚಳವಳಿ, ಮುಷ್ಕರ ನಡೆಸಬೇಕು ಎನ್ನುವ ಏಕೈಕ ಕಾರಣಕ್ಕಾಗಿಯೇ- ಧರಣಿ, ಮೆರವಣಿಗೆ, ಉಪವಾಸ ನಡೆಸುವ ಸ್ಟ್ರೈಕ್ ಸಂಸ್ಕೃತಿ, ಇತ್ಯಾದಿ, ಮುಷ್ಕರದ ಪರಾಕಾಷ್ಠ ಪರಿಸ್ಥಿತಿಯಲ್ಲಿ ಕಾಣಿಸಿಕೊಳ್ಳುತ್ತಿದ್ದ ಚಾಕು ಚೂರಿ ಸಂಸ್ಕೃತಿ ಇಂದು ಬಾಂಬ್ ಸಂಸ್ಕೃತಿಗೆ ದಾರಿಮಾಡಿಕೊಟ್ಟಿದೆ.

ಸ್ತ್ರೀಯರ ವೇಷಭೂಷಣ ಫ್ಯಾಷನ್‌ಗಳಲ್ಲಿ ಕೂಡ ಅತ್ಯಾಧುನಿಕ ಸಂಸ್ಕೃತಿಗಳು ವಿಜೃಂಭಿಸುತ್ತವೆ. ಸೀರೆ-ರವಿಕೆ ಸಂಸ್ಕೃತಿ ವೇಲ್-ಚೂಡೀದಾರ ಸಂಸ್ಕೃತಿಯಾಗಿ, ಅರಿಸಿನ-ಕುಂಕುಮ ಸಂಸ್ಕೃತಿ ಬಿಂದಿ-ಸ್ಟಿಕರ್ ಸಂಸ್ಕೃತಿಯಾಗಿ, ಜಡೆಮುಡಿಗಳ ಸಂಸ್ಕೃತಿ ಕ್ರಾಪ್-ಕಟ್ ಸಂಸ್ಕೃತಿಯಾಗಿ ಹೊಸ ರೂಪ ತಾಳಿವೆ. ಹೌದು, ಮಹಿಳೆಯರ ಕೇಶ ಶೃಂಗಾರಕ್ಕಾಗಿಯೇ ಪ್ರತ್ಯೇಕ ಸೆಲೂನುಗಳು-ಕ್ಷೌರದಂಗಡಿಗಳು ಬೀದಿ ಬೀದಿಗಳಲ್ಲಿಯೂ ತಲೆಯೆತ್ತಿವೆ. ಸಂಖ್ಯೆಯಲ್ಲಿ ಇವು ಪುರುಷ-ಸೆಲೂನುಗಳನ್ನೂ ಮೀರಿವೆ. ಇಂದು ಪುರುಷರು ಕ್ಷೌರಿಕರ ಹಂಗಿಲ್ಲದೆ ಬಾಳಬಹುದು. ಆದರೆ ಸ್ತ್ರೀಯರು? ಬ್ಯೂಟಿಪಾರ್ಲರ್‌ಗಳಿಗೆ ತಲೆಯೊಪ್ಪಿಸದೆ ಜೀವ ಹಿಡಿದುಕೊಂಡಿರಲು ಎಂದಾದರೂ ಸಾಧ್ಯವೆ?

ವಾರ್ತೆಗಳಿಗಾಗಿ ಪತ್ರಿಕೆಗಳನ್ನು ಜನರು ಓದುತ್ತಿದ್ದ ಒಂದಾನೊಂದು ಕಾಲವಿತ್ತಷ್ಟೆ? ಬರಬರುತ್ತಾ ಪತ್ರಿಕೆಗಳ ಸ್ಥಾನವನ್ನು ಕೆಲಮಟ್ಟಿಗೆ ಆಕ್ರಮಿಸಿದ ರೇಡಿಯೋಗಳು ಕೂಡ ಈಗ ಕಾರ್ನರ್ ಪಾಲಾಗಿದ್ದು ಅವುಗಳ ಬದಲಿಗೆ ಬಡವಬಲ್ಲಿದರೆನ್ನದೆ, ದೀನದಲಿತರೆನ್ನದೆ, ಬಹುಮಟ್ಟಿಗೆ ಎಲ್ಲರ ಮನೆಗಳಲ್ಲಿಯೂ ಮೂರ್ಖರ ಮಹಾ ಪೆಟ್ಟಿಗೆಗಳು ಅವತರಿಸಿವೆ. ಇವುಗಳ ಎದುರಿಗೆ ಕುಳಿತುಬಿಟ್ಟರೆ, ಸಮಯದ ಪ್ರಜ್ಞೆಯಿರುವುದಿಲ್ಲ; ಹಸುವೆ-ನೀರಡಿಕೆಗಳ ಭಯವಿರುವುದಿಲ್ಲ, ನಿದ್ರೆ-ಆಯಾಸಗಳ ಕಾಟವಿರುವುದಿಲ್ಲ. ವ್ಯಕ್ತಿ ಕೇವಲ (ದೂ.ದ) ಜ್ಞಾನ ಸುಖದಲ್ಲಿ ಮೈಮರೆತಿರುತ್ತಾನೆ. ಇಹಪರಜ್ಞಾನ ರಹಿತನಾಗಿ ಬ್ರಹ್ಮಾನಂದ ನಿರತನಾಗಿರುತ್ತಾನೆ.

ತೀರ ಇತ್ತೀಚೆಗೆ, ಮೇಲ್ಮಧ್ಯಮ ಹಾಗೂ ಶ್ರೀಮಂತ ವರ್ಗಗಳಿಗೆ ಸೇರಿದ ಜನರ ಮನೆಗಳಲ್ಲಿ ಕಂಪ್ಯೂಟರ್ ಸಂಸ್ಕೃತಿ ಪಸರಿಸತೊಡಗಿದೆ. ಸರ್ವಶಕರ ಸಮರ್ಥವಾದ ಈ ಕಂಪ್ಯೂಟರ್ ಯಂತ್ರದ ಜ್ಞಾಪಕಶಕ್ತಿ ಅತ್ಯದ್ಭುತವಮತೆ! ನೀವು ಯಾವುದೇ ಜ್ಞಾನ, ಮಾಹಿತಿಗಳನ್ನಾದರೂ ಕಂಪ್ಯೂಟರ್ ಯಂತ್ರಗಳಲ್ಲಿ ಅಳವಡಿಸಿ, ಅವುಗಳನ್ನು ಅಮರವಾಗಿ, ಚಿರಂತನವಾಗಿ ಇರಿಸಬಹುದಂತೆ. ನಿಮ್ಮ ಕೈಹಿಡಿದವಳಿಗೆ ಅಡುಗೆ ಬರುವುದಿಲ್ಲ ಎಂಬ ಚಿಂತೆಯೇ? ನಳಪಾಕ ಜ್ಞಾನವನ್ನು ಫೀಡ್ ಮಾಡಲಾದ ಕಂಪ್ಯೂಟರ್ ಲಭ್ಯವಿದೆ ಈಗ. ಒಲೆ ಮುಂದೆ ಕುಳಿತು ಕಂಪ್ಯೂಟರ್ ಮೇಲೆ ಕಣ್ಣಿಟ್ಟು ರುಚಿರುಚಿಯಾದ ಅಡುಗೆ ತಯಾರಿಸಲು ಈಗ ಸಾಧ್ಯ. ನಡುವೆ ಕರೆಂಟ್ ಹೋದರೆ ಅದು ಇನ್ನೊಂದು ಚೋದ್ಯ. ನೀವುಣಬೇಕು ಅರೆಬೆಂದ ಖಾದ್ಯ.

ಕೊನೆಯದಾಗಿ, ನಗರದ ಜ್ಞಾನಕ್ಷೇತ್ರ ವಿಶ್ವವಿದ್ಯಾನಿಲಯದ ಕಾಂಪಸ್‌ನಲ್ಲಿ ಈಚೆಗೆ ವಿಕಾಸಗೊಂಡ ಒಂದು ಮಾಡರ್ನ್ ಸಂಸ್ಕೃತಿಯ ಬಗ್ಗೆ ಎರಡು ಮಾತು ಹೇಳದಿದ್ದರೆ ಈ ಲಲಿತಪ್ರಬಂಧ ಅಪೂರ್ಣವೆನಿಸುತ್ತದೆ. ಇದೇ ಬೇಲಿ ಸಂಸ್ಕೃತಿ. ವಿಶ್ವವಿದ್ಯಾನಿಲಯದ ಪ್ರತಿಯೊಂದು ವಿಷಯ ವಿಭಾಗದ ಕಟ್ಟಡದ ಸುತ್ತಲೂ ಬೇಲಿ ಹಾಕಲಾಗಿದ್ದು, ಒಂದು ವಿಭಾಗದ ಜ್ಞಾನ ಇನ್ನಿತರ ವಿಭಾಗಗಳನ್ನು ಪ್ರವೇಶಿಸಬಾರದೆಂಬ ಉದ್ದೇಶವೇ ಇದಕ್ಕೆ ಕಾರಣವಾಗಿರಬೇಕು. ಈ ಬೇಲಿಗಳು

ವಿದ್ಯಾರ್ಥಿಗಳ, ಸಿಬ್ಬಂದಿಗಳ ಮತ್ತು ಒಂದಿಲ್ಲೊಂದು ಕಾರಣಕ್ಕಾಗಿ ವಿಶ್ವವಿದ್ಯಾನಿಲಯಕ್ಕೆ ಬರುವ ಸಾರ್ವಜನಿಕರ ಮುಕ್ತ ಸಂಚಾರಕ್ಕೆ ತಡೆಯೊಡ್ಡುತ್ತಿವೆ. ಕ್ರೀಡಾಂಗಣ, ಗ್ರಂಥಭಂಡಾರ, ಉಪಹಾರ ಗೃಹಗಳ ಸುತ್ತ ಮಾತ್ರವಲ್ಲ, ಗಾಂಧೀ ಕುಟೀರ, ಬಯಲು ರಂಗಮಂಟಪಗಳ ಸುತ್ತ ಕೂಡ ಸರಳು ಬೇಲಿಗಳೇ. ಕಟ್ಟಡಗಳಿಗಿಂತ ಬೇಲಿಗಳೇ ಎದ್ದು ಕಾಣುತ್ತಿವೆ, ಅವುಗಳಿಗೆ ಹಚ್ಚಿದ ವಿವಿಧ ಬಣ್ಣಗಳಿಂದಾಗಿ. ಈ ಬೇಲಿ ಸಂಸ್ಕೃತಿಗೆ ಮೂಲ ಪ್ರೇರಣೆ ಎಲ್ಲಿಂದ ಬಂತೋ ಯಾರು ಬಲ್ಲರು?

ಇನ್ನೂ ಕೆಲವು ಆಧುನಿಕ ಸಂಸ್ಕೃತಿಗಳ ಬಗ್ಗೆ ವಿವರಿಸಬಹುದು: ಶೌಚಗೃಹ ಭಿತ್ತಿಬರಹ ಸಂಸ್ಕೃತಿ, ಫುಟ್‌ಪಾತ್ ಮಾರ್ಕೆಟ್ ಸಂಸ್ಕೃತಿ, ನೈರ್ಮಲ್ಯರಹಿತ ದರ್ಶಿನೀ ಸಂಸ್ಕೃತಿ, ಕಾಲ್‌ಗರ್ಲ್ ಸಂಸ್ಕೃತಿ ಇತ್ಯಾದಿ ಇತ್ಯಾದಿ. ಇವುಗಳನ್ನು ಕುರಿತು ಬರೆಯುವುದು ಸಂಸ್ಕೃತಿಯಲ್ಲವೆನಿಸಿದ್ದರಿಂದ ಕೈಬಿಟ್ಟಿದ್ದೇನೆ ಅಷ್ಟೆ!

---

## ನಿಮ್ಮಮ್ಮಲ್ಲಿ

ಮಾನ್ಯ ಶ್ರೀ ಶಿವು

ಮಾರ್ಚ್‌ನ ಅಪರಂಜಿ ನಿಜಕ್ಕೂ ಮಾರ್ವೆಲಸ್! 'ಶೌಚಾಲಯ ಮಹಾತ್ಮೆ', 'ಮಂಗನ ಬೆನ್ನೇರಿ ಬಂತು' ಸರಣಿಯ ಪ್ರಾರಂಭ, ನಾ.ಕ.ರ 'ಮದ್ರಾಸಿನಲ್ಲಿ' ನಿಮ್ಮ 'ಪುಸ್ತಕ ಜಗತ್ತು', ಸಂಚಿಕೆಯ ಹೈಲೈಟ್ಸ್.

ಶೀನೂರವರನ್ನು ಬಹಳ ಮಿಸ್ ಮಾಡ್ಕೊಳ್ತಿದ್ದೆವು. ಅವರನ್ನು 'ಬ್ರಹ್ಮ ಸೋಮಾರಿ ತನ' ದಿಂದ ಎಬ್ಬಿಸಿದ್ದುದ್ದಕ್ಕೆ ಅಪರಂಜಿಗೆ ಹೃತ್ಪೂರ್ವಕ ಧನ್ಯವಾದಗಳು. ತಿಪ್ಪೆ ವೃತ್ತಾಂತ ಅತ್ಯಂತ ರಂಜನೀಯವಾಗಿದೆ.

"Short of closing down what else' ಅನ್ನುವ ಪ್ರಶ್ನೆ ವಿನೋದದ ಹಿಂದಿನ ವಿಷಾದ ಸೂಚಿಸಿತು. ಖಂಡಿತಾ ತಮಾಷೆಗೂ ಈ ಪ್ರಶ್ನೆ ಕೇಳಬೇಡಿ. ದಿನದಿಂದ ದಿನಕ್ಕೆ ಅಪರಂಜಿಯ ಹೊಳಪು ಹೆಚ್ಚಲಿ ಎಂಬುದು ನನ್ನ ಹಾಗೂ ಎಲ್ಲ ಓದುಗರ ಆಶಯ. ಈಗ ಆ ದಿಶೆಯಲ್ಲಿ ಮಾರ್ಚ್ ಮಾಡುತ್ತಿದ್ದಾಳೆ 'ಅಪರಂಜಿ'. ಇಂಥ ಸುಸಮಯದಲ್ಲಿ ಅಂಥಾ ಮಾತೇಕೆ?

ಜಯರಾಂ ಉಡುಪರ ಕ್ಯಾರಿಕೇಚರ್ ಕ್ಲಾಸಿಕ್ ಆಗಿದೆ. ಶ್ರೀ ಆರ್.ಕೆ. ಲಕ್ಷ್ಮಣ್‌ರಂತೆ ಇವರೂ ಅಂತರಾಷ್ಟ್ರೀಯ ಖ್ಯಾತಿ ಪಡೆಯುವಂತಾಗಲಿ ಎಂದು ಹಾರೈಸುತ್ತೇನೆ.

ನಿಮ್ಮ 'ಪುಸ್ತಕ ಜಗತ್ತು' ಸರಣಿಯಾಗಿ ಮುಂದುವರೆಯಲಿ. ದಯವಿಟ್ಟು ಹೊಸಹೊಸ ಪುಸ್ತಕ ಓದಿ, ನಮಗೆ ಪರಿಚಯಿಸಿ ಬರೆಯಿರಿ. ಯಾಕೇಂದ್ರೆ ನಿಮ್ಮ ಬರವಣಿಗೆ ಸುಧಾರಿಸೋದು ಬೇಡ್ವೇ (ಶ್ರೀ ರಾಶಿಯವರ ಕ್ಷಮೆ ಕೋರಿ)!

**ಅಂಶ, ಬೆಂಗಳೂರು.**

ಇನ್ನು ಇವರ ಸುತ್ತಲೂ ಒಂದು ರಾಕೆಟ್ ನಿರ್ಮಿಸಿಬಿಟ್ರೆ ಆಯ್ತು, ಭಾರತದ
ಅಂತರಿಕ್ಷ ಯಾನಕ್ಕೆ ಎಲ್ಲಾ ಸಿದ್ಧ ಆದ ಹಾಗೆ....





# ರಸಾಸ್ವಾದನೆ

**ಬಿ.ಎಸ್. ಶೈಲಜಾ**

ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಹಿಸ್ಟ್ರಿಯಾನಿಕ್ ಕ್ಲಬ್‌ನವರು ಕೈಲಾಸಂ ನಾಟಕಗಳನ್ನು ಆಡಿ ಸೈ ಎನ್ನಿಸಿಕೊಂಡಿದ್ದ ಕಾಲ. ''ಅಮ್ಮಾವ್ರ ಗಂಡ'' ''ಅನುಕೂಲಕ್ಕೊಬ್ಬಣ್ಣ'' ಈ ಹೆಸರುಗಳ ನಡುವೆ ಒಮ್ಮೆ ''ನಂ ಕಂಪ್ನಿ'' ಹೆಸರು ಕಂಡಿತು. ಕೈಲಾಸಂ ನಾಟಕ ಎಂದರೇ ಮೂಗು ಮುರಿಯುತ್ತಿದ್ದ ಹಿರಿಯ ಸಂಗೀತ ವಿದ್ವಾಂಸರೊಬ್ಬರು ಮೆಟ್ಟಂಗಾಲಿನಲ್ಲಿ ನಿಂತು ನೋಟೀಸ್ ಬೋರ್ಡ್ ಓದಿ, ದಿನಾಂಕ, ಸಮಯಗಳನ್ನು ಗುರುತುಹಾಕಿಕೊಂಡು ಹೋದರು. ನಾನು ಆವರೆಗೂ ಆ ನಾಟಕ ನೋಡಿರಲಿಲ್ಲ. ಈ ಹಿರಿಯರ ಆಸಕ್ತಿಗೆ ಏನು ಕಾರಣ ಎಂದು ನನಗೆ ಕುತೂಹಲ. ನಾಟಕದ ದಿನ ಅವರು ಮೊದಲನೆಯ ಸೀಟಿನಲ್ಲೇ (ಮುಂದಿನಸಾಲು) ಹಾಜರ್ರು. ನಾನು ಅವರ ಹಿಂದಿನ ಸೀಟಿನಲ್ಲಿ ಕುಳಿತೆ. ನಾಟಕದ ಜೊತೆಗೆ ಅವರನ್ನೂ ಗಮನಿಸೋಣ ಎಂದು.

ನಟಿ ಮತ್ತು ಸೂತ್ರಧಾರ ಬಂದೊಡನೆಯೇ ಜನಸ್ತೋಮದ ನಗುವಿನ ಹೊಳೆ ಹರಿಯತೊಡಗಿತು. ಬೇಸಗೆಯನ್ನು ವರ್ಣಿಸುವೆನೆಂದಾಗ ನಿಶ್ಯಬ್ದ. ಈ ಹಿರಿಯರು ಸೆಟೆದು ನೆಟ್ಟಗೆ ಕುಳಿತರು. ಆ ಗಾಯಕ (ನಟಿಯ ಪಾತ್ರವಹಿಸಿದ್ದ ಗಂಡಸು) ವಿಸ್ತಾರವಾಗಿ ಆಲಾಪನೆ ಮಾಡ ತೊಡಗಿದಂತೆ ಇವರ ತಲೆ ತೂಗತೊಡಗಿತು. ''ರಾರಾಜಿಸುತಿಹುದು ಬೇಸಗೆ'' ಎಂಬ ಹಾಡನ್ನು ಹಿಗ್ಗಾ ಮುಗ್ಗಾ ಎಳೆದಾಡಿದಂತೆ ಇವರ ತಲೆಯೂ ರುಬ್ಬುಗುಂಡಿನಂತೆ ಸುತ್ತ ತೊಡಗಿತು. ಆತ ಕೊನೆಗೆ ''ದುಬೇಸಗೆ.... ಬೇಸಗೆ.... ಸಗೆ ....ಗೆ'' ಎಂದು ನಿಲ್ಲಿಸಿದಾಗ ಜನರೆಲ್ಲಾ ನಕ್ಕು ನಕ್ಕು ಸುಸ್ತಾದರು. ಈ ಹಿರಿಯರಂತೂ ಎದ್ದು ನಿಂತು ಆವೇಶದಿಂದ ಒಂದೇ ಸಮನೆ ಚಪ್ಪಾಳೆ ತಟ್ಟಿ, ''ಪ್ರಮಾದಂ... ಪ್ರಮಾದಂ'' ಎಂದು ಕಿರಿಚಿದರು. ಮುಂದೆ ಎಲ್ಲ ಸಂಗೀತಮಯ. ಒಂದೊಂದು ''ಕೃತಿ'' (ಹೀಗೆಂದು ಬರೆದರೆ ಸಂಗೀತ ವಿದ್ವಾಂಸರ ಆಕ್ಷೇಪವಿಲ್ಲ ಎಂದು ಕೊಂಡಿದ್ದೇನೆ.) ಮುಗಿದಾಗಲೂ ಜನರೆಲ್ಲರ ಕರತಾಡನ- ಇವರ ಕುಣಿದಾಟ!

ಮಧ್ಯದಲ್ಲೊಂದು ಸಲ ''ರಕ್ಷಿಸೋ ರಾಮಾ ರಕ್ಷಿಸೋ'' ಎಂಬ ಹಾಡು ಕಮಾಚ್ ರಾಗದಲ್ಲಿ ಆರಂಭವಾಯಿತು. ಸ್ವರ ಹಾಕುವ ಆವೇಶದಲ್ಲಿ ಗಾಯಕ ಚಚ್ಚಿಹಾಕುವ, ಸೀಳುಹಾಕುವ, ಹೊಡೆಯುವ ಅಭಿನಯ ಮಾಡುತಿದ್ದರೂ ಬಾಯಿಯಲ್ಲಿ ಮಾತ್ರ ''ರಕ್ಷಿಸೋ'' ಎಂದೇ ಹೇಳುತ್ತಿದ್ದುದೇ ಒಂದು ವೈಶಿಷ್ಟ್ಯ. ದೈನ್ಯತೆಯ ಹೆಸರೇ ಇಲ್ಲದಂತೆ ವೀರಾವೇಶದಲ್ಲಿ ಹಾಡು ಮುಂದುವರೆಯಿತು. ಜನ ನಗೆಸಾಗರದಲ್ಲಿ ಮುಳುಗಿದರು. ಉದ್ದುದ್ದನೆಯ ಸಂಗತಿಗಳು ಸ್ವರ ಪ್ರಸ್ತಾರ ಗಾಯಕನ ಸಂಗೀತ ಪ್ರತಿಭೆ ನಿಜಕ್ಕೂ ಮೆಚ್ಚಬೇಕಾದದ್ದೇ. ಸುಮಾರು ಎರಡು ಮೂರು ನಿಮಿಷಗಳ ಕಾಲ ಉಸಿರು ಬಿಗಿ ಹಿಡಿದು, ಸ್ವಲ್ಪವೂ ಅಪಸ್ವರವಿಲ್ಲದಂತೆ ಸ್ವರ ಹಾಕಿ ಮುಗಿಸಿದ



ಕೂಡಲೇ ಜನ ಜೋರಾಗಿ ಚಪ್ಪಾಳೆ ತಟ್ಟಿದರು. ಈ ವಿದ್ವಾಂಸರು ಮಾತ್ರ ಎದ್ದುನಿಂತು, ''ಮಡೆಯಾ, ಏನು, ಮಾಡಿದೆಯೊ?'' ಎಂದು ಗಟ್ಟಿಯಾಗಿ ಕೂಗಿದರು. ಗಾಯಕನಿಗೆ ಬೇಕಾದ್ದುದೊ ಅದೇ. ಆಗಲೇ ಜನರಿಗೆ ಅರಿವಾದದ್ದು ಅವನು ''ರಕ್ಷಿಸೋ ರಾಮಾ ರಕ್ಷಿಸೋ'' ದಿಂದ ''ಬ್ರೋಚೇವಾರೆವರೇ'' ಗೆ ಜಾರಿಬಿಟ್ಟಿದ್ದಾನೆ ಎಂದು!

(ಈ ಬಗೆಯ ಕಂಪನಿಯ ನಾಟಕಗಳ ''ಅನಾಹುತಗಳನ್ನು'' ಕೈಲಾಸಂ ಗಮನಿಸಿ, ಅದನ್ನು ಅಳವಡಿಸುವುದನ್ನು ವಿಶೇಷವಾಗಿ ಹೇಳಿಕೊಡುತ್ತಿದ್ದರೆಂದು ಆಮೇಲೆ ತಿಳಿದುಕೊಂಡೆ.)

ಇದೂ ಒಂದು ಬಗೆಯ ರಸಾಸ್ವಾದನೆಯೋ, ರಸಭಂಗವೋ ನನಗಿನ್ನೂ ತಿಳಿದಿಲ್ಲ.

ನಾವು ಚಿಕ್ಕವರಿದ್ದಾಗ ರಾಮೋತ್ಸವದ ಸಂಗೀತ ಕಛೇರಿಗಳಿಗೆ ಹೋಗುವುದೆಂದರೆ ಬಹಳ ಉತ್ಸಾಹ. ಬೇಗ ಬೇಗ ಊಟ ಮುಗಿಸಿ ಹೋಗಿ ಪಾರ್ಕಿನಲ್ಲಿ ಕುಳಿತರೆ ರಾತ್ರಿ ಹನ್ನೊಂದರವರೆಗೂ ನಿಶ್ಚಿಂತೆ. ಈ ವಿಶೇಷ ಆಕರ್ಷಣೆಗೆ ಮೂಲಕಾರಣ ಕಲ್ಲಂಗಡಿ ಹಣ್ಣು ಎಂದು ಹೇಳಿಕೊಳ್ಳಲು, ನನಗೆ ಯಾವ ಸಂಕೋಚವೂ ಇಲ್ಲ. ಹಿರಿಯರಿಗೆ ಸಂಗೀತ ರಸ. ನಮಗೆ ಕಲ್ಲಂಗಡಿ ರಸ. ಒಂದು ದಿನ ಅಪ್ಪನ ಆತಿಥ್ಯ, ಮತ್ತೊಂದು ದಿನ ದೊಡ್ಡಪ್ಪನದು, ಇನ್ನೊಂದು ದಿನ ಸೋದರ ಮಾವನದು-ಒಟ್ಟಿನಲ್ಲಿ ದಿನವೂ ಕಲ್ಲಂಗಡಿ ಸಿಗುತ್ತಿತ್ತು. ಅದರ ಸವಿ ಎಷ್ಟು ಹೊತ್ತು, ಎಂದು ನಿಮಗನಿಸಬಹುದು. ಆಮೇಲೆ ನಮ್ಮನ್ನು ನಿದ್ದೆ ಹೋಗದಂತೆ ಹಿಡಿದಿಡುತ್ತಿದ್ದುದು ಜಾರುಬಂಡೆ ಎಂದು ನೀವು ತಿಳಿದಿದ್ದರೆ ಅದು ತಪ್ಪು! ನಮ್ಮ ಸುತ್ತಲಿರುತ್ತಿದ್ದ ರಸಿಕರ ಭಾವೋನ್ಮಾದವೇ ನಮಗೊಂದು ಮನರಂಜನೆ. ''ಆಹಾ... ಓಹೋ'' ಎಂದು ತೂಗುವ ತಲೆಗಳ ವೈವಿಧ್ಯಮಯ ನರ್ತನ. ಪೆರೇಡಿನ ಎನ್.ಸಿ.ಸಿ. ಕ್ಯಾಡೆಟ್ಟುಗಳಷ್ಟೇ ಶಿಸ್ತಿನಿಂದ ತೊಡೆಗೆ ಬೀಳುವ ತಾಳೆ. ಈ ಕೈಯಿಂದ ಆ ಕೈಗೆ ಟ್ರಾನ್ಸ್‌ಫರ್ ಆಗುವಾಗಲೂ ತಾಳ ತಪ್ಪುತ್ತಿರಲಿಲ್ಲ. ಒಮ್ಮೊಮ್ಮೆ ಎರಡೂ ಕೈಗಳು, ಕೆಲವೊಮ್ಮೆ ಕಾಲು, ತೊಡೆ ಎಲ್ಲವೂ ಲಯಬದ್ಧವಾಗಿ ಭಾಗವಹಿಸುತ್ತಿದ್ದವು. ವಿದ್ವಾಂಸರ ಪರಿಶ್ರಮ ಪರಾಕಾಷ್ಠೆಯನ್ನು ಮುಟ್ಟಿದಾಗ (ಉದಾ: ಗಾಯಕ/ಕಿ, ತಾರ ಪಂಚಮವನ್ನು ತಲುಪಿದಾಗ) ಕೆಲವರು ಎದ್ದುನಿಂತು ಉದ್ವೇಗದಿಂದ ಸುಮಾರು ಐದ್ಹತ್ತು ನಿಮಿಷ ಚಪ್ಪಾಳೆತಟ್ಟುತ್ತಿದ್ದರು. ಆ ಸಂದರ್ಭವನ್ನೇ ಕಾಯುತ್ತಿದ್ದ ನಮ್ಮಲ್ಲೊಬ್ಬ ತುಂಟ ಅವರ ಸೀಟಿನಲ್ಲಿ ತಾನು ಕುಳಿತು, ಅವರನ್ನು ತಬ್ಬಿಬ್ಬು ಮಾಡುತ್ತಿದ್ದ.

ಈ ಕಛೇರಿಗಳಲ್ಲಿ ಕೇಳಿ ಬರುವ ಭಾಷೆಗೆ ಬೇರೆ ನಿಘಂಟು ಮಾತ್ರವಲ್ಲದೇ ವ್ಯಾಕರಣವನ್ನು ತಿದ್ದ ಬೇಕಾಗಬಹುದು. ಗಾಯಕ/ಗಾಯಕಿಯರ ವಯಸ್ಸನ್ನು ಮೀರಿದ್ದು ಇವರ ಅಭಿಮಾನ. ಹಾಗಾಗಿ ಎಲ್ಲರಿಗೂ ಏಕವಚನವೇ ''ತನಿ ಆದಮೇಲೇ ಅವನಿಗೆ ಸ್ಫೂರ್ತಿ ಬರುವುದು...'' ''ಅಬ್ಬಬ್ಬಾ ಏನು ಸ್ವರಶುದ್ಧಿ... ಮಂದ್ರಕ್ಕೆ ಇಳಿದರೆ ವೀಣೆ ಕೊನೇ ತಂತಿ ಮೀಟಿದ್ಹಾಗಿರುತ್ತೆ'' ''ಅದೇನು ಕಸರತ್ತು ಮಾಡ್ತಾನೆ... ಪಿಟೀಲುವಯ್ಯ ತಡಬಡಾಯಿಸ್ತಾನೆ''... ''ಎಂಥಾ ಸಾಧನೆ... ಪಂಚಮಕ್ಕೆ ಹೋಗಿಬರೋದು ಅಂದ್ರೆ ಪಕ್ಕದ್ಮನೆಗೆ ಹೋಗಿ ಬಂದಷ್ಟು ಸಲೀಸಾಗಿ ಹಾಡ್ತಾಳಲ್ಲ!''... ಇವು ನನಗೆ ನೆನಪಿರುವ ಕೆಲವು ನುಡಿಮುತ್ತುಗಳು. ಒಬ್ಬರಿಗಂತೂ ಹೆಸರಾಂತ ಘಟದ ವಿದ್ವಾಂಸರೊಬ್ಬರನ್ನು ಕಂಡರೆ ಬಹಳ ಸಿಟ್ಟು. ಆ ಘಟದ ಪಟು ಪ್ರತಿ ಆವರ್ತದಲ್ಲೂ ಅಂಗುಲ ಅಂಗುಲವಾಗಿ ಮೈಕ್ರೋಫೋನ್ ಅನ್ನು ಹತ್ತಿರಕ್ಕೆಳೆದುಕೊಂಡು ಬಿಡುತ್ತಿದ್ದರು. ಅಲ್ಲದೆ ಸ್ಫೂರ್ತಿ ಉಕ್ಕಿದಾಗಲೆಲ್ಲಾ ಟಕಟಕ ಎಂದು ಜೋರಾಗಿ ನುಡಿಸಿಬಿಡುತ್ತಿದ್ದರು. ಆಗ ಗಾಯನ, ಪಿಟೀಲು, ಮೃದಂಗ ಎಲ್ಲವೂ ಅಡಗಿ ಹೋಗಿಬಿಡುತ್ತಿತ್ತು. ಆಗ ಈ ನಮ್ಮ ರಸಿಕರು ಎದ್ದು ನಿಂತು ಜೋರಾಗಿ ''ಏನಯ್ಯಾ ಘಟಶಿರೋಮಣಿ, ಎಲ್ಲಂದರಲ್ಲಿ ನುಗ್ಗುತೀಯಾ?'' ಎಂದು ಕೂಗುತ್ತಿದ್ದರು. ತಾವು ಪಾರ್ಕ್‌ನಲ್ಲಿದ್ದೇವೆ ಎಂಬುದೂ ಅವರಿಗೆ ಮರೆತು ಹೋಗಿರುತ್ತಿತ್ತು.

ಕರ್ನಾಟಕ ಸಂಗೀತ ಕಚೇರಿಯಲ್ಲಿ ದಟ್ಟಿಪಂಚೆ, ರೇಷ್ಮೆಸೀರೆ, ತೆಂಗಲೆ, ವಡಗಲೆ, ವಿಭೂತಿಪಟ್ಟೆಗಳ ಆಧಿಪತ್ಯ. ಹಿಂದುಸ್ತಾನೀ ಕಛೇರಿಗಳಲ್ಲಿ ತರಹಾವರಿ ದೇಶಿ, ವಿದೇಶಿ ಸೆಂಟುಗಳ ಪರಿಮಳ. ಒಂದು ಚಿಕ್ಕ ಫ್ಯಾಷನ್ ಪೆರೇಡ್ ಸಹ. ಈಚೆಗೆ interval ಅನ್ನು ಘೋಷಿಸುವುದರಿಂದ ಪಾನಿಪೂರಿಗಳ ಹಾವಳಿಯೂ ಉಂಟು.

ಹಿಂದುಸ್ತಾನಿ ಕಛೇರಿಗಳ ರಸಿಕರ ಉದ್ಗಾರಗಳಿಗೆ ಭಾಷಾಸಮಸ್ಯೆಯೇ ಇಲ್ಲ. ''ವಾರೆವ್ಹಾ'' ''ಶಭಾಷ್''ಗಳು ರಸಿಕರಿಂದ ಮಾತ್ರವಲ್ಲದೇ ಗಾಯಕ/ವಾದಕರಿಂದಲೂ ಕೇಳುತ್ತಿರುತ್ತದೆ. ಇನ್ನು ಕೆಲವರು ತಬಲಾದವನು ''ಸಂ''(ತಾಳದ ಆರಂಭ)ಗೆ ಬಂದಾಗಲೆಲ್ಲಾ ''ಹೌದು....'' ಎಂದು ಕೂಗುತ್ತಿರುತ್ತಾರೆ. ಕೆಲವು ಉದ್ಗಾರಗಳನ್ನು ಕೇಳಿ....'' ಅಡ್ಡಡ್ಡಾ ಹಾಡ್ತಾಳೆ... ಅಂತರಾನೇ (ಕೃತಿಯ ಉತ್ತರಾರ್ಧ) ಹಾರಿಸಿಬಿಟ್ಟು, ತಿಹಾಯಿ (ಮುಕ್ತಾಯ) ಮಾಡಿಬಿಟ್ಟಳು'' ''ಚೀಝು (ಕೃತಿ) ಬ್ಯಾರೇನೆ ಮಾಡಿಬಿಟ್ನಲ್ಲಪಾ....'' ''ಗಂಡ ಹೇಣ್ತಿ ಇಬ್ರೂ ಕರೆನಾಕರಾಗ (ಹಾರ್ಮೋನಿಯಂ ಶೃತಿ) ಹಾಡ್ತಾರಂತಲ್ಲ....'' ''ಭಾರಿ ಬೆರಿಕೀ ಇದ್ದಾನ್ರೀ ಮಾಲಕೌಂಸದೊಳಗ ನುಗ್ಗಿ ಭೈರವಿ ತೆಗೀತಾನೆ....'' ''ಈ ಉತ್ತರಾದಿ ಮಂದಿ ದಾಸರ ಪದ ಅನ್ನವಲ್ರು''...

ಕೆಲವೊಬ್ಬರಿಗೆ ತಮ್ಮ ಘರಾನಾದ ಬಗ್ಗೆ ವ್ಯಾಮೋಹ ಹೆಚ್ಚು. ಹತ್ತು ಪದಿನೈದು ನಿಮಿಷಕ್ಕೊಮ್ಮೆ ''ಈ ಘರಾನಾದ ಮಂದಿ ಬರೇ ಬೇತಾಲ್ (!) ಹಾಡ್ತಾರೆ'' ಎನ್ನುತ್ತಿರುತ್ತಾರೆ.

ಖ್ಯಾತ ಮುಸ್ಲಿಂ ಗಾಯಕಿಯೊಬ್ಬಳ ಕಛೇರಿ. ಮಧ್ಯೆ ಪವರ್ ಹೋದಾಗಲೂ ಜನ ನಿಶ್ಯಬ್ಧವಾಗಿ ಆಲಿಸಿದರು. ಅಂಥ ಸಿರಿಕಂಠ. ಎರಡು ಮೂರು ರಾಗಗಳನ್ನು ದೀರ್ಘವಾಗಿ ಹಾಡಿ ಮುಗಿಸಿದ ಮೇಲೆ ಒಬ್ಬರೆದ್ದು ಮನೆಗೆ ಹೊರಟರು. ಪಕ್ಕದವರು ''ಇರ್ರಿ, ಪೂರ್ತಿಕೇಳೋಣಂತ'' ಅಂದರೆ, ಅವರು ''ಇನ್ನಾಕಿ ಫರಮಾಯ್ಷಿ ಹಾಡ್ತಾಳ್ರೀ... ಈ ಮಂದಿ ಚಪ್ಪಾಳೆ ಬಡಕೋತ ಕೂಡ್ತಾರೆ'' ಎಂದಂದು ಹೊರಟೇ ಬಿಟ್ಟರು (ಘಜಲ್, ಠುಮ್ರಿಗಳ ಸರಳವಾದ ವಿವರಣೆ ಇದು) ಆ ಕಛೇರಿಯಲ್ಲಿ ಅಂದು ಹಾರ್ಮೋನಿಯಂ ನುಡಿಸಿದಾಕೆ ಅದ್ಭುತವಾಗಿ ನುಡಿಸಿದಳು. ಗಾಯಕಿಯ ಕಂಠದ ಕಸರತ್ತನ್ನು ಈಕೆಯ ಕೊರಳು ಬಳುಕುತ್ತಾ ಪ್ರದರ್ಶಿಸುತ್ತಿತ್ತು. ಚಿಕ್ಕ ಹುಡುಗಿಯೊಬ್ಬಳು ಸೀಟಿನ ಮೇಲೆ ನಿಂತು ''ಆಕಿ ಗೋಣು ನೋಡಂವಾ.... ಹೇಂಗ ಚೆಲ್ತಾಳ'' ಎಂದು ಕೂಗಿದಳು



ಹೆಸರಾಂತ ಸಂಗೀತಗಾರರೊಬ್ಬರು ಕಛೇರಿಗೆ ಅತ್ಯಾಸೆಯಿಂದ ಟಿಕೇಟು ಖರೀದಿಸಿ, ಮುಂದಿನ ಸಾಲಿನಲ್ಲಿ ಕುಳಿತವರೊಬ್ಬರು ಅರ್ಧಗಂಟೆಯೊಳಗಾಗಿ ಜಾಗ ಖಾಲಿಮಾಡಿ, ಎರಡನೇ ಸಾಲಿಗೆ ಬಂದರು. ''ಅಂವ ಹಾಡುವಾಗಲೆಲ್ಲಾ ನನ್ನ ತಿಂದು ಹಾಕೋಹಾಂಗ ನೋಡ್ತಿದ್ದ. ಅದಕ್ಕೆ ಕಸಿವಿಸಿ ಆಗಿ ಇಲ್ಲಿಗೆ ಬಂದೆ'' ಇದು ಅವರ ವಿವರಣೆ. ಈ ಗಾಯಕರ ಅಂಗಚೇಷ್ಟೆಯ ಬಗ್ಗೆ ತಿಳಿಯದಿದ್ದ ನನ್ನ ಪುಟ್ಟ ತಮ್ಮ ''ಅವರ್‍ಯಾಕೆ ಕಾಫಿ ಇದೆಯೇಂತ ಬಗ್ಗೀ ಬಗ್ಗೀ ನೋಡ್ತಿದ್ದಾರೆ'' ಎಂದು ಕೇಳಿದ್ದ. ಪಿಟೀಲು ಕಮಾನು ಬಂದು ತಿವಿಯುತ್ತದೆ ಎಂದು ಎದರಿ ಅವರು ಹಿಂದಕ್ಕೆ ಹೋಗುತ್ತಿರುತ್ತಾರೆ ಎಂದು ಒಬ್ಬ ಪುಟ್ಟ ಹುಡುಗಿ ನಂಬಿದ್ದಳು.

ಈಚೆಗೆ ಸುಗಮ ಸಂಗೀತದ ಕಛೇರಿಗಳಲ್ಲಿ ''ಯೂನಿಫಾರಂ'' ಹಾಕಿಕೊಂಡು ಬೊಂಬೆಗಳಂತೆ ನಿಂತು ಹಾಡುವ ಪರಿಪಾಠ ಬೆಳೆದು ಬಂದಿದೆ. ನಿಂತು ಹೇಳುವುದರಿಂದ ತೊಡೆಗೆ ತಾಳ ಹಾಕುವ ಅವಕಾಶವೇ ಇಲ್ಲ ಪಾಪ! ಭಾವನೆಗಳನ್ನು ವ್ಯಕ್ತಪಡಿಸಲು ಹೀಗೊಂದು ಕಡಿವಾಣ ಸಾಲದೆಂಬಂತೆ, ಮುಂದೊಬ್ಬ/ಒಬ್ಬಳು ನಿಂತು ''ಹೊಡೆಯುತ್ತೇನೆ'' ಎಂದು ಬೇರೆ ಬೆದರಿಸುತ್ತಾನೆ/ಳೆ. ಪ್ರೇಕ್ಷಕರಿಗೆ ಬೆನ್ನು ಹಾಕಿ ನಿಲ್ಲುವ ಈ ವ್ಯಕ್ತಿಗೆ ನಮ್ಮವರೊಬ್ಬರು ರಿಂಗ್ ಮಾಸ್ಟರ್ ಎಂದು ಹೆಸರಿಟ್ಟಿದ್ದಾರೆ.

ಇನ್ನು ಸಂಗೀತ ಕಲಿಸುವ/ಕಲಿಯುವ ಸಡಗರ ಕೇಳಿ. ಕೇವಲ ಆರು ವಯಸ್ಸಿನ ಮಗುವಿಗೆ ''ಸಂಗೀತಕ್ಕೆ ಹಚ್ಚ''ಬೇಕೆಂದು ಮನೆಯವರ ಅಪೇಕ್ಷೆ. ಮನೆಗೇ ಬಂದು ಹೇಳಿಕೊಡಲಿ ಎಂದಾಸೆ. ಗುರುಗಳು ಹೆಚ್ಚು ಫೀಸು ಕೇಳಿದ್ದಕ್ಕೆ ''ಸಾಪಾಸಾ... ಕೂಗಿಸ್ಲಿಕ್ಕೆ ಶಂಭೋರು (ನೂರು) ರೂಪಾಯಿಯಾ?'' ಎಂದು ಅಜ್ಜಿಯ ಆಕ್ಷೇಪ. ಮಗು ಶಾಲೆಗೇ ಬಂತು. ಬೆಳಿಗ್ಗೆ ಸಂಗೀತ ಅಭ್ಯಾಸಕ್ಕೆ ಪ್ರಶಸ್ತವಾದ ಸಮಯ ಅಲ್ಲವೇ? ಒಬ್ಬ




ಬ್ರಹ್ಮಚಾರಿಯೂ ಅಭ್ಯಾಸಕ್ಕಾಗಿ ಬರುತ್ತಿದ್ದ. ಮಗು ಅವನ ಅಭ್ಯಾಸವನ್ನು ತನ್ಮಯತೆಯಿಂದ ಗಮನಿಸುತ್ತಿತ್ತು. ದೇಸರಾಗದ ಆರೋಹಣ ಸರೆಮಪನಿಸಾ.... ಆಯಿತು. ಅವರೋಹಣ ಮುಂದುವರೆಯಿತು. ಸನಿಧಪ ಮಗರೇಗನೀ.... ಎಂದು ಮಂದ್ರಕ್ಕಿಳಿದ ಕಂಠ 'ಸಾ'ಗೆ ಹಿಂದಿರುಗಲೇ ಇಲ್ಲ. ಐದಾರು ಸೆಕೆಂಡುಗಳ ನಂತರ ಗೊರ್ರ್.... ಎಂದು ದೀರ್ಘವಾದ ತೇಗು! ಆಮೇಲೆ ಆ ಶಿಷ್ಯ....''ಈಗ್ತಾ ನೇ ....ದ್ವಾದ್ಸಿ ಪಾರ್ಣೆ ಆತ್ರೀ...'' ಎಂದು ಹಲ್ಲುಕಿರಿದ. ಮನೆಗೆ ಹೋದ ಮಗು ದೇಸರಾಗವನ್ನು ''ಗೊರ್ರ್...'' ಸಮೇತ ಹಾಡಿ ತೋರಿಸಿತು. ಅಜ್ಜಿಯ ಪ್ರತಿಕ್ರಿಯೆ ಏನಿರಬಹುದು? ಗುರುಗಳಿಗೆ 'ಶಂಭೋರು'ನಲ್ಲಿ ಅರ್ಥವಾದರೂ ತಲುಪಿತೇ?... ಇದು ನಿಮ್ಮ ಊಹೆಗೆ ಬಿಟ್ಟದ್ದು.

ಗುರುಗಳ ಮನೆಯಲ್ಲಿ ವಾದ್ಯಗಳ ಸಂಗ್ರಹವೇ ಇತ್ತು. ಅವರು ಮನೆಯಲ್ಲಿಲ್ಲದ ಹೊತ್ತಿನಲ್ಲಿ ಶಿಷ್ಯವೃಂದ ಅಭ್ಯಾಸ ನಡೆಸಿದ್ದೇ ನಡೆಸಿದ್ದು. ಕರೇ ಒಂದರಲ್ಲಿ ಸಿತಾರು, ಬಿಳಿ ಒಂದರಲ್ಲಿ ಹಾರ್ಮೋನಿಯಂ, ಬಿಳೀ ಎರಡರಲ್ಲಿ ಗಾಯನ, ''ನಾಲ್ಕುವರೆ''ಯಲ್ಲಿ ಪಿಟೀಲು ಎಲ್ಲವೂ ಒಟ್ಟಿಗೇ, ''ಪನಘಟ ಮುರಲಿಯ ಬಾಜೆಸಖೀ'' ಎಂದು ಕೂಗಿದಾಗ ಉಂಟಾಗುತ್ತಿದ್ದುದು ವಾದ್ಯಗೋಷ್ಠಿಯಲ್ಲ ಗಲಾಟೆಗೋಷ್ಠಿ. ಈ ಮಧ್ಯೆ ತಡವಾಗಿ ಬಂದದ್ದರಿಂದ ಯಾವ ವಾದ್ಯವೂ ಸಿಗದೇ ಕುಳಿತಿದ್ದವನಿಗೆ ಯಾರಾದರೂ ''ಟಿಕಾ (ತಬಲಾದ ಸರಳ ಬೋಲ್) ಹಿಡೀಲೇ ತಮ್ಮಾ'' ಎಂದರೆ ಶಾಕ್ ಹೊಡೆಸಿಕೊಂಡವನಂತೆ ಎದ್ದು ವೇಗವಾಗಿ ತಬಲಾ ಹಿಡಿಯುತ್ತಿದ್ದ. ಅದು ಕರೇ ಮೂರೋ ಮತ್ತೊಂದೋ ಯಾವುದೋ ಶೃತಿಯಲ್ಲಿದ್ದರೂ ಈ ಗಲಾಟೆ ಗೋಷ್ಠಿಗೆ ''ಚಲೇಗಾ''! ಈ ''ತಾಲೀಮಿ''ನ ಮಧ್ಯೆ ''ವಾಹ್‌ವಾ''ಗಳೂ ಸೇರಿರುತ್ತಿದ್ದವು! ಇದನ್ನು ತಾನಸೇನ, ತ್ಯಾಗರಾಜರಿರಲಿ, ಗುರುಗಳೇ ಕೇಳಿದ್ದರೂ ಖಂಡಿತಾ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದರು!

ಹೀಗೊಮ್ಮೆ ಹುಡುಗನೊಬ್ಬ ತಬಲಾಗೆ ಕೈ ಹಾಕಿದ. ಡಗ್ಗಾ ''ಡುಳ್'' ಎಂದಿತು ಬೆಚ್ಚಿ ಬಿದ್ದ ಆತ ತಾನು ಮಟ್ಟಿದ್ದನ್ನು ಯಾರೂ ಗಮನಿಸಲಿಲ್ಲವೆಂದು ನಿರಾಳವಾಗಿ ಗಪ್ ಚಿಪ್ ಎಂದು ತಬಲಾದಿಂದ ದೂರ ಸರಿದ. ಮತ್ತೊಬ್ಬ ಕೈಹಾಕಿ ''ಧೀಂ'' ಹೊರಡಿಸಲು ನೋಡಿದ. ಈಗಲೂ ಅದು ''ಡುಳ್...ಡುಳ್'' ಎಂದಿತು. ತಬಲಾ ಪಟುವೇ ಎದ್ದು ಬಂದು ತಟ್ಟಿದಾಗಲೂ ಅದೇ ''ಡುಳ್... ಡುಳ್'' (ರಾಜನಕಿವಿ, ಕತ್ತೆಕಿವಿ ನೆನಪಾಗುತ್ತಿದೆ, ಅಲ್ಲವೇ?) ಆತನಿಗೆ ಏನೋ ಅನುಮಾನ ಬಂದು ಡಗ್ಗಾವನ್ನು

ತಲೆಕೆಳಗು ಮಾಡಿದ. ಅದರೊಳಗಿನಿಂದ ಮುರಿದ ಗೊಂಬೆಯ ಕೈಕಾಲುಗಳು ಹೊರಬಂದವು. ಡಗ್ಗಾ ರಿಪೇರಿಗೆ ಹೋಗುತ್ತಿದೆ ಎಂದು ತಿಳಿದ ಮಗುವೊಂದು ತನ್ನ ಬೊಂಬೆಗಳೂ ರಿಪೇರಿಯಾಗಿ ಬರಲಿ ಎಂದು ಗ್ಯಾರಂಟಿಯಾಗಲು ಮಾಡಿಕೊಂಡಿದ್ದ ಉಪಾಯ ಇದು!



ಮಕ್ಕಳ ತಲೆಗೆ ಹೊಳೆಯುವ ಉಪಾಯ. ಅದ್ಭುತ ಅಲ್ಲವೇ? ನನ್ನ ತಮ್ಮ ಮೂರ್‍ನಾಲ್ಕು ವರ್ಷದವನಿದ್ದಾಗ ಮೊದಲಬಾರಿ ವೀಣೆ ನೋಡಿದ ಕೂಡಲೇ ತನ್ನ ಆಟದ ರೈಲನ್ನು ಅದರ ತಂತಿಗಳ ಮೇಲೆ ಓಡಿಸಿದ್ದ.

ರೇಡಿಯೋ ಸಂಗೀತ ಸಮ್ಮೇಳನದ ಸಭೆಯೊಂದರಲ್ಲಿ ಹೀಗಾಯಿತು. ಖ್ಯಾತ ನಾಗಸ್ವರ ವಿದ್ವಾಂಸರ ಕಾರ್ಯಕ್ರಮ. ಎಲ್ಲಾ ಭಾಷೆಗಳಲ್ಲಿ, ಸ್ವಾಗತ, ವಿದ್ವಾಂಸರ ಪರಿಚಯ ಎಲ್ಲಾ ಮುಗಿದ ಮೇಲೆ ನಿಶ್ಶಬ್ದ. ತಂಬೂರಿಯ ಶೃತಿ ಸಣ್ಣಗೆ ಆರಂಭವಾಯಿತು. ವಿದ್ವಾಂಸರು ವಾದ್ಯವನ್ನೆತ್ತಿ ಶೃತಿ ಕೂಡಿಸಿದ ತಕ್ಷಣವೇ... ಪುಟ್ಟ ಮಗುವೊಂದು ''ಬಸವಣ್ಣ ಬಂತು'' ಎಂದು ಕೂಗಿಬಿಟ್ಟಿತು.

ಧಾರವಾಡದವರೊಬ್ಬರು ಮೊದಲಬಾರಿ ಕರ್ನಾಟಕ ಸಂಗೀತ ಕಛೇರಿಗೆ ಬಂದಾಗ, ಆವೇಶದಿಂದ ಎರಡೂ ಕೈಗಳಿಂದ ತಾಳ ಹಾಕುತ್ತಿದ್ದ ರಸಿಕ ಶಿಖಾಮಣಿಗಳನ್ನು ಬಿಟ್ಟ ಕಣ್ಣು ಬಿಟ್ಟಂತೆ ನೋಡಿದರು. ಆಮೇಲೆ ಪಿಸುದನಿಯಲ್ಲಿ, ''ಈ ಊರಾಗ ಧೋತ್ರ ಭಾಳ ಸಸ್ತಾ ಕಡಿಮೆಬೆಲೆ ಏನ್ರೀ.....'' ಎಂದು ಕೇಳಿದರು.

ಸಂಗೀತ ದೊರಕಿರುವ ಸುಧೆ ಅಮೃತ ಸಮಾನವಾದದ್ದು. ಅದರ ಅನೇಕ ಬೈ ಪ್ರಾಡಕ್ಟ್‌ಗಳೂ ಹೀಗೆ ಕಚಗುಳಿ ಕೊಡಬಲ್ಲವು ಎಂದು ನಿಮಗೆ ಗೊತ್ತಿತ್ತೇ?

---

**ಹುಚ್ಚು**

**ಅಜ್ಜನಿಗೆ ಪರವಂಗದ**

**ಮೊಮ್ಮಗನಿಗೆ ಚದುರಂಗದ**

**– ಶಂಸ**

1945ರಲ್ಲಿ ಆರ್.ಕೆ. ಲಕ್ಷ್ಮಣ್ ಕೊರವಂಜಿಗೆ ಬರೆದ ವ್ಯಂಗ್ಯ ಚಿತ್ರ



ಕಾಲ್ಮೇಲೆ ನಿಂತಿದೀರಾ ಅಂದ್ಹಾಗೆ ಕೇಳಿಸ್ತು ಅಷ್ಟೇ

# 18- 18=6?

- ಲೀಲಾ ಮಿರ್ಲೆ

ನಮ್ಮ ಮನೆ ಹಿಂದಿರುವ ಅಪಾರ್ಟ್‌ಮೆಂಟಿನ ಮೂರನೆ ಮಹಡಿಯಲ್ಲಿರುವ ಮೂರ್ತಿಯವರ ಮನೆಯಲ್ಲಿ, ಮೊನ್ನೆ ಗದ್ದಲವೊ ಗದ್ದಲ. ಕಾರಣ ಏನೆಂದು ತಿಳಿಯಲಿಲ್ಲ. ಜನರ ಗುಂಪು ಕಡಿಮೆಯಾದ ಮೇಲೆ, ಕುತೂಹಲ ತಡೆಯಲಾರದೆ, ಮೂರ್ತಿಯವರ ಹೆಂಡತಿಯನ್ನು ಕಾಣಲು ಹೋದೆ.

ಬಾಗಿಲ ಬೆಲ್ ಮಾಡಿದೆ. ಸುಮಿತ್ರಮ್ಮ ಬಾಗಿಲು ತೆಗೆದರು. ''ಏನಮ್ಮ ಎಲ್ಲಾ ಹುಷಾರು ತಾನೆ'' ಎಂದೆ. ''ಎಲ್ಲರೂ ಹುಷಾರಾಗಿದೀವಿ. ನಮ್ಮ ಮನೆಯಲ್ಲಿ ಒಂದು ವಿಷಯ ನಡೆಯಿತು. ಅದಕ್ಕೆ ಈ ಪಾಟಿ ಜನ'' ಎಂದರು. ನಾನು ಏನಾಯಿತೆಂದು ಕೇಳುವ ಮುನ್ನವೇ ಆಕೆ ನಡೆದ ಪ್ರಸಂಗವನ್ನು ಹೇಳಲು ಪ್ರಾರಂಭಿಸಿದರು.

''ನೋಡಿ, ನಾನು ಶ್ರೀಪಾದಸ್ವಾಮಿಯವರ ಭಕ್ತೆ. ನನಗೆ ಆಪತ್ ಬಾಂಧವರಾಗಿ ಇರುವವರು ಆ ಸ್ವಾಮಿಯೊಬ್ಬರೇ. ನಾಡಿದ್ದು ನಮ್ಮ ಮೊಮ್ಮಗಳಿಗೆ ಕಿವಿ ಚುಚ್ಚುವ ಶಾಸ್ತ್ರ ಇಟ್ಟುಕೊಂಡಿದ್ದಾರೆ, ಮಗ ಸೊಸೆ. ಮಗುಗೆ ಒಂದು ಜೊತೆ ಲೋಲಾಕು ಕೊಳ್ಳೋಣವೆಂದು ವಿಪರೀತ ಆಸೆ ಆಯಿತು. ಇವರಿಗೆ ಹೇಳಿದೆ.

''ಸರಿ ಇದಕ್ಕೆಲ್ಲಾ ಹಣ ಹೊಂದಿಸೋದು ಹೇಗೆ. ಮನೆ ಕಡೆ ಸಾಲಾನೇ ಇನ್ನೂ ತೀರಿಲ್ಲ. ಹೀಗೆ ಮಧ್ಯೆ ಮಧ್ಯೆ ಈ ತರಹ ಖರ್ಚು ಮಾಡಿದರೆ, ಈ ಜನ್ಮದಲ್ಲಿ ಸಾಲ ತೀರಿದ ಹಾಗೆ, ನಮ್ಮ ಮನೆ ಮಗುತಾನೆ. ಶಾಸ್ತ್ರಕ್ಕೆ ಒಂದು ಫ್ರಾಕ್ ಕೊಂಡು ಕೊಟ್ಟರಾಯಿತು ಅಷ್ಟೆ ನನ್ನ ಕೈಲಿ ಆಗೋದು'' ಎಂದು ಖಡಾಖಂಡಿತವಾಗಿ ಹೇಳಿಬಿಟ್ಟರು. ನನ್ನ ಸಂಕಟ ಹೇಳತೀರದು ಕಟ್ಟೆ ಒಡೆದ ಹಾಗೆ ಕಣ್ಣೀರು ಸುರಿಯಿತು. ದೇವರ ಮನೆಗೆ ಹೋಗಿ ''ಸ್ವಾಮಿ, ನನ್ನ ಈ ಸಣ್ಣ ಆಸೆಯೂ ನೆರವೇರಲು ಸಾಧ್ಯವಿಲ್ಲವೇ'' ಎಂದು ಗೋಳೊ ಎಂದು ಅತ್ತೆ. ಸ್ವಲ್ಪ ಸಮಾಧಾನವಾಯಿತು. ಕಣ್ಣೊರೆಸಿ ಕೊಳ್ಳುತ್ತಿದ್ದಾಗ, ದೇವರ ಪಟದ ಎದುರಿಗೆ ಹಳದಿ ಪೇಪರಿನಲ್ಲಿ ಸುತ್ತಿದ ಸಣ್ಣ ಪೊಟ್ಟಣ ಕಾಣಿಸಿತು.

ಪೊಟ್ಟಣ ಬಿಚ್ಚಿ ನೋಡಿದೆ. ಏನಾಶ್ಚರ್ಯ ಅಂತೀರಾ! ಮುತ್ತು, ಹವಳ ಹಾಕಿದ ಚಿನ್ನದ ಒಂದು ಜೊತೆ ಪುಟ್ಟ ಲೋಲಾಕು ಅದರಲ್ಲಿತ್ತು. ನನಗೆ ದಿಕ್ಕೇ ತೋಚದ ಹಾಗಾಯಿತು'' ಎಂದರು.

''ಮನೆಯಲ್ಲಿ ಯಾರೂ ಇರಲಿಲ್ಲ, ಅಂತಿರ, ನಿಮ್ಮ ಯಜಮಾನ್ರ ಏನಾದ್ರು ತಂದಿಟ್ಟಿದ್ದರೋ'' ಎಂದು ಪೆದ್ದು ಪೆದ್ದಾಗಿ ಕೇಳಿದೆ.

''ಸಧ್ಯ, ಒಡವೆ ಮಾತು ಎತ್ತಿದ್ದಕ್ಕೆ ಬಂದ ಕೋಪವೇ ಕಮ್ಮಿಯಾಗಿರಲಿಲ್ಲ. ಇನ್ನು ಅವರೇಕೆ ಓಡ್ಹೋಗಿ ತರ್ತಾರೆ! ಲೋಲಾಕ ತೋರಿಸಿದಾಗ, ಅವರಿಗೂ ಆಶ್ಚರ್ಯ. ಭಗವಂತನನ್ನು ಈಪ್ಸಿತಾರ್ಥದಾಯಕ ಎನ್ನುವುದರ ಅರ್ಥ ನನಗೆ ಈಗ ತಿಳಿಯಿತು.

ನನ್ನ ಪರಿಸ್ಥಿತಿಯನ್ನು ಕಂಡು, ಆ ಸ್ವಾಮಿಯ ಹೃದಯ ಕರಗಿ, ನನ್ನ ಇಷ್ಟಾರ್ಥ ನೆರವೇರುವಂತೆ ಮಾಡಿದ್ದರು'' ಎಂದೆಲ್ಲಾ ಹೇಳಿದರು.

ಮನೆಗೆ ಬಂದ ಮೇಲೂ, ಈ ಘಟನೆಯೇ ಜ್ಞಾಪಕಕ್ಕೆ ಬರುತ್ತಿತ್ತು. ''ನಂಬಿ ಕರೆದರೆ ಓ ಎಂಬ ಶಿವನು'' ಎನ್ನುತ್ತಾರೆ. ನಿಜವಾಗಲೂ ಭಕ್ತಿಯಿಂದ, ಅಂದರೆ ಹೃದಯಾಂತರಾಳದಿಂದ ಅಂದರೆ ಸಿನ್‌ಸಿಯರಾಗಿ, ದೇವರೊಡನೆ ಸಂಭಾಷಣೆ ನಡೆಸಿದರೆ, ಆತ ಉತ್ತರ ಕೊಡುವುದು ಸಾಧ್ಯವೆಂದಂತಾಯಿತು. ಹಿಂದೆ ಪುರಾಣದಲ್ಲೂ ಅಕ್ಷಯ ಪಾತ್ರೆಯಲ್ಲಿ ಅನ್ನ ಉಕ್ಕುವುದೂ ದ್ರೌಪದಿಗೆ ಕೃಷ್ಣ ಸೀರೆ ಒದಗಿಸಿದ್ದೂ, ಎಲ್ಲಾ ಭಕ್ತರ ಪ್ರಾರ್ಥನೆಯ ಫಲವಲ್ಲವೇ!

ಇದೆಲ್ಲಾ ನಡೆದು ಸುಮಾರು ಆರು ತಿಂಗಳ ನಂತರ, ನಮ್ಮ ಮನೆಯಲ್ಲಿ ನನ್ನ ಮೊಮ್ಮಗ ತರುಣನ ಹುಟ್ಟಿದ ಹಬ್ಬ ಇಟ್ಟುಕೊಂಡಿದ್ದೆವು. ತರುಣ ಎರಡನೆಯ ತರಗತಿಯಲ್ಲಿ ಓದುತ್ತಿದ್ದಾನೆ. ಸುತ್ತಮುತ್ತಾ ಇರುವ ಅವನ ಸ್ನೇಹಿತರನ್ನು ಕರೆದು, ಒಂದು ಸಣ್ಣ ಪಾರ್ಟಿ ಮಾಡಿಸೋಣವೆಂದು ನಿಶ್ಚಯಿಸಿದೆವು.

ಸರಿ, ಯಥಾಪ್ರಕಾರ ಚಿಪ್ಸು, ಕೇಕು, ಜೂಸು ಇತ್ಯಾದಿ ಎಲ್ಲಾ ತಂದಿದ್ದಾಯಿತು. ಎಲ್ಲಾ ಮಕ್ಕಳಂತೆ ನಮ್ಮ ತರುಣನಿಗೂ ಕ್ಯಾಡ್‌ಬರಿ ಚಾಕೊಲೆಟ್ ಎಂದರೆ ಬಲು ಪ್ರೀತಿ. ಮಕ್ಕಳು ಮನೆಗೆ ಹಿಂತಿರುಗುವಾಗ ಕೈಗೆ ಒಂದೊಂದು ಚಾಕೊಲೆಟ್ ಕೊಡೋಣವೆಂದು, ಅಂಗಡಿಗೆ ಹೋಗಿ ಹದಿನೆಂಟು ಚಾಕೊಲೆಟ್ ಕೊಂಡೆ. ಮನೆಯ ಮಕ್ಕಳೂ ಸೇರಿ ಹದಿನೆಂಟು ಮಕ್ಕಳ ಲೆಕ್ಕ ಬಂದಿತ್ತು. ಹುಡುಗರಿಗೆ ಕಾಣದಂತೆ ಫ್ರಿಜ್ಜಿನಲ್ಲಿ ಚಾಕೊಲೆಟನ್ನು ಇಟ್ಟೆ.

ಸರಿ, ನಾಲ್ಕು ಗಂಟೆಗೆ ಮಕ್ಕಳು ಬರಲು ಶುರುಮಾಡಿದವು. ಪಕ್ಕದ ಮನೆ ಶಾಂತಿಯ ಜೊತೆ, ಅವರ ಮನೆಗೆ ಬಂದಿದ್ದ ನೆಂಟರ ಇಬ್ಬರು ಮಕ್ಕಳೂ ಬಂದವು. ಓಹೋ, ಎರಡು ಚಾಕೊಲೆಟ್ ಕಮ್ಮಿ ಬರತ್ತೆ ಅಂದುಕೊಂಡೆ ನಂತರ ಬಂದ ಅವನ ಶಾಲೆಯ ಸ್ನೇಹಿತ ನವೀನನ ಜೊತೆ, ಅವನ ತಂಗಿಯರಿಬ್ಬರು, ಜೊತೆಗೊಬ್ಬಳು ಚಿಕ್ಕ ಕೆಲಸದ ಹುಡುಗಿ ಬಂದರು. ಈಗ ಐದು ಚಾಕೊಲೇಟ್ shortage ಬಂತು. ನಮ್ಮ ಮನೆಯ ಮಕ್ಕಳೇ ಐದು ಜನ. ಸರಿ, ಅವರಿಗೆ ಆಮೇಲೆ ತಂದು ಕೊಟ್ಟರಾಯಿತು ಎಂದುಕೊಂಡೆ ಮನಸ್ಸು ಪಿಚ್ಚೆಂದಿತು. ಏನು ಮಾಡಲೂ ತೋಚಲಿಲ್ಲ ಮಕ್ಕಳು ಹೊರಡುತ್ತಿದ್ದ ಹಾಗೆ, ಚಾಕೊಲೆಟ್ ಕೊಡಲು ಶುರುಮಾಡಿದೆ. ಪ್ಲಾಸ್ಟಿಕ್ ಬ್ಯಾಗಿನಿಂದ ಕೊಡುತ್ತಲೇ ಇದ್ದೇನೆ. ಎಲ್ಲಾ ಮಕ್ಕಳು ಹೊರಟ ಮೇಲೂ ಇನ್ನೂ ಆರು ಚಾಕೊಲೆಟ್ ಉಳಿದಿತ್ತು. ಅದು ಹೇಗೆ? ಆಶ್ಚರ್ಯವಾಯಿತು. ನನ್ನ ಸೊಸೆಗೆ ಹೇಳಿದೆ ''ನಾನು ತಂದಿದ್ದು ಹದಿನೆಂಟು. ಹದಿನೆಂಟು ಮಕ್ಕಳಿಗೆ ಕೊಟ್ಟಮೇಲೂ, ಇನ್ನೂ ಆರು ಉಳಿದಿದೆ'' ಎಂದೆ.

''ಅಮ್ಮಾ ನಿಮಗೆ ಮರೆವು ಜಾಸ್ತಿ, 24 ತಂದಿರಬೇಕು'' ಎಂದಳು. ಚಾಕೊಲೆಟ್‌ನ ಪ್ಲಾಸ್ಟಿಕ್ ಬ್ಯಾಗಿನಲ್ಲೇ ಬಿಲ್ ಇಟ್ಟಿದ್ದ ನೆನಪು ಬಂತು. ಓಡಿ ಹೋಗಿ ಬಿಲ್ ನೋಡಿದೆ. ನಾನು ಕೊಂಡದ್ದು ಹದಿನೆಂಟೆ! ಬಿಲ್ ಅವಳಿಗೆ ತೋರಿಸಿದರೆ, ಅವಳಿಗೂ ಆಶ್ಚರ್ಯ!

''ಐದು ಮಕ್ಕಳು ಜಾಸ್ತಿ ಬಂದಾಗ, ಅಯ್ಯೋ, ಮನೆ ಮಕ್ಕಳಿಗೇ ಚಾಕೊಲೆಟ್

ಇಲ್ಲದ ಹಾಗೆ ಆಯಿತಲ್ಲಾ, ಎಂದು ಪರಿತಪಿಸಿದೆ. ನೋಡಿದರೆ ಆರು ಚಾಕೊಲೆಟ್ ಜಾಸ್ತಿ ಇದೆ'' ಅಂತ ಬಿಲ್ ತೋರಿಸಿ, ನನ್ನ ಮಗಳಿಗೆ ಹೇಳಿದೆ.

''ನಿಮಗೆ ದೇವರರಲ್ಲಿ ಭಕ್ತಿ ಜಾಸ್ತಿ. ಮಕ್ಕಳ ಮನಸ್ಸನ್ನು ನೋಯಿಸಬೇಕಲ್ಲಾ, ಅಂತ ನಿಮಗಾದ ನೋವನ್ನು ಪರಿಹರಿಸಲು, ದೇವರು ಈ ತರಹ ಒದಗಿಸಿರಬಹುದು, ಅಂತಿರಾ'' ಅಂದಳು.

''ಪವಾಡಗಳು ಕಂಟೇಜಿಯಸ್ ಅಂತ ಕಾಣತ್ತೆ. ಈ ಬಡಾವಣೆ ಪವಾಡಗಳಿಗೆ ಸಸೆಪ್‌ಟಿಬಲ್ ಆಗಿರೊ ಹಾಗೆ ಇದೆ'' ಅಂತ ಕುಹಕವಾಡಿದ ನನ್ನ ಎಥಿಯಿಸ್ಟ್ ತಮ್ಮ.

ನನಗೊ ನಿಜವಾಗಲು ದಿಗ್ಭ್ರಮೆಯಾದಂತೆ ಆಯಿತು. ಜೀವಮಾನದಲ್ಲೇ ಎಂದೂ ನನಗೆ ಈ ಅನುಭವವಾಗಿರಲಿಲ್ಲ. ಇದೇ ಮೊದಲ ಭಾರಿ. ಪವಾಡಗಳ ಬಗ್ಗೆ ಕೇಳಿದ್ದೆ. ಆದರೆ ನಮ್ಮ ಮನೆಯಲ್ಲೇ ನಡೆದದ್ದು. ಒಂದು ತರಹ ವರ್ಣಿಸಲಾರದ ಮನಃಸ್ಥಿತಿಯನ್ನು ಉಂಟುಮಾಡಿತ್ತು. ಚಾಕೊಲೆಟ್ ಏನೂ ದೊಡ್ಡ ವಿಷಯವಲ್ಲ. ಆದರೂ ಆ ಭಗವಂತನ ಅನುಕಂಪ ದೊಡ್ಡದು ಎನಿಸಿತು. ದೇವರೆದುರಿಗೆ ಕೈಮುಗಿದು ನಿಂತಾಗ, ಕಣ್ಣಿನಲ್ಲಿ ನೀರು ಧಾರಾಕಾರವಾಗಿ ಸುರಿಯಿತು. ''ನನ್ನ ಮನಸ್ಸಿಗೆ ಸ್ವಲ್ಪವೂ ನೋವಾಗದ ಹಾಗೆ ನೋಡಿಕೊಂಡೆಯಲ್ಲಾ ಭಗಂವತ'' ಎಂದು ಒಂದು ಬಗೆಯಾಗಿ ವಂದಿಸಿದೆ.

ಇಂಥಹ ಪವಾಡಗಳಾದಾಗ, ಬೇಕಾದವರಲ್ಲಿ ಹೇಳಿಕೊಳ್ಳೋಣವೆನಿಸುತ್ತದೆ. ಹಾಗಾಗಿ ನನ್ನ ಅಕ್ಕನಿಗೆ ಫೋನ್ ಮಾಡಿ ಹೇಳಿದೆ.

''ಹೌದು thoughts are very powerful. Thought vibrations ಬಲು ದೂರ ಸಾಗುತ್ತವಂತೆ. ಅದರಲ್ಲೂ positive thoughts ಗಳಿಗೆ ಹಾಗೂ ನಿಸ್ವಾರ್ಥ ಆಲೋಚನೆಗಳಿಗೆ ಪ್ರತಿಫಲ ದೊರೆಯುತ್ತದೆ ಎಂದು ಎಲ್ಲೊ ಓದಿದ್ದೆ ಎಂದಳು.

ರಾತ್ರಿ ಊಟವಾದ ಮೇಲೆ ನನ್ನ ಮಗ ಸಿಕ್ಕ. ಅವನಿಗೆ ಈ ಪವಾಡದ ಬಗ್ಗೆ ತಿಳಿಸಿದರಲಿಲ್ಲ. ನನ್ನ ಮಗ ಡಾಕ್ಟರು. ನಾಲ್ಕು ಘಂಟೆಗೆ ಪಾರ್ಟಿ ಶುರುವಾದಾಗ, ಸ್ವಲ್ಪ ಹೊತ್ತು ಇದ್ದು, ಕ್ಲಿನಿಕ್ಕಿಗೆ ಹೊರಟುಹೋಗಿದ್ದ. ನಡೆದದ್ದೆಲ್ಲಾ ಚಾಚೂ ತಪ್ಪದೆ ಹೇಳಿದೆ. ಶಾಂತವಾಗಿ ಕೇಳಿಸಿಕೊಂಡ.

''ನೀವು ಚಾಕೊಲೇಟ್ ತಂದಿದೀನಿ ಅಂತ ಮಧ್ಯಾಹ್ನ ಹೇಳಿದಿರಿ. ನಿಮ್ಮ ಸ್ವಭಾವ ನನಗೆ ಗೊತ್ತು. ಗೆರೆ ಕುಯ್ದು ಹಾಗೆ ತಂದಿರುತ್ತೀರಿ ಅಂತ ಗೊತ್ತು. ಅದಕ್ಕೆ ಕ್ಲಿನಿಕ್‌ಗೆ ಹೋಗುವ ಮುಂಚೆ ಇನ್ನೊಂದು ಆರು ಕ್ಯಾಡ್‌ಬರಿ ಚಾಕೊಲೆಟ್ ತಂದು ಆ ಪ್ಲಾಸ್ಟಿಕ್ ಬ್ಯಾಗ್ ಒಳಗೆ ಹಾಕಿದೆ'' ಎಂದ!

# ಘಾಟಿ ಮುದ್ಕ

**- ಡಾ|| ಕೆ.ಜಿ.ಜಿ. ಮೂರ್ತಿ**

''ಏನಪ್ಪ ಗುರು, ಮೂರು ದಿನ ಕ್ಲಬ್‌ನಲ್ಲಿ ದರ್ಶನವಿಲ್ಲ. ಎಲ್ಲಿಗೆ ಹೋಗಿತ್ತು ಸವಾರಿ. ಗೋವಾ'' ಎಂದು ಕೆದಕಿದ ರೆಡ್ಡಿ. ಮೂರು ಒಣ ದಿನಗಳನ್ನು ಹಳ್ಳಿಯಲ್ಲಿ ಕಳೆದು, ಅದೇ ಬಂದು 1-2 ಗುಟುಕು ಕುಡಿದಿದ್ದೆ. ಈಗ ಇವನ ಕಾಟ.

''ಊರಿಗೆ ಹೋಗಿದ್ದೆ. ಅಲ್ಲಿ ಒಬ್ಬರು ಸತ್ತಿದ್ದರು'' ಎಂದೆ ಮೊಟಕಾಗಿ

''ನೀನು ಬಿಡು, ರಜ ಬೇಕಾದರೆ ಯಾರನ್ನಾದರು ಕರುಣೆ ಇಲ್ಲದೆ ಸಾಯಿಸಿ ಬಿಡುತ್ತೀಯ. ಈಗ ಯಾರನ್ನ ಸಾಯಿಸಿದೆ? ಅತ್ತೆ!

''ಇಲ್ಲ ಮಹಾರಾಯ ನಿಜಕ್ಕೂ ನಮ್ಮ ಊರಲ್ಲಿ ಒಬ್ಬ ಮುದುಕ ಸತ್ತಿದ್ದ, ಹೋಗಿದ್ದೆ.''

''ಯಾರಾದರು ಸತ್ತರೆ ನೀನು ಹೋಗುವವನೆ? ಅದರಲ್ಲೂ ಲಾಭವಿಲ್ಲದೆ. ಏನಾದರೂ ವಿಲ್, ಆಸ್ತಿಗೀಸ್ತಿ ಗಿಟ್ಟಿತೋ?'' ಎಂದು ಮತ್ತೆ ಕೆಣಕಿದ. ಕುಡಿದ ಪೇಯ ಇನ್ನು ನನ್ನ ತಲೆಗೆ ಏರಿರಲಿಲ್ಲವಾದ್ದರಿಂದ ನನಗೂ ಅವನೊಡನೆ ಜಗಳ ಕಾಯುವ ಮನಸ್ಸಿರಲಿಲ್ಲ. ಮೂರು ದಿನ C.L. ಜೊತೆಗೆ ಐದು ನೂರು ರೂಪಾಯಿಗಳನ್ನು ಕಳೆದುಕೊಂಡಿದ್ದರೆ ಜೊತೆಗೆ ಇಲ್ಲಿ ಇವನ ಗೋಳು. ಹೇಳಿದೆ

''ಇಲ್ಲಪ್ಪ, ಅವನೇನೂ ನನ್ನ ಕಳ್ಳು ಬಳ್ಳಿಯಲ್ಲ. ನಮ್ಮ ಊರಲ್ಲಿ ಒಬ್ಬ ಅನಾಥ ಮುದು ಇದ್ದ. ಸತ್ತ. ಊರವರು ಬರಲೇಬೆಕೆಂದು ಒತ್ತಾಯಿಸಿ ಬರೆದಿದ್ದರು. ಹೋಗಿ ಬಂದೆ.''

''ಅಲ್ಲಯ್ಯ, ಸಂಬಂಧಿ ಅಲ್ಲ ಅಂತೀಯ ಅದೇನಪ್ಪ ಮೂರು ದಿನ ರಜಹಾಕಿ ಸೂತಕಕ್ಕೆ ಹೋದಂತೆ ಹೋಗಿದ್ದು. ಖೂನಿ ಆದನಾ?''

''ಅವನೊಬ್ಬ ಬಲು ಘಾಟಿ ಮುದ್ಕ ಸಾಯುವ ಮುಂದೆ ಒಂದು ನಮೂನೆಯ ವಿಲ್ ಬರೆದಿದ್ದ. ಅದರಂತೆ ಹೋಗಿ ಮಂಗ್ಯ ಅಥವಾ ಪ್ಯಾಲಾ ಅನ್ನು ಆಗಿ ಬಂದೆ.''

''ವಿಲ್ ಅಂತೀಯ, ಮಂಗ್ಯ ಆಗಿ ಬಂದೆ ಅಂತೀ ವಿಷಯವೇನು, ಸ್ಪಷ್ಟವಾಗಿ ಹೇಳು ಮಹಾರಾಯ. ಸಾಲ ಕೊಟ್ಟಿದ್ದ್ಯಾ ಅವನಿಗೆ?

''ಅಂತಃದ್ದು ಏನೂ ಇಲ್ಲ ಬಿಡು, ನಿನಗೆ ನೆನಪಿದೆಯಾ, ಹಿಂದೊಮ್ಮೆ ಈ ಮುದ್ಕನ ಬಗ್ಗೆ ಹೇಳಿದ್ದೆ.'' 2-3 ವರ್ಷಗಳ ಹಿಂದಿನ ಮಾತು, ಊರಿಗೆ ಹೊಲ ಮಾರಲು ಹೋಗಿದ್ದಾಗ ಇವನು ಗಂಟು ಬಿದ್ದ. ತರ್ಲೆ ಮುದ್ಕ ಎಲ್ಲಿ ಹೊಲ ಮಾರುವುದಕ್ಕೆ ಕಲ್ಲು ಹಾಗುತ್ತಾನೋ ಎಂದು ಹೆದರಿ ಬೆಣ್ಣೆ ಹಚ್ಚುವ ಧ್ವನಿಯಲ್ಲಿ ಕೇಳಿದ್ದೆ.

''ಏನಪ್ಪಾ ಚನ್ನಾಗಿದ್ದೀಯಾ'' ಎಂದು. ಅದಕ್ಕೆ ಆ ಮುದ್ಕ.

''ಏನು ಚಂದ್ನೋ ತಮ್ಮ. ವಯಸ್ಸಾತು. ಇನ್ನೇನು ಉಬ್ಬು ಇದ್ದ ಕಡೆ ಕೈ ಇಟ್ಟು, ತಗ್ಗು, ಇದ್ದ ಕಡೆ ಕೋಲ ಊರಿಕೊಳ್ತ, ಹೋಗೋದು ಇನ್ನ'' ಎಂದು ಹೇಳಿದ್ದ.

''ಇದರಲ್ಲಿ ಘಾಟಿತನ ಏನು ಬಂತು''- ಎಂದ, ಅಷ್ಟಾಗಿ ವಯಸ್ಸಾಗದ ರೆಡ್ಡಿ.

''ಇನ್ನೊಂದು ಸಲ ಏನು ಮಾಡಿದ್ದ ಗೊತ್ತಾ'' ಎಂದೆ. ನನ್ನ ಉತ್ಸಾಹದ ಬೆಲೂನಿಗೆ ಸೂಜಿ ಚುಚ್ಚಿ ಟುಸ್ ಎನ್ನುವಂತೆ ಹೇಳಿದ.

''ಗೊತ್ತಿಲ್ಲ ಈಗ ಹೇಳು, ಕೇಳುವೆ'' ಎಂದು.

''ಹಿಂದೊಮ್ಮೆ ನಮ್ಮ ಊರಿನ ಹನುಮಂತ ದೇವರ ಗುಡಿಯಲ್ಲಿ ನಡೆಯುತ್ತಿದ್ದ ಒಂಟಿ ಮೇಷ್ಟ್ರ ಶಾಲೆಗೆ ಒಬ್ಬ ಮೇಷ್ಟ್ರು ಬಂದಿದ್ದ. ಬಹು ಸಿಟ್ಟಿನವ. ಹೆಂಡ್ರು-ಮಕ್ಳು ದೂರದ ಊರಲ್ಲಿ ಬಿಟ್ಟು ಬಂದಿದ್ದರಿಂದ್ಲೋ, ಒತ್ತೊತ್ತಿಗೆ ಊಟ ಇಲ್ಲದ್ದರಿಂದ ಹೊಟ್ಟೆಯಲ್ಲಿ ಅಲ್ಸರ್ ಆಗಿದ್ರಿಂದ್ಲೋ, ಹುಡುಗರನ್ನು ದನ ಬಡಿದಂತೆ ಬಡೀತಿದ್ದ. ಒಂದು ದಿನ ಈ ಮುದ್ಕ ಗುಡಿಗೆ ಹೋಗಿ, ಅಲ್ಲಿದ್ದ ಸಮೊಳ ವಾದ್ಯವನ್ನು ತೋರ್ಸಿ, ಮೇಷ್ಟ್ರೇ ನಮ್ಮ ಹುಡುಗರನ್ನು ಹೀಗೆ ಹೊಡೀಬ್ಯಾಡ್ರೀ. ನಮ್ಮ ಹುಡುಗರನ್ನು ನೋಡಿ ನಿಮ್ಮ ಹೆಂಡ್ರ ನೆನಪಾದ್ರೆ, ಈ ವಾದ್ಯ ಬಾರಿಸಿರಿ ಎಂದು ತೋರಿಸಿದನಂತೆ. ಅಂದೇ ಕಡೆ, ಮೇಷ್ಟ್ರು ಶಾಲೆ ಹುಡುಗರನ್ನು ಮತ್ತೆ ಹೊಡೆಯಲಿಲ್ಲ.''

''ಭಲೇ ಘಾಟಿ ಅದಾನಪ್ಪೊ ನಿನ್ನ ಮುದ್ಕ. ಇದ್ರೆ ಹೇಳು ಅವನ ಉಳಿದ ಪ್ರತಾಪಗಳನ್ನ'' ಎಂದು ಕೀಲೀ ತಿರಿವಿದ ರೆಡ್ಡಿ. ನಾನೂ ಇನ್ನೊಂದು ಗಟುಕು ನುಂಗಿ ಮುಂದುವರಿಸಿದೆ.

''ರೆಡ್ಡಿ ನಿನಗೆ ಗೊತ್ತಲ್ಲ. ಹಿಂದಕ್ಕೆ ಹಳ್ಳಿಕಡೆ ಶಾನುಭೋಗರು ಅಂತ ಇರುತ್ತಿದ್ದರು.''

''ಗೊತ್ತಿರದೆ ಏನು? ಈಗಿನ ಪಂಚಾಯಿತಿ ಸೆಕ್ರೇಟ್ರಿಗಳ ಪೂರ್ವಜರು, ಹಳ್ಳಿ ಜನರಿಗೆ ಕಿರುಕುಳ ಕೊಡುವಲ್ಲಿ ಇಬ್ಬರೂ ಎತ್ತಿದ ಕೈ. ವ್ಯತ್ಯಾಸ ಇಷ್ಟೇ. ಬೇಕಾದಾಗ ಶಾನುಭೋಗರು ಊರಲ್ಲಿ, ಮನೆಯಲ್ಲಿ ಸಿಗುತ್ತಿದ್ದರು. ತಮ್ಮ ಹೊಲದಲ್ಲಿ ಬೆಳೆದದ್ದು ಎಂದು ರೈತರು ತರಕಾರಿ, ಹಣ್ಣು, ಕಬ್ಬು, ಕಾಳು ಕಡ್ಡಿ ಕೊಟ್ಟು, ತಮ್ಮ ಕೆಲಸ ಮಾಡಿಕೊಡ್ರಿ ಎಂದು ಕೈ ಮುಗಿದರೆ ಮುಗೀತು. ಅವುಗಳನ್ನು ಒಪ್ಪಿಸಿಕೊಂಡು ತಪ್ಪದೇ ಅವರ ಕೆಲಸ ಮಾಡಿಕೊಡುತ್ತಿದ್ದರು. ಆದರೆ ಅವರ ಈ ಅಪರಾವತಾರವಾದ ಪಂಚಾಯಿತಿ ಸೆಕ್ರೆಟ್ರಿಗಳು ತಾವು ಕೆಲಸ ಮಾಡುವ ಊರಲ್ಲೂ ಇರುವುದಿಲ್ಲ, ತಾಲ್ಲೂಕು, ಕೇಂದ್ರದಲ್ಲೂ ಇರುವುದಿಲ್ಲ. ಜೊತೆಗೆ ಅವರು ತಿನ್ನುವುದನ್ನು ನಮ್ಮ ರೈತರು ಬೆಳೆಯುವುದಿಲ್ಲ'' ಎಂದ ರೆಡ್ಡಿ. ಅದಕ್ಕೆ ನಾನು.

''ಹೌದು, ಸರಿಯಾಗಿ ಹೇಳಿದೆ, ಹಿಂದಿನ ಸಾರಿ ನೀನು ಆದಾಯದ ಸರ್ಟಿಫಿಕೆಟು ತರಲು ಹೋದಾಗ ನಿನಗೆ ಆಗಿರುವ ಸ್ವಂತ ಅನುಭವ ಎಂದು ಕಾಣುತ್ತದೆ. ಇಂತ ಒಬ್ಬ ಶಾನುಭೋಗರು ಈ ಮುದುಕನ ವೃದ್ಧಾಪ್ಯದ ಪಿಂಚಣಿ ಅರ್ಜಿ ಮುಂದೆ ದೂಡಲಿಲ್ಲ.

ಏನಾದರೂ ಇಡು, ಇಲ್ಲದಿದ್ರೆ ಅರ್ಜಿ ಗಾಳಿಗೆ ಹಾರಿ ಹೋಗುತ್ತದೆ ಎಂದರಂತೆ.''

''ಭಲೇ ಇಬ್ಬರೂ ಸರಿಯಾದ ಜೊತೆ ಕೂಡಿದಂಗಾತು''

''ಏನು ಮಾಡುವುದು ಅರ್ಜಿ ಶಾನುಭೋಗರ ಚೀಲದಲ್ಲಿ ಸಿಕ್ಕು ಹಾಕಿಕೊಂಡಿದೆ. ಈ ಮುದ್ಕ ಏನು ಮಾಡಿದ ಗೊತ್ತೇ. ಶಾನುಭೋಗರಿಗೆ ಭಾರೀ ಗಾತ್ರದ ಅದರಲ್ಲೂ ತುಂಬು ಮುರಿದು ಎರಡು ಕುಂಬಳ ಕಾಯಿ ಕೊಟ್ಟನಂತೆ. ಹೆಣಭಾರದ ಇಂತಹ ಒಂದು ಕಾಯಿ ಹೊರುವುದೇ ಕಷ್ಟ. ಅದರಲ್ಲೂ ತುಂಬಿಲ್ಲ ಎರಡು ಕುಂಬಳ ಕಾಯಿಗಳನ್ನು ತಲಾ ಒಂದರಂತೆ ಎರಡೂ ಹೆಗಲ ಮೇಲೆ ಹೊತ್ತು ಅಂದರೆ ಕೈ ಮೇಲೆತ್ತಿಕೊಂಡು, ಬಿಸಲಲ್ಲಿ 4-6 ಮೈಲಿಗಳನ್ನು ಸವೆಸಿ ತನ್ನ ಊರು ಮುಟ್ಟಬೇಕಾದರೆ ಅವರ ಗತಿ ಏನಾಗಿರಬೇಕು.

''ಅಗ್ಧಿ ಚಾಲೂ ಅದಾನೆ ಬಿಡು ನಿನ್ನ ಮುದ್ಕ. ಮುಂದೆ ಶಾನುಭೋಗರು ಯಾವ ರೈತನನ್ನು ಲಂಚಕ್ಕೆ ಕಾಡಿರಲಿಕ್ಕಿಲ್ಲ.''

''ಇಂತಹವು ನೂರೆಂಟು ಅವನ ತರ್ಲೆಗಳು, ಒಮ್ಮೆ ನಮ್ಮ ಊರಲ್ಲಿ ಸೊಸೆಯೊಬ್ಳು ಅತ್ತೆ ಕಾಟ ತಾಳಲಾರದೆ ಮಕ್ಳು ಕಟ್ಟಿಕೊಂಡು, ಇದ್ದ ಒಂದೇ ಕುಡಿವ ನೀರಿನ ಬಾವಿಗೆ ಬಿದ್ಲು. ಮಹಜರ್ ಮಾಡಲು ಬಂದ ದಫೇಧಾರರ ಧಾನವೆಲ್ಲಾ ಲಂಚ ಏನು ಸಿಗುತ್ತದೆ ಎಂಬುದರ ಮೇಲಿತ್ತು. ಬೇಗ ಹೆಣ ಎತ್ತಲು ಬಿಡಲಿಲ್ಲ. ಬೇಸಿಗೆ ಜನಕ್ಕೆ ಕುಡಿಯಲು ನೀರಿಲ್ಲ. ಈ ಘಾಟಿ ಮುದ್ಕ ಬಂದವನೇ ದಫೇಧಾರರನ್ನ ಪಕ್ಕಕ್ಕೆ ಕರೆದು.

''ಸ್ವಾಮೀ ಬಡವರು, ಸ್ವಲ್ಪ ರಾಗಿ, ಅಕ್ಕಿ ಹಾಗೂ ಬೆಲ್ಲ ಕೊಡುತ್ತಾರೆ. ಬೇಗ ಕೆಲಸ ಮುಗಿಸಿ ನೀವೂ ಸಂಜೆ ಆಗುವುದರೊಳಗೆ ಊರು ಮುಟ್ಟಿ'' ಎಂದು ಸಲಹೆ ಮಾಡಿದ. ಕೂಡಲೇ ನ್ಯಾಯ ರಕ್ಷಕನ ಮನ ಕರಗಿತು. ''ಅತ್ತೆ ಕಾಟದಿಂದ'' ಎಂದಿದ್ದ ಕಡೆ ''ಭಯಂಕರ ಹೊಟ್ಟೆ ನೋವಿನಿಂದ'' ಎಂದು, ''ಮನೆಯಲ್ಲಿದ್ದ ಗಂಡ, ಮಾವ ಆಕೆಯನ್ನು ತಡೆಯಲಿಲ್ಲ'' ಎಂಬ ಕಡೆ ''ಅವರು ಊರಲ್ಲಿರಲಿಲ್ಲ' ಹೆಣ್ಣು ಹೆಂಗಸು ಅತ್ತೆ ಏನು ಮಾಡಿಯಾಳು'' ಎಂದು ಬದಲಾಯಿಸಿ ಶವ ಛೇಧನಕ್ಕೆ ಅವಕಾಶ ಕೊಡದೆ ದಫನ್ನಿಗೆ ಹೆಣವನ್ನು ಕೊಟ್ಟಿದ್ದರು.

ಲಂಚದ ಗಂಟು ಕೊಡುವಾಗ ಈ ಮುದ್ಕ, ''ಸ್ವಾಮಿ ಅಕ್ಕಿ ಸ್ವಲ್ಪ ನುಚ್ಚು, ಬೆಲ್ಲ ಸ್ವಲ್ಪ ಅಂಟು'' ಎಂದು ಮುಂದಾಗಿ ಹೇಳೀ ಕೊಟ್ಟಿದ್ದ. ದೊಡ್ಡ ಗಂಟು ನೋಡಿದ ದಫೇಧಾರರಿಗೆ ಅದರಲ್ಲಿ ತೊಂದರೆ ಕಾಣಲಿಲ್ಲ. ಬದಲಿಗೆ ಅಕ್ಕಿ ನುಚ್ಚಾದರೇನಂತೆ, ಇಡ್ಲಿ-ದೋಸೆ ದುಂಡಗಾಗುವುದಿಲ್ಲವೆ? ಕಬ್ಬು ಡೊಂಕಾದರೆ ರಸ ಸೊಂಕೆ ಎಂಬಂತೆ ಬೆಲ್ಲ ಅಂಟಾದರೇನಂತೆ ಸಿಹಿ ಇರುವುದಿಲ್ಲವೆ? ಎರಡನ್ನೂ ಪಡೆದು ಊರಕಡೆ ನಡೆದರು ಶಾನುಭೋಗರು.

ರಾಗಿ ಹಾಗೂ ನುಚ್ಚು ಅಕ್ಕಿಯನ್ನು ಬೇರೆ ಬೇರೆ ಗಂಟಿನಲ್ಲಿ ಕಟ್ಟಿದ್ದರೂ ಒಂದೇ ಚೀಲದಲ್ಲಿ ಹಾಕಿದ್ದ, ಅಂಟು ಬೆಲ್ಲವನ್ನು ಒಂದು ಸಣ್ಣ ಗಡಿಗೆಯಲ್ಲಿ ಹಾಕಿ, ಒಂದು ಊಟದ ಎಲೆಯಿಂದ ಅದರ ಬಾಯಿ ಕಟ್ಟಿದ್ದ ಮುದ್ಕ. ಮನೆ ಮುಟ್ಟುವ ವೇಳೆಗೆ

ಗಂಟುಗಳು ಹೊಡೆದು ಅಕ್ಕಿ-ರಾಗಿ ಏಕಾಗಿದ್ದವು. ಎಲೆ ಹರಿದು ಅಂಟು ಬೆಲ್ಲ ಗಡಿಗೆಗುಂಟೆ ಸೋರುತ್ತಿತ್ತು. ಬೆಲ್ಲ ಹತ್ತಿದ ಅವರ ಯೂನಿಫಾಂನ ಗತಿ ಏನಾಗಿರಬೇಕು. ಅದನ್ನು ತೊಳೆಯಲು, ಅಕ್ಕಿ ಹಾಗೂ ರಾಗಿ ಬೇರ್ಪಡಿಸಲು ಅವರ ಹೆಂಡತಿ ಎಷ್ಟು ಕಷ್ಟ ಪಟ್ಟಿರಬೇಕು. ಮುಂದೆ ಇನ್ನೆಂದೂ ಲಂಚ ತೆಗದುಕೊಳ್ಳದಂತೆ ತನ್ನ ಗಂಡನಿಗೆ ಕಟ್ಟಪ್ಪನೆ ಮಾಡಿರಬೇಕು, ಪಾಪ ಆಕೆ.''

''ಭಲೆ, ಘಾಟಿ ಮುದ್ಕ ಬಿಡು. ಲಂಚ ಕೊಟ್ಟು ಕೆಲಸ ಮಾಡಿಸಿಕೊಂಡ ಹಾಗೂ ಆಗಿರಬೇಕ್ಕು, ಅವನು ಲಂಚ ತೆಗೆದುಕೊಂಡದ್ದಕ್ಕೆ ಶಿಕ್ಷೆ ಕೊಟ್ಟಂಗೂ ಆಗಿರಬೇಕು. ಇರಬೇಕಲ್ಲ ಅವನ ಇಂತಹ ತರ್ಲೆಗಳು, ಹೇಳು'' ಎಂದ,

''ಇದ್ದರೆ ಏನು, ನನಗೇ ಮೂರು ದಿನ ರಜಹಾಕಿ, ಐನೂರು ರೂಪಾಯಿ ಖರ್ಚು ಮಾಡಿಕೊಂಡು ಊರಿಗೆ ಬರುವಂತೆ ಮಾಡ್ದ'' ಎಂದೆ.

''ಅಂತೂ ನಿನ್ನನ್ನೂ ಬಿಡಲಿಲ್ಲ ಅನ್ನು. ಏನು ಮಾಡಿದ.''

''ಹಿಂದೊಮ್ಮೆ ಊರಿಗೆ ಹೋದಾಗ ನೀವು ವಿದ್ಯಾವಂತರು ಕೈಗೆ ಸಂಬಳ, ಮಗ್ಗಲಿಗೆ ಹೆಂಡ್ತಿ ಬಂದಮೇಲೆ ಊರನ್ನೇ ಮರೆಯುತ್ತೀರಿ. ಹುಟ್ಟಿದ ಊರು ಎಂಬ ಅಭಿಮಾನವಿಲ್ಲದವರು'' ಎಂದು ತರಾಟೆಗೆ ತೆಗೆದುಕೊಂಡಿದ್ದ. ನಾನೇನೂ ಕಡಿಮೆ ನಮ್ಮ ಕೆಲಸಗಳ ಒತ್ತಡ ಬಾಸ್ ಕಾಟ, ಇವುಗಳ ಮಧ್ಯೆ ಪ್ರತಿ ಶುಕ್ರವಾರ ಬರುವ ಹೊಸ ಹೊಸ ಸಿನಿಮಾ ನೋಡಲೂ ನಮಗೆ ರಜ ಸಿಗುವುದಿಲ್ಲ. ಇನ್ನು ಊರಿಗೆ ಬರಲು ರಜ ಎಲ್ಲಿಂದ ತರುವುದು ಎಂದು ದಬಾಯಿಸಿದ್ದೆ. ಆದರೆ ಅವನು ತನ್ನ ಪಟ್ಟು ಬಿಡದೆ, ನಾನು ಸತ್ತಾಗ ನೀವೆಲ್ಲಾ ವಿದ್ಯಾವಂತ ಉದ್ಯೋಗಿಗಳು ಊರಿಗೆ ಬರಬೇಕು. ಅದು ಹೇಗೆ ಬರುವುದಿಲ್ಲ ನೋಡುತ್ತೇನೆ ಎಂದೆಲ್ಲಾ ಹಾರಾಡಿದ್ದ. ನಾನೂ ಆ ಕಾಲ ಬರಲಿ ನೋಡುವ ಎಂದು ಸವಾಲು ಎಸೆದಿದ್ದೆ. ಮುಂದೆ ಮರೆತು ಬಿಟ್ಟಿದ್ದೆ. ಆದರೆ ಅವನೇ ಗೆದ್ದ,'' ಎಂದೆ.

''ಅದೆಂಗೆ ಸತ್ತ ಅವನು ಗೆದ್ದ, ನೀನು ಜೀವಂತ ಇದ್ದರೂ ಸೋತೆ'' ಎಂದು ಕೇಳಿದ ರೆಡ್ಡಿ.

''ಈ ಮುದ್ಕ ಸಾಯುವುದಕ್ಕೆ ಸ್ವಲ್ಪ ದಿನಗಳ ಮುಂಚೆ ಒಂದು ಪತ್ರ ಬರೆದು, ಅದನ್ನು ಒಂದು ಕವರ್ನಲ್ಲಿಟ್ಟು, ಅದರ ಮೇಲೆ ನಮ್ಮ ಊರಿನ ಎಲ್ಲಾ ವಿದ್ಯಾವಂತ ಉದ್ಯೋಗಿಗಳ ಹೆಸರುಗಳನ್ನು ಬರೆದು, ಇವರ ಸಮಕ್ಷಮ ಈ ಕವರ್ ಒಡೆಯಬೇಕು. ಕವರ್ ಒಡೆಯದೆ ನನ್ನ ಹೆಣ ಎತ್ತಬಾರದು'' ಎಂದು ಬರೆದು, ಇದನ್ನು ನಮ್ಮ ಊರಿನಲ್ಲಿಯ ಬ್ಯಾಂಕ್ ಮೇನೇಜರ್ ಹತ್ತಿರ ಕೊಟ್ಟಿದ್ದ.

ಮುದ್ಕ ಸತ್ತ ಸುದ್ದಿ ತಿಳಿದ ಕೂಡಲೇ ಈ ಬ್ಯಾಂಕ್ ಮೇನೇಜರ್ ಈ ಪತ್ರ ತಂದು ಅಲ್ಲಿ ನೆರೆದಿದ್ದ ಹಿರಿಯರಿಗೆ ಕೊಟ್ಟರಂತೆ. ಅದರ ಮೇಲಿದ್ದ ಮುದ್ಕನ ಬರಹ ಓದಿದ ಈ ಹಿರಿಯರಿಗೆ ಹತ್ತಾರು ಯೋಚನೆಗಳು ಬಂದವು. ಕೆಲವರೆಂದರು ಇದರಲ್ಲಿ ಅವನ ವಿಲ್ ಇರಬೇಕು, ಊರ ಅಭಿವೃದ್ಧಿಗೆ ದೊಡ್ಡ ಮೊತ್ತದ ದಾನ ನೀಡಿದ್ದಾನೆ ಎಂದು.

ಉಳಿದವರೆಂದರು ಅವನಲ್ಲಿ ಏನಿತ್ತು ದಾನಮಾಡಲು, ಮತ್ತೂ ಕೆಲವರೆಂದರು ಇದ್ದುದ್ದೆಲ್ಲಾ ಅವನ ಹೆಣದ ಮೈಮೇಲೆ ಇದೆಯಲ್ಲಾ ಎಂದು'' ಅಂತೂ ನೋಡಿಬಿಡುವ ಎಂದು ನಾವು 10-12 ಜನ ವಿದ್ಯಾವಂತ ಉದ್ಯೋಗಿಗಳಿಗೆ, ಈ ಕೂಡಲೇ ಬರಲೇಬಕೆಂದು ತಂತಿ ಕಳುಹಿಸಿದ್ದರು. ಹೋಗಿ ಬಂದೆ.''

''ಅದಿರಲಿ, ಮುದ್ಕ ಊರ ಅಭಿವೃದ್ಧಿಗೆ ಏನು ಕೊಟ್ಟುಹೋದ'' ಎಂದು ಕುತೂಹಲ ತಡೆಯದೆ ರೆಡ್ಡಿ ಕೇಳಿದ.

''ಏನ ಕೊಡುತ್ತಾನೆ ತರ್ಲೆ ಬಿಟ್ರೆ, ವಿದ್ಯಾವಂತರು ಎಲ್ಲರೂ ನನ್ನ ಶವಸಂಸ್ಕಾರಕ್ಕೆ ಬರಬೇಕು ಎಂಬುದೇ ನನ್ನ ಕೊನೆಯ ಆಸೆ ಎಂದು ಬರೆದಿದ್ದ ಅಷ್ಟೇ.''

''ಅಂತೂ ನಿನ್ನ ಮೂರು ದಿನದ C.L. ಹಾಗೂ ಐದುನೂರು ರೂಪಾಯಿ ಖರ್ಚು ಮಾಡಿಸಿದ ಅನ್ನು ಘಾಟಿ ಮುದ್ಕ'' ಎಂದು ನಕ್ಕ ರೆಡ್ಡಿ ನಾನೂ ಧ್ವನಿಗೂಡಿಸಿದೆ.

''ಜೊತೆಗೆ ಊರಲ್ಲಿ ಮೂರುದಿನ ಒಣದಿನಗಳನ್ನು ಕಳೆಯುವಂತೆ ಮಾಡಿದ್ದ'' ಎಂದು ಬೆಪ್ಪನಂತೆ ನಕ್ಕೆ.

---

# ಹೊಸಗನ್ನಡಕ್ಕೆ ಹೊಸ ಪದಗಳು

**ಗೌಡಿಕೆ:** ತೂಕಡಿಕೆಗೆ ಪರ್ಯಾಯ ಪದ

*ಉದಾ: ''ಮೂರು ದಿನದಿಂದ ನನಗೆ ನಿದ್ದೆ ಇರಲಿಲ್ಲಾರಿ. ನಿನ್ನೆ ಆ ಡಾಕ್ಟ್ರು - ಥೇಟ್ ಧನ್ವಂತರಿ ಆತ- ಒಂದು ಗುಳಿಗೆ ಕೊಟ್ಟ ನೋಡಿ, ಐದು ನಿಮಿಷದಲ್ಲೇ ಗೌಡಿಕೆ ತಾನೇ ತಾನಾಗಿ ಬಂತು''*

**ಜೋಗೀಂದರತ್ವ:** ಅತಿಯಾದ ಸ್ವಾಮಿ ನಿಷ್ಠೆ

*ಉದಾ: ''ನಮ್ಮ ಜಿಮ್ಮಿ ಎಂಥಾ ಒಳ್ಳೇ ನಾಯಿ ಅಂತೀರಿ. ಮನೆ ಕಾಯಬೇಕಾದರೆ, ಎಷ್ಟು ಜೋಗೀಂದರತ್ವ, ಏನು ಕಥೆ''*

**ಲಲ್ಲೂಸ್ಥಿತಿ:** ಸ್ಥಿತ ಪ್ರಜ್ಞತೆ

*ಉದಾ: ''ಕಷ್ಟ ಮನುಷ್ಯನಿಗೆ ಬರದೇ ಮರಕ್ಕೆ ಬರುತ್ತೇನಮ್ಮ. ಬಂದದ್ದೆಲ್ಲವನ್ನೂ ಲಲ್ಲೂ ಸ್ಥಿತಿಯಿಂದ ತಡಕೋಬೇಕು''*

**ಸ್ಕಾಂಕೃತಿ:** ಪ್ರಾಚೀನ ಭಾರತದ ಸಂಸ್ಕೃತಿಯ ಆಧುನಿಕ ರೂಪ

*ಉದಾ: ಆಗತ್ಯವಿಲ್ಲ*

**ಇಬ್ಬಿಮಾತು:** ಹುರುಳಿಲ್ಲದ ಪ್ರಲಾಪ

*ಉದಾ: ''ನಮ್ಮ ಪಿಂಕಿ ನೋಡಿ, ಇನ್ನೂ ಎರಡು ವರ್ಷ ತುಂಬಿಲ್ಲ ಆಗಲೇ ಎಷ್ಟು ಮುದ್ದುಮುದ್ದಾಗಿ ಬಾಯಿತುಂಬಾ ಇಬ್ಬಿ ಮಾತು ಆಡ್ತಾಳೆ ಅಂತ!''*

# ಹಾಗೇ ಆಗಬೇಕು! ನಾನಗಬೇಕು! ನೀನಳಬೇಕು!

**- ವಿಜಯಾ ಸಚ್ಚಿದಾನಂದ**

ಅದೇನು ಠೀವಿ ಅಂತೀನಿ ನಂ ಗುಂಡಂದು ಆಗಿನ ಕಾಲದಲ್ಲಿ ಠೀವೀಂದ್ರೆ ಗುಂಡ ಗುಂಡಾಂದ್ರೆ ಠೀವಿ ಅನ್ನೋತರಹ. ಅದೂ ಹುಡುಗಿಯರ ಕಾಲೇಜಿನ ಮುಂದೆ ಹೋಗೂವಾಗ್ಲಂತೂ ನೋಡ್ಬೇಕು ಅವನನ್ನು. ಅಂದ್ರೆ ಅವನು ಇರ್ತಾಯಿದ್ದದ್ದು ಯಾವಾಗ಼್ೂ ಅಲ್ಲೇನೇ ಅನ್ನಿ!

ಇನ್ವರ್ಟೆಡ್ ಇಂಗ್ಲೀಷ್ 'ವಿ' ಆಕಾರದಲ್ಲಿ ಬೆಳಸಿದ ಪೆನ್ಸಿಲ್ ಥಿನ್ ಮೀಸೇನ ಹೆಬ್ಬೆರಳು ಮತ್ತು ತೋರ ಬೆರಳಿನಿಂದ ಆಗಾಗ್ಗೆ ತೀಡ್ಕೋತಾ, ಸಿಜರ್ಸ್ ಸಿಗರೇಟೊಂದನ್ನು ತುಟಿಯಂಚಿನಲ್ಲಿ ಡ್ಯಾಂಗಲ್ ಮಾಡ್ತಾ 'ದಂ' ಎಳೀತಾ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಓಡಾಡ್ತಾಯಿದ್ರೆ ಕಾಲೇಜಿನಲ್ಲಿ ಮರದ ಕೆಳಗೆ ಕೂತು ಹರಟೆ ಹೊಡೀತಾ ಕಡ್ಲೆಕಾಯಿ ಸೀಬೇ ಹಣ್ಣು ತಿಂತಾ ಕಾಲಕಳೀತಾಯಿರೋ ಹುಡಗಿಯರ ಕಣ್ಣೆಲ್ಲಾ ತನ್ನಕಡೆಗೇಂತ ಅಂದ್ಕೊಡ್ಡಿದ್ದ ಅಪಾರ ಅಭಿಮಾನಿ!

ತಾನೇನು ಕ್ಲಾರ್ಕ್ ಗೇಬಲ್‌ಗಿಂತ (ಆಗಿನ ಕಾಲದ ಹುಡುಗಿಯರ ನೆಚ್ಚಿನ ಇಂಗ್ಲೀಷ್ ನಟ) ಯಾವುದರಲ್ಲಿ ಕಮ್ಮಿ ಅವನ ಹಾಗೆ ರೂಪಿದೆ, ಜಾಣತನ ಇದೆ, ಆಕ್ಟಿಂಗ್ ಟ್ಯಾಲೆಂಟೂ ಇದೆ. ಏನೋ ಅಪ್ಪಿ ತಪ್ಪಿ ಯಾವುದೂ ಹಿಂದಿನ ಜನ್ಮದ ಕರ್ಮದಿಂದಾಗಿ ಹೀಗೆ ಆಗಿದ್ದಾನೆ. ಅಷ್ಟೆ! ಆದರೆ ಅವನಿಗೆ ತನ್ನಲ್ಲಿ ಕಾಣ್ತಾಯಿದ್ದದ್ದು ಒಂದೇ ಕೊರತೆ. ಕ್ಲಾರ್ಕ್ ಗೇಬಲ್ ನಷ್ಟು ಸೊಗಸಾಗಿ ಇಂಗ್ಲೀಷ್‌ನಲ್ಲಿ ಮಾತನಾಡೋದಕ್ಕೆ ಬರೋಲ್ಲವಲ್ಲಾ! ಅದಕ್ಕೂ ಒಂದು Solution ಇತ್ತು ಅವನ ಹತ್ತಿರ ಅನ್ನಿ. ಇಂಗ್ಲೀಷ್ accent ಹಾಕ್ಬಿಟ್ಟೇ ಕನ್ನಡ ಮಾತಾಡ್ಬಿಟ್ರಾಯ್ತು ಹುಡಗಿಯರನ್ನೆಲ್ಲಾ ತನ್ನೆಡೆಗೆ ಅಯಸ್ಕಾಂತದಂತೆ ಎಳೆದು ಕೊಂಡು ಬಿಡಬಹುದು ಅನ್ನೋದು ಒಂದು ನಂಬಿಕೆ.

ಗರಿಗರಿಯಾಗಿ ಇಸ್ತ್ರಿಮಾಡಿದ ಅವನ ಶರ್ಟು ಷರಾಯಿಗಳು ವರ್ಣನೆಗೆ ಅರ್ಹವೇ ಸರಿ. ಅದೂ ಮಿಕ್ಕ ನಾವುಗಳೆಲ್ಲಾ ಕಾಲೇಜಿಗೆ ಸುಕ್ಕು ಸುಕ್ಕಾದ ಧೋತಿ, ಪಾಯಿಜಾಮಗಳನ್ನು ಕಟ್ಟಿಕೊಂಡು ಹೋಗುತ್ತಿದ್ದಾಗ. ಮನೇಲಿ ಇದ್ದಷ್ಟು ಹೊತ್ತು ಇಸ್ತ್ರಿ ಪೆಟ್ಟಿಗೇಯಿಂದ ಉಜ್ಜಿ ಉಜ್ಜಿ ತನ್ನ ಬಟ್ಟೆಗಳನ್ನೆಲ್ಲಾ ಇಸ್ತ್ರಿಸುತ್ತಿದ್ದನ್ನ ಕಂಡು ಅವರಪ್ಪ ನಖ ಶಿಖಾಂತರ ಕೆರಳಿ ''ಥೂ! ಕೆಲ್ಸಕ್ಕೆ ಬಾರದ ಮೂದೇವಿ! ಮೂರ್ಹೊತ್ತೂ ಹೀಗೆ ಬಟ್ಟೆಗಳ ಮುಂದೆ ನಿಂತ್ಕೊಂಡು ಕಾಲ ಕಳೀತಾಯಿದ್ರೆ ನೀನು ಓದು ಬರ್ಹ ಮಾಡ್ದ್ಹಾಗೆ ಇದೆ. ಬರ್ತಾ ಬರ್ತಾ ಅಲಂಕಾರ ಪುಟ್ಟಾಮಿ ಆಗ್ತಾಯಿದಿಯಲ್ಲೊ! ಇನ್ನೊಂದು ದಿನ ನೀನು ಆ ಪೆಟ್ಟಿಗೆ (ಇಸ್ತ್ರಿ) ಮುಟ್ಟಿದ್ದು ನೋಡಿದ್ರೆ ನಿನ್ನ ಕೈ ಮುರಿದು ಹಾಕ್ಬಿಟ್ತೇನೀ!'' ಅಂತ ಯದ್ವಾತದ್ವಾ

ಬೈದಿದ್ದಲ್ಲದೆ ಹೆಂಡ್ತೀನ ಕರೆದು ''ಇದನ್ನು ಈ ಕ್ಷಣವೇ ತೊಗೊಂಡ್ಹೋಗಿ ಎಲ್ಲಾರ್‍ನೂ ಎಸಿ. ಇಲ್ಲ ನಿನ್ನ ಸುಪುತ್ರನಿಗೆ ಸಿಕ್ಕದ ಹಾಗೇ ಬೀಗ ಹಾಕಿ ಬಡಿ! ಇಲ್ದೇ ಇದ್ರೆ ನಿನ್ನ ಅಣ್ಣತಮ್ಮಂದಿರ ತರಹ ಇವನೂ ವಿದ್ಯ ಬುದ್ಧಿ ಇಲ್ಲದ ಕಾಡು ಮನುಷ್ಯನಾಗ್ಬಿಟ್ತಾನೆ ಅಷ್ಟೆ!'' ಅಂತ ಹೇಳಿ ದುರು ದುರು ನೋಡಿದ್ರಂತೆ. ತನ್ನ ಅಣ್ಣತಮ್ಮಂದಿರು ಇವನಿಂದಾಗಿ ಕಾಡು ಮನುಷ್ಯರಂತ ಅನ್ನಿಸ್ಕೊಂಡ್ರಲ್ಲಾ ಅನ್ನೊ ಕೋಪಕ್ಕೆ ಇವನಿಗೆ ತಿಂಡಿ ಕಾಫಿ ಒಂದೂ ಕಾಣಿಸ್ದೆ ಮನೆಯಿಂದ ಅಟ್ಟಿದ್ದರು ಅವನ ಮಾತೋಶ್ರೀ. ಇದನ್ನ ಖುದ್ದಾಗಿ ಹೇಳಿದ್ದ ಗುಂಡ ಕ್ಯಾಂಟೀನಲ್ಲಿ ಗಡ್ಡದ್ದಾಗಿ ಮಸಾಲೆದೋಸೇ, ಇಡ್ಲಿ ಸಾಂಬಾರ್ ತಿನ್ನುತ್ತಾ.

''ಅದೇನು ಗುರು! ಅದ್ಹ್ಯಾಗೆ ಇಷ್ಟೊಂದು ಗರಿಗರಿಯಾಗಿದೆ ನಿನ್ನ ಶರ್ಟು?'' ಅಂದೆ ಆಶ್ಚರ್ಯದಿಂದ.

''ನನ್ನ ತಲೆನಲ್ಲೂ ನಿಂದ್ರತರಹ ಜೇಡಿಮಣ್ಣು ತುಂಬಿದೆ ಅಂದ್ಕೊಂಡ್ಯಾ? ನನ್ನದು ಜಾಣಾಕ್ಷ ಬುದ್ಧಿ ಮರಿ! ಅಮ್ಮಂಗೆ ಅಜ್ಜಿಗೆ ಕಾಣ್ದಾಗೆ ಬಚ್ಚಲ ಮನೆಯಿಂದ ಚೊಂಬಿನಲ್ಲಿ ಮರಳೂ ನೀರು ತುಂಬಿ ಬಟ್ಟೆ ಮೇಲೆ ಉಜ್ಜಿ ಇಸ್ತ್ರಿ ಮಾಡೀದೀನೋ'' ಅಂತ ಜಂಭದಿಂದ ಹೇಳಿಕೊಂಡ.

''ಥೂ! ಹಾಳಾದೋನೇ! ಈ ಬುದ್ಧಿನೆಲ್ಲಾ ಓದಿನಲ್ಲಾದರೂ ಖರ್ಚುಮಾಡಿದರೆ ಉದ್ಧಾರ ಆಗ್ತೀ ಕಣೋ! ಅಂತ ಗೊಣಗಿಕೊಂಡಿದ್ದೆ.

ಅವನ ಆ ಕ್ರಾಪಿನ ವೈಖರಿ ಏನ್ಹೇಳೋಣ! ಎಲ್ಲರಂತೆ ಸ್ವಲ್ಪ ನೀರೋ ಎಣ್ಣೆಯೋ ಹಚ್ಚಿ ಬಾಚಣಿಗೆಯಿಂದ ಅಡ್ಡಾದಿಡ್ಡ ಎಳೆದು ಕೊಂಡರೆ ಸಾಲದಂತೆ ತಡೀರಿ ಕೊಂಚ! ಅವನು ಬಾಚುತ್ತಾಯಿದ್ದ ವಿಧಾನಾನ ಅವನು ಹೇಳಿದ ಹಾಗೇ ಹೇಳಿಬಿಡುವ ಸಾಹಸ ಮಾಡ್ತೀನಿ.

ಮೊದಲ ಹಂತ ದಟ್ಟವಾದ ಕೂದಲನ್ನು ಸ್ವಲ್ಪ ನೀರಿನಿಂದ ಒದ್ದೆ ಮಾಡಬೇಕು. ಗಮುಗಮಿಸುವ ಕೆಂಪೆಣ್ಣೆಯನ್ನು ಬುಡದಿಂದ ತಿಕ್ಕಬೇಕು.

ಎರಡನೇ ಹಂತ-ಎಡಗೈ ತೋರ ಬೆರಳು ಮತ್ತು ಹೆಬ್ಬೆರಳಿನಿಂದ ಕೂದಲನ್ನು ಮೆಟ್ಟಿಲು ಮೆಟ್ಟಿಲಂತೆ ಮಾಡಿ ಹೆಣ್ಣು ಹುಡುಗಿಯರು ಹಾಕಿ ಕೊಳ್ಳುವ ಸೈಡ್ ಕ್ಲಿಪ್ಪಿನಿಂದ ಭದ್ರಿಸಬೇಕು.

ಮೂರನೆ ಹಂತ - ಜೋಪಾನವಾಗಿ ಮಾಡಿದ ಮೆಟ್ಟಿಲುಗಳು ಅಸ್ತವ್ಯಸ್ಥವಾಗದಂತೆ ದಪ್ಪ ಟವಲೊಂದನ್ನು ಮಡಚಿ ಒತ್ತಿ ಇಡಬೇಕು. ಕೊನೆಯದಾಗಿ ದಪ್ಪ ಟವಲಿನ ಮೇಲೆ ದಪ್ಪನೆಯ Wren and Martin ಗ್ರಾಮರೋ ಅಥವಾ ಡಿಕ್ಷನರಿಯ ಭಾರವನ್ನು ಹೇರಿ ಇಡಬೇಕು. ಹತ್ತು ನಿಮಿಷದ ನಂತರ ಅವೆರಡನ್ನೂ ಕತ್ತೆಸೆಯಬೇಕು ಆಗ ಕೂದಲು ಸೊಗಸಾಗಿ ಪ್ಲಾಸ್ಟರ್‌ತರಹ ಮೆಟ್ಲು ಮೆಟ್ಲಾಗೆ (Steps) ಅಂಟಿಕೊಂಡಿರುತ್ತಂತೆ.

ನಾಲ್ಕನೆ ಹಂತ-ಮುಂದಿನ ಒಂದು ಸಣ್ಣ ಗೊಂಚಲ ಕೂದಲನ್ನು ಜೋಪಾನವಾಗಿ ತೆಗೆದು ಸುರಳಿ ಸುತ್ತಿ ಎಡ ಕಣ್ಣಿನ ಹತ್ತಿರ ಹಣೆಯ ಮೇಲೆ ಇಳಿಸಿ ಕೊಳ್ಳಬೇಕು. ಅಲ್ಲಿಗೆ

Operation hair Style ಮುಗಿದಂತೆಯೇ! ಅದು ಕ್ಲಾರ್ಕ್ ಗೇಬಲ್ ಮಾಡಿಕೊಳ್ಳುವ ಹೇರ್ ಸ್ಟೈಲ್ ಅಂತ ಅವನ ವಾದ. ಆದರೆ ನಮಗೆಲ್ಲಾ ತಮಿಳು ಸಿನಿಮಾ ಹೀರೋ ತರಹ ಕಾಣ್ತಾಯಿದ್ದ. ಹುಷಾರ್! ಹಾಗೆನಾದ್ರೂ ನೀವು ಅವನ ಹತ್ತಿರ ಹೇಳಿದ್ರೆ ನಿಮಗೆ ಗ್ರಹಚಾರ ಕಾಣಿಸ್ಬಿಡೋವ ಅಷ್ಟೆ!

ಹೀಗೆ ಮಹಾರಾಣಿ ಕಾಲೇಜಿನ ಮುಂದೆ ನಿಂತು ಪೊದೆಸಂದಿಯಿಂದ ಹುಬ್ಬುಕುಣಿಸಿ ಹಲ್ಕಿರಿದೊ, ಕಣ್ಣು ಹೊಡೆಯುತ್ತಾನೋ ಆ ಲಲನಾಮಣಿಯರ ದೃಷ್ಟಿ ತನ್ನೆಡೆಗೆ ಎಳೆದುಕೊಳ್ಳೋ ಪ್ರಯತ್ನ ಮಾಡ್ತಿದ್ರೆ ನಾವುಗಳು ಸಧ್ಯ! ಅವನೆದರಿಸಬೇಕಾದ ಕಪಾಳ ಮೋಕ್ಷಕ್ಕೋ ಚಪ್ಪಲಿ ಮೋಕ್ಷಕ್ಕೋ ಹೆದರಿ ಅಲ್ಲಿಂದ ಪರಾರಿಯಾಗುತ್ತಿದ್ದೆವು. ಪಾಪ! ಇಷ್ಟಾದರೂ ಯಾರು ಅವನ ಬಲೆಗಂತೂ ಬಿದ್ದಿರಲಿಲ್ಲ. ಅವನ ಉತ್ಸಾಹಕ್ಕೆ ತಣ್ಣೀರೆರಚಬಾರದೂಂತ ಕೆಲವೊಮ್ಮೆ ನಾವುಗಳು ''ಗುಂಡಾ! ಅವಳು ನಿನ್ನ ಕಡೆನೋಡಿ ನಕ್ಕಳು ಕಣ್ನೋ! ''ನಿನ್ನನ್ನೇ ನೋಡ್ತಾಯಿದ್ದಾಳೆ ಕಣೋಂತ'' ಹೇಳ್ತಾ ಚೇಷ್ಟೆ ಮಾಡ್ತಾಯಿದ್ದದ್ದೂ ಉಂಟು.

''ಕು.ಕ್ಕೂ-ಕುಕ್ಕೂ'' ಅಂತ ಎಲ್ಲಾರೂ ಅವಳನ್ನ ಛೇಡಸ್ತಾಯಿದ್ರು, ಅವಳ ನಿಜವಾದ ಹೆಸರು ಯಾರಿಗೂ ಗೊತ್ತಿರಲಿಲ್ಲ. ಬಹುಶಃ ಉತ್ತರದಿಂದ ಅವರ ಕುಟುಂಬವೆಲ್ಲಾ ವಲಸೆ ಬಂದಿದ್ದರೇನೋ! ಚೂಡಿದಾರ ಕಮೀಜ಼ (ಅವಾಗ ಪೈಜಾಮ ಶರ್ಟು ಅನ್ನೋವು) ಹಾಕಿ ಸೈಕಲ್ ಹತ್ತಿ ಕಾಲೇಜಿನ ಅಪರಣಕ್ಕೆ ಬಂದ್ಲೂ ಅಂದ್ರೆ ಮಾಡ್ತಾಯಿದ್ದೋರು ಮಾಡೋ ಕೆಲಸ ಬಿಟ್ಟು ಅವಳನ್ನೇ ದುರುಗುಟ್ಟಿ ನೋಡ್ತಾಯಿದ್ರೂ. ನಾನಂತೂ ಅವಳನ್ನು ದೂರದಲ್ಲಿ ಕಾಣ್ತಿದ್ದಾಗೆ ಹಣೆ ಮೇಲಿನ ವಿಭೂತಿ ಅಳಿಸಿ ಕಿವಿ ಹಿಂದೆ ಸಿಕ್ಕಿದ್ದ ದೇವರ ಪ್ರಸಾದದ ಹೂವನ್ನ ಜೋಬಿಗೆ ಇಳಿ ಬಿಡ್ತಾಯಿದ್ದೆ. ಅವಳನ್ನು ನೋಡೋದೂ ಅಂದ್ರೆ ಕಣ್ಣಿಗೇ ಒಂದು ತರಹ ಹಬ್ಬ, ಗುಂಡನಿಗೆ ಈಗ ಸುಗ್ಗಿ. ಅವಳು ಎಲ್ಲಿದ್ರೆ ಇವನು ಅಲ್ಲಿ ಕಾಣಸ್ಕೊಳೋಕ್ಕೆ ಶುರು ಮಾಡಿದ್ದ. ಅವಳ ಪೈಜಾಮದ ವೇಷಕಂಡು ಅವಳನ್ನೇನಾದ್ರೂ ಹಾಗೇ ಹೀಗೆ ಮಾತಡ್ಸಿಬಿಟ್ರೋ ಆಟಂ ಬಾಂಬಿನಂತೆ ಸಿಡಿದು ನಿಮ್ಮನ್ನ ತದಕಿ ಹಾಕಿ ಬಿಡೋ ಛಾತಿವಂತೆ. ಎಷ್ಟೋ ಹುಡುಗರನ್ನು ಹಾಗೆ ಮಾಡ್ಬಿಟ್ಟಿದ್ದಳೂ ಸಹ. ಎಲ್ರೂ ಅವಳಿಂದ ದೂರ ದೂರವಾಗಿ ಇರ್ತಾಯಿದ್ರು,

ಕೆಲವು ದಿನಗಳ ಬಳಿಕ ಹಾಗೇ ಕಬ್ಬನ್ ಪಾರ್ಕ್ ಹತ್ತಿರ ಬರ್ತಾಯಿರಬೇಕಾದ್ರೆ ಎದುರಿಗೆ ಕಂಡಿದ್ದು ಯಾರನ್ನಾಂತೀರಿ! ಆಶ್ಚ್ಯಾರ್ಯ! ನೀವು ನಂಬಲಾರಿರಿ! ಗುಂಡ! ಮತ್ತು ಅವರ ಜೊತೆ ಆ 'ಕುಕ್ಕೂ', ಅವನ ಕೈ ಅವಳ ಸೊಂಟ ಬಳಸಿದೆ ಅವಳ ಕೈ ಅವನ ಭುಜ. ಸರಿ! ಬಿಟ್ಟ ಬಾಯಿ ಬಿಟ್ಕೊಂಡು ಕಣ್ಣು ಮಿಟಕಿಸದೆ ನೋಡ್ತಾ ನಿಂತ್ಕೊಂಡೆ. ಇನ್ನೇನು ''ಗುಂಡಾ'' ಅಂತ ಕೂಗ್ಬೇಕು ಇವನು ಬಾಯ್ಮೇಲೆ ಬೆರಳಿಟ್ಕೊಂಡು ಕೂಗ್ಬೇಡಾಂತ ಸನ್ನೆ ಮಾಡಿ, ಹಾಳಾದೋನು. ಅವಳ ಜೊತೆಗೆ ಹೊರಟ್ಹೋದ್ದು ನೆನಸಿಕೊಂಡ್ರೆ ಈಗ್ಲೂ ಕೋಪ ಬಂದು ಹಲ್ಲು ಕಡಿಯೋಣಾಂತ ಅನಿಸುತ್ತೆ.

ಗುಂಡನ ದರ್ಶನ ಅಪರೂಪವೇ ಆಗ್ಹೋಯ್ತು. ಒಂದಿನ ಚಾಮಿ ಕ್ಲಾಸಿಗೆ ಬಂದೋನೇ ಹೇಳ್ದ. ''ಲೋ! ಗುಂಡನ್ನ ನೋಡಿದ್ನಮ್ಮ! M.T.R. ನಲ್ಲಿ ಕೂತಿದ್ರು. ಬಂಬಾಟಾಗಿದ್ದಾಳಲ್ಲಮ್ಮಾ! ಜೊಲ್ಲು ಸುರಿಸೋ ಹಾಗೇ ಮಾಡ್ದ. ಏನಮ್ಮಾ! ಇಬ್ರೂ ತಿಂದಿದ್ದೇ ತಿಂದಿದ್ದು! ಟೇಬಲ್ ಭರ್ತಿ ತಿಂಡಿ ಹರಡಿಕೊಂಡಿದ್ರು. ನನ್ನ ಕಂಡೂ ಕಾಣದ ಹಾಗೆ ನಟಿಸ್ದ ಹಾಳಾದೋನು!.

ಮರುದಿನ ಚೇತಿ ಅವರನ್ನು ಕಂಡಿದ್ನಂತೆ, ಕಬ್ಬನ್ ಪಾರ್ಕ್ ರೆಸ್ಟೋರಾದಲ್ಲಿ ತಿಂತಾ ಕೂತಿದ್ರಂತೆ. ''ಅದಿನ್ನೆಷ್ಟು ತಿಂತಾರೋ! ತಿಂಡಿಗಳನ್ನ ತರ್ಸಿದ್ದೂ ತರ್ಸಿದ್ದೇ ತಿಂದಿದ್ದೂ ತಿಂದಿದ್ದೇ'' ಅಂತ ಹೇಳ್ದ. ಹುಡ್ಗಿ ಏನು ಜೋರಾಗಿದ್ದಾಳಲ್ಲೋ! ಒಳ್ಳೆ ಶಿಲಾಬಾಲಿಕೆ ಕಣ್ರೋ!''

''ಬ್ಯಾಂಕ್ ಗೀಂಕ್ ಏನಾದ್ರೂ ದರೋಡೆ ಮಾಡಿದಾನೇನ್ರೋ! ಯಾವಾಗಲೂ ಹೋಟಲುಗಳಲ್ಲಿ ಕೂತಿರ್ತಾರೆ. ಲೆಖ್ಖವಿಲ್ಲದಷ್ಟು ತಿಂತಾ ಕೂತಿರುತ್ತಾರಲ್ಲೋ'' ಅಂತ ಇನ್ಯಾರೋ ಗೊಣಗಿದ್ದು ಕೇಳಿದೆ. ನನ್ನ ಕಣ್ಣಿಗಂತೂ ಅವನು ಬಿದ್ದೇಯಿರಲಿಲ್ಲ.

''ಎಲ್ಲೋ Part-time ಕೆಲ್ಸ ಬೇರೆ ಮಾಡ್ತಾಯಿದಾನಂತೆ'' ಚಂದಿನೇ ಹೇಳ್ದ ''ಅಪ್ಪ ಕೊಡ್ತಾಯಿದ್ದ pocket money ಏನೂ ಸಾಲ್ತಾಯಿರಲಿಲ್ಲವಂತೆ ಅಮ್ಮ ಅಡಿಗೆ ಮನೇಲಿ ಇಟ್ಟಿದ್ದ ಆಪದ್ಧನವೆಲ್ಲಾ ಮಾಯವಾಗ್ತಾ ಬಂತಂತೆ. ಕೊನೆಗೆ ಅಜ್ಜಿ ಮಡೀ ಪೆಟ್ಟಿಗೆ ಹಣಾನೂ ಮಾಯವಾಯ್ತಂತೆ. ಅಪ್ಪನ ಜೇಬಿನ ದುಡ್ಡೆಲ್ಲಾ ಮಾಯವಾಗ್ತಾ ಬಂದಾಗ ಮೊದಲ ಅನುಮಾನ ಕೆಲಸದೋಳ ಮೇಲೆ ತಾನೆ. ಕೆಲಸದೊಳನ್ನ ಓಡ್ಸಿದ ಮೇಲೂ ಜೇಬು ಖಾಲಿ ಆಗ್ತಾ ಬಂತಂತೆ. ಆವಾಗ ಗುಂಡನ ಮೇಲೆ ಗುಮಾನಿ ಬಂದು ಅವನನ್ನು ಯದ್ವಾತದ್ವಾ ಬೈದು ಮನೆ ಬಿಟ್ಟು ಓಡ್ಸಿ ಬಿಡ್ತೀನಿಂತ ಅಂದ್ರಂತೆ. ಇನ್ನೇನು ತಾನೇ ಮಾಡ್ತಾನೆ? ಹೋಟಲಿನ ಖರ್ಚಿಗೂ ಆಗಾಗ್ಗೆ ಕೊಡೋ present ಗೂ ಹಣ ಬೇಕೇ ಬೇಕಲ್ವೇ? ಓದಿಗೆ ತಿಲಾಂಜಲಿ ಕೊಟ್ಟೇ ಬಿಟ್ನೇನೋ ಅಂತ ನನಗೆ ತುಂಬಾ ದುಃಖ ಆಯ್ತು.

ಗುಂಡಾ ಒಂದು ದಿನ ನನ್ನ ನೋಡೋಕ್ಕೆ ಅಂತ್ಲೇ ಬಂದ. ಚೌರ ಕಾಣದ ಮುಖ ಕೊಳಕಾದ ಇಸ್ತ್ರಿ ಇಲ್ಲದ ಪೈಜಾಮ ಜುಬ್ಬ, ದಿಲೀಪ್ ಕುಮಾರ ದೇವದಾಸನ ಪಾರ್ಟ್ ಮಾಡಿದ್ದ ನೋಡಿ ಅದೇ ಹೆಸರಿನ ಹಿಂದಿ ಸಿನೆಮಾದಲ್ಲಿ, ಅದೇ ತದ್ರೂಪ. ಆದ್ರೆ ಬಾಟ್ಲಿ ಒಂದಿರಲಿಲ್ಲ ಕೈಲಿ. ನನ್ನ ನೋಡ್ತಿದ್ದ ಹಾಗೆ ಒಂದು ನಿಟ್ಟುಸಿರು ಬಿಟ್ಟು ಚಾಪೆ ಮೇಲೆ ಕುಕ್ಕರಿಸಿದ. ಭಗ್ನ ಪ್ರೇಮ ರೋಲ್ ಚೆನ್ನಾಗಿ ಒಪ್ತಾನೂ ಇತ್ತು. ''ಏನಾಯ್ತೋ'' ಅಂತ ಕಳವಳಿಯಿಂದ ಕೇಳ್ದೆ.

''ಎಲ್ಲೋ ಓಡಿ ಹೋದ್ಲೂ ಕಣೋ! ಬೊಂಬಾಯಿಗೆ ಹೋಗ್ತೀನಿ ಸಿನಿಮಾದಲ್ಲಿ ನನ್ನ ಅದೃಷ್ಟ ಟ್ರೈ ಮಾಡ್ಬೇಕಂತ ಇದ್ದೀನಿ. ಅಂತ ಹೇಳಿದಳು ಕಣಮ್ಮಾ! ಅವಳಿಗೆ ಪ್ರೆಸೆಂಟುಗಳು ಕೊಡೋದ್ರಲ್ಲಿ ಹೊಟ್ಟೆ ತುಂಬ್ಸೋದ್ರಲ್ಲೇ ನನ್ನ ಹಣವೆಲ್ಲಾ ಖರ್ಚಾಗಿ ಹೋಯ್ತಲ್ಲೋ!'' ಅಂತ ತಲೆ ಚೆಚ್ಚಿಕೊಂಡ.

ಅವಳು ಲೊಟ್ಟೆ ಹೊಡ್ಕೊಂಡು ರುಚಿ ರುಚಿಯಾಗಿದೇಂತ ಬೆರಳೆಲ್ಲಾ ಚೀಪಿ ತಿಂತಾ ಇರಬೇಕಾದ್ರೆ ಇವನು ಮಾತ್ರ ಒಂದು ಕಪ್ಪು ಕಾಫಿನೋ ಟೀನೋ ಕುಡಿದುಕೊಂಡು ಹೊಟ್ಟೆ ತುಂಬಿಸಿ ಕೊಳ್ಳೊ ಪರಿಸ್ಥಿತಿ ಅಂತೆ, ಇಬ್ಬರಿಗಾಗೋಷ್ಟು ಅವಳೊಬ್ಬಳೇ ತಿಂದು ತೇಗಿ ಬಿಡೋಳಂತೆ, ''ಅವಳ ಜೊತೆಗೂ ನಾನು ತಿಂದು ತೇಗಿದ್ರೆ ನನ್ನ ಗತಿ ಅಷ್ಟೇನೆ! ಹೋಟಲಿನಲ್ಲಿ ಪರ್ಮನೆಂಟಾಗಿ ಪ್ಲೇಟುಗಳನ್ನು ತೊಳೆದು ದೋಸೆ ಹಿಟ್ಟು ರುಬ್ಬಬೇಕಾಗಿ ಬರ್‍ತಿತ್ತು''

ಎಲ್ಲಾದಕ್ಕಿಂತ ದುಃಖದ ವಿಷಯಾಂದ್ರೆ ಇವಳನ್ನು ಪುಸಲಾಯಿಸಿಕೊಂಡು ಹೋದ ಆ ವ್ಯಕ್ತಿ- ಅದೇ ಸಿನಿಮಾ ಡೈರೆಕ್ಟರ್ ಅಸಿಸ್ಟೆಂಟು ಅವನಿಗೆ ಎಷ್ಟು ದಿನಗಳು ಇವನ ಜೇಬಿನ ಆತಿಥ್ಯವಂತೋ! ಚೂರೂ ಮುಲಾಜಿಲ್ಲದೆ ಒಳ್ಳೊಳ್ಳೆ ತಿಂಡಿಗಳನ್ನು ಆರ್ಡರ್ ಮಾಡಿ ತಿನ್ನೋಳಂತೆ, ಪಾಪ! ಈ ಮೂರ್ಖ ಶಿಖಾಮಣಿಗೆ ಗೊತ್ತೇ ಆಗ್ಲಿಲ್ವಂತೆ!

ಏನೇನೋ ಹೇಳ್ಕೊಂಡು ಗಂಟೆ ಗಟ್ಲೆ ಕೊರೆದ. ''ಥೂ! ಹಾಳಾಗ್ಲಿ ಬಿಡೋ! ಈಗ್ಲಾದರೂ ಸರಿಯಾಗಿ ಕಾಲೇಜಿಗೆ ಬಾ! ಕೊಂಚ ಓದಿನ ಕಡೆ ಗಮನ ಹರಿಸು!'' ಅಂತ ಬುದ್ಧಿ ಹೇಳಿದೆ. ಈಗ ಅವನಿಗೆ ಬುದ್ಧಿ ಹೇಳೊ ಸ್ಥಿತಿನಲ್ಲಿದ್ದೆ.

★★★★★

ಕೆಲವು ವರ್ಷಗಳು ಸಂದಿವೆ. ವಿದ್ಯಾರ್ಥಿದೆಸೆ ಕಳೆದು ಎಲ್ಲರೂ ವೃತ್ತಿಪರರಾಗಿದ್ದೇವೆ. ಗುಂಡಾನೂ ಸಹ. ಈಗ ಒಬ್ಬರನ್ನೊಬ್ಬರು ಮೀಟ್ ಮಾಡೋದು ಅಪರೂಪವಾದರೂ ಮರೆತಿಲ್ಲಾ!.

ಒಂದು ದಿನ ಅಚಾನಕ್ ಗುಂಡ ಬಂದ. ಬಂದೋನೆ ''ಅವಳು ಬರ್‍ತಾಳಂತೆ ಕಣೋ! ಮರಿ! ಬೊಂಬಾಯಿಂದ ಬರ್‍ತಾಳಂತೆ''! ಕಾಲೇಜಿನಲ್ಲಿ ಕರೆಯೋನಲ್ಲಾ ಹಾಗೆ ''ಮರಿ'' ಅಂತ್ಲೆ ಸಂಬೋಧಿಸಿದ್ದ.

''ಯಾರೋ'' ಅಂದೆ. ಅವನ ಮಾತಿನ ತಲೆ ಬುಡ ಅರ್ಥವಾಗಿರಲಿಲ್ಲ.

''ಥೂ ನನ್ಮಗನೆ! ಯಾರಾಂತ ಕೇಳ್ತೀಯ! ಅವಳೇ 'ಕುಕ್ಕೂ' ಕಣ್ಲೋ! ನಾಳೆ ನೀನೂ ಬಾರೋ ಏರ್‌ಪೋರ್ಟಿಗೆ'' ಗೋಗರೆದ. ಅವಳು ಅವನ ಮನೆಗೆ ಕಳುಹಿಸಿದ್ದ ಟೆಲಿಗ್ರಾಂನ ಜೋಪಾನವಾಗಿ ಮಡಿಸಿ ಎದೆ ಜೋಬಿನಲ್ಲಿಟ್ಟುಕೊಂಡಿದ್ದ. ಅವಳ ಮೇಲಿನ ಪ್ರೀತಿ ಇನ್ನೂ ಹಸಿಯಾಗೆ ಇದೇಂತೆ ನನಗೆ ಆಗ್಺ೇ ಗೊತ್ತಾಗಿದ್ದು. ಇದನ್ನಲ್ಲವೇ 'ಅಮರ ಪ್ರೇಮಾ' ಅನ್ನೋದು ಅಂತ ಆಗ ಗೊತ್ತಾಯ್ತು.

ಒಳ್ಳೆ ಮದುವಣಿಗನಂತೆ ಡ್ರೆಸ್ ಮಾಡ್ಕೊಂಡು ಹೊರಟ. ಅವಳಿಗಾಗಿ ದೊಡ್ಡ ಹಾರ, ಬೊಕ್ಕೆ ಬೇರೆ. ಲೌಂಜಿನಲ್ಲಿ ಕೂತೆಡೆ ಕೂರಲಾರ ನಿಂತೆಡೆ ನಿಲ್ಲಲಾರ, ನಿಮಿಷ ನಿಮಿಷಕ್ಕೂ ಗಡಿಯಾರದ ಕಡೆ ಕಣ್ಣಾಡಿಸ್ತಾನೆ. ''ಮರಿ! ಇನ್ನೆಷ್ಟೊತ್ತೋ! ನನ್ನ ಗಡಿಯಾರ ಏನಾದ್ರೂ ನಿಂತೋಗಿದ್ಯೇನೋ! ''ಅಂತ ಚಿನ್ನದ ಸ್ಟ್ರಾಪಿನ ವಾಚ್ ಕೈಯಿಂದ ತೆಗೆದು ಕಿವಿಗೆ ಹಿಡ್ಕೊಂಡು ಅಲ್ಲಾಡಿಸ್ತಾನೆ. ನನ್ನ ಭುಜಾನ ಅಮುಕಿ ನನ್ನ ಮೂಳೆ ಎಲ್ಲಾ ಪುಡಿಪುಡಿ

ಮಾಡ್ಬಿಟ್ಟಿದ್ದ. ವಿಪರೀತ ಎಕ್ಸೈಟ್ ಆಗಿದ್ದ.

ಕೊನೆಗೆ ಬೊಂಬಾಯಿಂದ ಏರೋಪ್ಲೇನೂ ಬಂತು. ಸಮಯಕ್ಕೆ ಸರಿಯಾಗೇನೇ ಬಂತು. ರಿಸೀವ್ ಮಾಡೋದಕ್ಕೆ ಬಂದೋರನ್ನೆಲ್ಲಾ ನೂಕಿಕೊಂಡು ಮುಂದೆ ಹೋಗಿ ನಿಂತ. ಪ್ರಯಾಣಿಕರೆಲ್ಲಾ ಇಳಿಯಲು ಶುರು, ಇವನು ಕೊಕ್ಕರೆ ಕತ್ತು ಮಾಡಿ ನೋಡ್ತಾಯಿದ್ದ.

ಎಲ್ಲರೂ ಇಳಿದರು-ಆದ್ರೆ ಇವಳು ಮಾತ್ರ ಇಳಿಯಲಿಲ್ಲ ಬಂದ್ಲೊ ಇಲ್ವೋ ಗೊತ್ತಾಗಲಿಲ್ಲ-ತಿರುಗ ಕೊಟ್ಟಳು ಕೈಯಿ ಅಂಡ್ಕೊಂಡ ಗುಂಡ. ಅವನ ಮುಖವೆಲ್ಲಾ ರಕ್ತಹೀನ. ಇನ್ನೇನು ಬಂದ ದಾರಿಗೆ ಸುಂಕವಿಲ್ಲವೆಂದುಕೊಂಡು ವಾಪಸ್ಸಾಗೋಣಾಂತ ಅಂದ್ಕೊತಾಯಿದ್ವಿ. ಅಷ್ಟರಲ್ಲಿ ಒಂದು ಆಕೃತಿ ಸುಮಾರು 180 ಪೌಂಡುಗಳಿಗೆ ಕಮ್ಮಿ ಇಲ್ಲ, ಇಳೀಲಾರದೇ ಇಳಿದು ಬಂತು. ಹಿಂತಿರುಗಬೇಕೂಂತ ಇದ್ದ ನಾವಿಬ್ಬರು ಅಲ್ಲೇ ನಿಂತ್ವು-ಹಾಗೇ ದೃಷ್ಟಿಸಿ ನೋಡಿದೆವು. ಹೌದು! ನಿಸ್ಸಂದೇಹವಾಗಿಯೂ ಅವಳೇ ಕುಕ್ಕು-ಬಂಬಾಟಾದ ಆ ಶಿಲಾಬಾಲಿಕೆ.

ಗುಂಡನ ಕಡೆ ತಿರುಗಿದೆ. ಗುಂಡ ತನ್ನಲ್ಲಿ ತಾನೇ ನಸುನಗುತ್ತಿದ್ದಾನೆ. ಅವನ ಕಣ್ಣಲ್ಲಿ ದ್ವೇಷ, ಕೋಪ, ಅಸೂಯೆ, ಅಸಹ್ಯ ಎಲ್ಲಾ ಒಟ್ಟಿಗೆ ಕಾಣಿಸಿದಂತಾಯ್ತು. ಆ ಕ್ಷಣ ಅವನಿಗೆ ಅರಿವಿಲ್ಲದಂತೆ ಅವನ ಕೈಗಳು ಅವನ ತೆಳುವಾದ ಹೊಟ್ಟೆಯನ್ನು ಸವರಿಕೊಂಡವು. ಅವಳ ಹತ್ತಿರ ಹೋಗಿ ಹಾರಾನೂ ತುರಾಯಿನೂ ಕೊಟ್ಟ. ಏನೋ ಮಾತೂ ಆಡ್ದ. ಇವನನ್ನ ನೋಡಿ ಅವಳ ಕಣ್ಣುಗಳು ಲಜ್ಜೆಯಿಂದ ಕೆಳಗೆ ಬಗ್ಗಿದವೂಂತ ಅಂತಾನೆ ಗುಂಡ. ಅದ್ಯಾಕೆ ಇವನನ್ನ ನೋಡ್ಬೇಕೂಂತ ಇಚ್ಛೆ ಪಟ್ಳೂಂತ ನನಗಿನ್ನೂ ಅರ್ಥವಾಗಿಲ್ಲ. ಪ್ರೇಮ ಅನ್ನೋದೆ ವಿಚಿತ್ರ ಅನ್ಸುತ್ತೆ ನನಗೆ.

ಅವಳ 180 ಪೌಂಡುಗಳು ಎಲ್ಲಾ ನನ್ನ ಜೇಬು ಖಾಲಿ ಮಾಡಿದ್ದಳಲ್ಲಾ ಅದರ ಪರಿಣಾಮನೋ ಮರಿ! ಅಂತ ಹಿಸ್ಟೀರಿಕಲ್ ಆಗಿ ಗಹಗಹಿಸಿ ನಕ್ಕ. ಆಮೇಲೆ ಎಳೆ ಹುಡುಗರಂತೆ ''ಹಾಗೇ ಆಗಬೇಕು! ನಾನಗಬೇಕು! ನೀನಳಬೇಕು!'' ಅಂತ ಜೋರಾಗಿ ಹಾಡೋದಕ್ಕೆ ಶುರು ಮಾಡ್ದ.

ಇವನ ನಗು, ಹಾಡು ಎಲ್ಲಾ ಕೇಳಿ ಅಲ್ಲಿದ್ದೋರೆಲ್ಲಾ ನಮ್ಮ ಕಡೆಗೆ ತಿರುಗಿ ನೋಡ್ತಾಯಿದ್ರು.

*(ವಿ.ಸೂ: ಇದನ್ನ ಓದಿದ್ರೆ ಯಾವುದೋ ಯಾವಗಾಲೋ ಓದಿದ್ದ ಇಂಗ್ಲೀಷ್ ಕಥೆಯೊಂದು ಜ್ಞಾಪಕಕ್ಕೆ ಬರುತ್ತದೆಯೇ? ನನಗೂ ಅಷ್ಟೆ!)*

# ವೈದ್ಯೋ ನಾರಾಯಣೋ ಹರಿ:

ನಂದಿನಿ ಕಾಪಡಿ

"ಶರೀರೆ ಜರ್ಜರಿ ಭೂತೆ, ವ್ಯಾಧಿಗ್ರಸ್ತೆ ಕಳೇಬರೆ ಔಷಧಂ ಜಾಹ್ನವೀ ತೋಯಂ ವೈದ್ಯೋ ನಾರಯಣೋ ಹರಿ:"

ಈ ಸ್ತೋತ್ರವನ್ನು ಹೇಳದೆಯೇ ಯಾವುದೇ ಔಷಧ ಸೇವನೆಯನ್ನೂ ಮಾಡಬಾರದೆಂದು ನಮ್ಮ ತಾತನವರು ಆಜ್ಞೆಮಾಡಿದ್ದರು. ಒಳ್ಳೆಯ ಕಾಲವದು ವೈದ್ಯರೆಂದರೆ ದೇವರ ಸಮಾನ. ಬಡಾವಣೆಗೆಲ್ಲಾ ಒಬ್ಬರೇ ಡಾಕ್ಟರರು ನಮ್ಮ ತಾಯಿ ನನ್ನನ್ನು ಡಾಕ್ಟರ ಹತ್ತಿರ ಕರೆದುಕೊಂಡು ಹೋಗುವುದು ಜ್ವರ ಬಂದಾಗ. ಮನೆಯಲ್ಲಿ ಮಾಡುತ್ತಿದ್ದ ಜೀರಿಗೆ ಮೆಣಸಿನ ಕಷಾಯ ಅಥವಾ ಶುಂಠಿ ಕಷಾಯ ಪರಿಣಾಮ ತೋರದಿದ್ದಾಗ ಹೆದರಿಕೊಂಡೇ ಕೂತಿರುತ್ತಿದ್ದೆ. ಡಾಕ್ಟರರ ಶಾಪಿನಲ್ಲಿ. ಡಾಕ್ಟರರು ನಾಡಿ ನೋಡುತ್ತಾ ತಮ್ಮ ಕೈಗಡಿಯಾರ ನೋಡಿಕೊಳ್ಳುತ್ತಿದ್ದಾಗ ನನಗೆ ಹೆದರಿಕೆ! ಸ್ಟೆತಸ್ಕೋಪನ್ನು ಎದೆಯ ಮೇಲಿಟ್ಟು ಜೋರಾಗಿ ಉಸಿರು ತೆಗೆ ಎಂದಾಗ ನನ್ನ ಜ್ವರದ ವಿಚಾರ ತಿಳಿದು ಬಿಟ್ಟಿರುತ್ತಿತ್ತು. "ಮಾಮೂಲು ಫ್ಲೂ ಜ್ವರ ಬಿಡಿ. ನಾಲ್ಕು ದಿನಗಳಲ್ಲಿ ವಾಸಿಯಾಗುತ್ತೆ" ಎಂದು ಬಿಟ್ಟವರೇ ತಮ್ಮ ಔಷಧದ ಕೋಣೆಗೆ ನಾವು ತಂದಿರುತ್ತಿದ್ದ ಶೀಷೆಯನ್ನು ತೆಗೆದುಕೊಂಡು ಹೋಗುತ್ತಿದ್ದರು. ಅಲ್ಲಿ ತಮ್ಮ ಪಿಂಗಾಣಿ ಅರೆಯುವ ಕಲ್ಲಿನಲ್ಲಿ ಏನನ್ನೋ ಹಾಕಿ ಅರೆದ ಸದ್ದು ಮಾಡಿ ಕೆಲವೇ ನಿಮಿಷಗಳಲ್ಲಿ ಕೆಂಪು ಔಷದ ಸಿದ್ಧ ಮಾಡಿ ತಂದು ಬಿಟ್ಟು "ಎರಡೆರಡು ದಿನಕ್ಕೆ ಮೂರು ಸರ್ತಿ" ಎಂದು ಕೊಡುತ್ತಿದ್ದರು. ಅ ಔಷಧಿ ತೆಗೆದುಕೊಳ್ಳಲು ಮೊದಲು ಮೇಲಿನ ಸ್ತೋತ್ರ ಹೇಳಬೇಕು ಆಮೇಲೆ ಮೂಗು ಮುಚ್ಚಿಕೊಂಡು ಕಷ್ಟಪಟ್ಟು ಔಷಧಿ ನುಂಗಬೇಕು. ಕಡ್ಡಾಯವಾಗಿ ಹಾಲು ಅನ್ನ ತಿಂದು ಬಿಸಿ ನೀರೇ ಕುಡಿಯಬೇಕು ಮೂರು ದಿನ ಸ್ನಾನವಿಲ್ಲ. ನಾಲ್ಕನೆಯ ದಿನ ಜ್ವರ ಬಿಟ್ಟಾಗ ಮೆಣಸಿನ ಸಾರು ಅನ್ನ ಹೊಟ್ಟೆಗೆ ಬಿದ್ದಮೇಲೆ ಸಮಾಧಾನ. ನಾಲ್ಕುದಿನ ಸ್ಕೂಲು ತಪ್ಪಿದ್ದಕ್ಕೆ ಏನೂ ಬೇಜಾರಿರುತ್ತಿರಲಿಲ್ಲ. ಈಗಿನವರೆಂತೆ ಹತ್ತು ಕಿಲೋ ಹೊರೆಯ ಪುಸ್ತಕಗಳೂ ಇರಲಿಲ್ಲ. ಪಾಠವೂ ಅಷ್ಟೇನು ಇಲ್ಲ! ಹೋಂ ವರ್ಕ್ ಯೂನಿಟ್ ಟೆಷ್ಟ್‌ಗಳೂ ಇಲ್ಲ!

ದಶಕಗಳು ಕಳೆದಂತೆ ಸಾಮಾನ್ಯ ವೈದ್ಯರು (ಇಂಗ್ಲಿಷಿನಲ್ಲಿ ಜನರಲ್ ಪ್ರಾಕ್ಟೀಷನರ್) ಕಾಣಿಸುವುದೇ ಇಲ್ಲವಲ್ಲ! ಬೀದಿಗೆ ನಾಲ್ಕಾರು ಸ್ಪೆಷಲಿಸ್ಟ್‌ಗಳು! ಹೃದಯದ ವೈದ್ಯರೇ ಬೇರೆ, ಮೆದುಳಿನ ವೈದ್ಯರೇ ಬೇರೆ! ಮೂತ್ರಕೋಶದ ವೈದ್ಯರೇ ಬೇರೆ, ಚರ್ಮ ಬೇನೆಯ ವೈದ್ಯರೇ ಬೇರೆ! ಹೋಗಲಿ ಅದಾದರು ಸರಿ ಎಂದುಕೊಂಡರೆ, ಹೃದಯದ ತಜ್ಞರಲ್ಲೇ ಅದೆಷ್ಟು ತರಹ! ರಕ್ತನಾಳಗಳ ತಜ್ಞರು ಬೇರೆ. ಹೃದಯದ ಮಾಂಸಖಂಡಗಳ ತಜ್ಞರು ಬೇರೆ! ಕೆಲವು ದಿನಗಳಲ್ಲಿ ಯಾವ ರೀತಿ ತಜ್ಞರು ತಯಾರಾಗಿ ಬಿಡುವರೆಂದರೆ ಕಿರು ಬೆರಳಿನ ತಜ್ಞರೇ ಬೇರೆ, ಆದಾದ ನಂತರ

ಎಡ ಕಿರು ಬೆರಳಿನ ತಜ್ಞರು ಬೇರೆ, ಮತ್ತು ಬಲ ಕಿರು ಬೆರಳಿನ ತಜ್ಞರೇ ಬೇರೆಯಾಗಿರುತ್ತಾರೋ ಏನೋ! ಚರ್ಮದ ತಜ್ಞರಲ್ಲಿ, ಮುಖದ ಚರ್ಮದ ತಜ್ಞರು ಬೇರೆ, ಉಗುರಿನ ತಜ್ಞರು ಬೇರೆ ಹಾಗೂ ಕೂದಲಿನ ತಜ್ಞರು ಬೇರೆ! ತಮಾಷಿ ಎಂದುಕೊಳ್ಳಬೇಡಿ! ಇಪ್ಪೊತ್ತೊಂದನೇ ಶತಕದ ಮುಖ ಇದು!

ಆಗ ಬರೀ ಜ್ವರ ಬಂದರೆ ಏನು ಮಾಡುವುದು? ಮೊದಲು ಸಾದಾವೈದ್ಯರ ಹತ್ತಿರ ಹೋಗಿ (ಹುಡುಕಿ-ಕಂಡಾಗ) ಯಾವ ತಜ್ಞರ ಹತ್ತಿರ ಹೋಗುವುದೆಂದು ಕೇಳಬೇಕು. ನಂತರ ಆ ತಜ್ಞರು ಹೇಳಿದ ಮೂಲಕ, ಯಾವ ಲ್ಯಾಬೊರೇಟರಿಗೆ ಹೋಗಿ, ಯಾವ ತರಹ ರಕ್ತ, ಮೂತ್ರ ಮುಂತಾದವನ್ನು ಪರೀಕ್ಷಿಸಿಕೊಂಡು ನಂತರ ಬೇರೆ ತಜ್ಞರ ಹತ್ತಿರ ಸ್ಕ್ಯಾನಿಂಗ್ ಮಾಡಿಸಿಕೊಂಡು, ಮಗದೊಬ್ಬ ವೈದ್ಯರ ಹತ್ತಿರ ಹೃದಯದ ಕ್ರಿಯೆ ತಪಾಸಿಸಿಕೊಂಡು ಇವೆಲ್ಲಾ ರಿಪೋರ್ಟುಗಳ ಸಹಿತ ಮೊದಲು ಕಂಡಿದ್ದ ತಜ್ಞರ ಹತ್ತಿರ ಬಂದಮೇಲೆ, ಚಿಕಿತ್ಸೆ ಪ್ರಾರಂಭ! ಅಷ್ಟರಲ್ಲಿ ಆ ಜ್ವರ ತಾನಾಗಿಯೇ ವಾಸಿಯಾಗಿ ಬಿಡಲೂ ಬಹುದು. ಇಲ್ಲದಿದ್ದರೂ ಇರಬಹುದು. ಈಗಿನ ಕಾಲದಲ್ಲಿ ರೋಗಗಳಲ್ಲೂ ವಿಶಿಷ್ಟತೆ ಬಂದು ಬಿಟ್ಟಿಲ್ಲವೆ? ಸುಮ್ಮನೇ ಬಂದ ಜ್ವರ ದೊಡ್ಡದಾದ ಖಾಯಿಲೆಯಾಗಿ ಪರಿಣಾಮ ಬೀರುವುದಿಲ್ಲವೆ?

ಈ ರೀತಿ ''ಖಾಯಿಲೆಯ ಮ್ಯಾನೇಜಮೆಂಟ್'' ಮಾಡಲು ದೊಡ್ಡದೊಡ್ಡ ಆಸ್ಪತ್ರೆಗಳೇ ಹೊಟ್ಟಿಕೊಂಡು ಬಿಟ್ಟಿವೆ! ಸಕ್ಕರೆ ಖಾಯಿಲೆಯ ಆಸ್ಪತ್ರೆಯೇ ಬೇರೆ, ಹೃದಯದ ಬೇನೆಯ ಆಸ್ಪತ್ರೆಯೇ ಬೇರೆ, ಮೂಳೆಗಳ ಆಸ್ಪತ್ರೆಯೇ ಬೇರೆ! ಇವುಗಳೇ ಅಲ್ಲದೆ ''ಕಾಂಪ್ರೆಹೆನ್ಸಿವ್ ಕೇರ್'' ಅಥವಾ ''ಸಂಪೂರ್ಣ ಚಿಕಿತ್ಸೆ''ಗಳ ಆಸ್ಪತ್ರೆಗಳೂ ಇವೆಯಲ್ಲ! ಸರಿ ಆದರೆ ನಮ್ಮ ನಾಡಿ ನೋಡಿ ಚಿಕಿತ್ಸೆ ಮಾಡುತ್ತಿದ್ದ ಡಾಕ್ಟರುಗಳೆಲ್ಲರೂ ಎಲ್ಲಿ ಹೋದರು! ಪಾಪ ಮನೆ ಮನೆಗೂ ಬಂದು ಚಿಕಿತ್ಸೆ ಮಾಡುತ್ತಿದ್ದರಲ್ಲ! ಈಗ ಅವರೆಲ್ಲಿ? ಟಿಪ್‌ಟಾಪಾಗಿ ಬರುತ್ತಿದ್ದ ಅವರ ಬ್ಯಾಗನ್ನು ಮನೆಯವರೇ ಹಿಡಿದುಕೊಂಡು ಅವರು ಹೇಳಿದ್ದೆಲ್ಲಾ ಸರಿಯೆನ್ನುತ್ತಿದ್ದ ಕಾಲವೆಲ್ಲಿ?

ಬರೀ ಅಲೋಪತಿ ಮಾತನಾಡುತ್ತಿದ್ದೇನೆ ಎಂದುಕೋಬೇಡಿ. ಇಪ್ಪತ್ತೊಂದನೆಯ ಶತಕ ಬರುತ್ತಿದ್ದತೆ ನಮ್ಮ ಆಯುರ್ವೇದ, ಯೂನಾನಿ ಪದ್ಧತಿಗಳು ಮಹತ್ವ ಪೂರ್ಣವಾಗುತ್ತಿದೆ ''ಅಯ್ಯೋ ನಾರು ಬೇರಿನ ಔಷಧಿ ಈಗಿನ ಕಾಲದಲ್ಲಿ ಯಾರಿಗೆ ಬೇಕ್ರಿ'' ಎನ್ನುತ್ತಿದ್ದ ಕಾಲ ಮಾಯವಾಗಿದೆ. ಅಶ್ವಗಂಧ, ದಷಮೂಲಾರಿಷ್ಠ ಮಹಾರಸನಾದಿ ಕ್ವಾಥ ಇವೆಲ್ಲದರ ಬಗ್ಗೆ ಜನಕ್ಕೆ ಬೇಕಾದಷ್ಟು ಪರಿಚಯವಿದೆ. ತಮಾಷೆಯೆಂದರೆ ನಮ್ಮ ಪುರಾತನ ವೈದ್ಯಪದ್ದತಿ ನಮಗೆ ಮರುಪರಿಚಯಿಸಿ ಕೊಟ್ಟವರು ಪಾಶ್ಚಿಮಾತ್ಯರು. ಅವರ ದೃಷ್ಟಿ ಈ ಪದ್ಧತಿಗಳ ಬಗ್ಗೆ ಹೊರಳಿದ ಮೇಲೆ ನಮಗೆ ಆಯುರ್ವೇದ, ಯೂನಾನಿಗಳ ಮೇಲೆ ಅದೆಷ್ಟು ಅಭಿಮಾನ! ಸ್ವತಃ ಅಲೋಪತಿ ವೈದ್ಯರಾದ ನನ್ನ ಗೆಳತಿಯೊಬ್ಬರು ''ಸಿದ್ಧ'' ಪದ್ಧತಿಯಲ್ಲಿ ಚಿಕಿತ್ಸೆ ಮಾಡಿಸಿಕೊಳ್ಳುತ್ತಿದ್ದಾರೆ.

ಇವೆಲ್ಲದರ ನಡುವೆ ಇನ್ನೊಂದು ಬದಲಾವಣೆಯೆಂದರೆ ಎಲ್ಲರಿಗೂ ತಾವೇ ವೈದ್ಯರಾಗುವ ಹುಚ್ಚು ''ರೀಡರ್ಸ್ ಡೈಜೆಸ್ಟ್'' ''ಹೆಲ್ತ್ ಟುಡೇ'' ಮುಂತಾದ ಪತ್ರಿಕೆಗಳನ್ನೋದಿ ಎಲ್ಲರಿಗೂ ಖಾಯಿಲೆಗಳ ಬಗ್ಗೆ ಅರ್ಧಬಂರ್ಧ ಜ್ಞಾನ. ತಾವೇ ವೈದ್ಯರಾಗಿಬಿಟ್ಟೆವೆಂಬ ಪರಿಸ್ಥಿತಿ. ಸ್ವ ಚಿಕಿತ್ಸೆ ಮಾಡಿಕೊಂಡು, ಪರಿಸ್ಥಿತಿ ಬಿಗಡಾಯಿಸಿಕೊಂಡ ಮೇಲೆ ತಜ್ಞರ ಹತ್ತಿರ ಓಡುವವರ ಸಂಖ್ಯೆಯೂ ಹೆಚ್ಚುತ್ತಿದೆ. ರೋಗಿಗಳು ರೋಗಿಗಳಾಗೇ ಇದ್ದರೆ ಸರಿ ವೈದ್ಯರಿಗೆ ಚಿಕಿತ್ಸೆ ಬಿಡಬಾರದೇಕೆ?

ನನ್ನ ಗೆಳತಿ ಹೇಮಾಗೆ ಹೋಮಿಯೋಪತಿ ಹುಚ್ಚು ''ಮೆಟೀರಿಯಾ ಮೆಡಿಕಾ'' ಪುಸ್ತಕ ಓದಿ ''ಪ್ರಾಕ್ಟೀಸ್ ಹೋಮಿಯೋಪತಿ ಎಟ್ ಹೋಮ್'' ಓದಿ ಬಿಟ್ಟಮೇಲಂತೂ ಅವಳನ್ನು ಹಿಡಿಯುವವರೇ ಇಲ್ಲ. ಒಂದು ದಿನ ನನ್ನ ನೆಗಡಿ ನೋಡಿದ ತಕ್ಷಣ ''ಆರ್ಸೆನಿಕ್ ಶುರು ಮಾಡು. ಗುಣವಾದರೆ ಸರಿ, ಇಲ್ಲದಿದ್ದರೆ ಮೊದಲು ಬ್ರಯೋನಿಯಾ ಆಮೇಲೆ ಬೆಲ್ಲಡೋನಾ ತೆಗೆದುಕೋ ಎಂದೆಲ್ಲಾ ಹೇಳಿ. ಬರೆದೂ ಕೊಟ್ಟುಬಿಟ್ಟಳು. ಹೋಮಿಯೋಪಥಿ ದವಾಖಾನೆಗೆ ಹೋಗಿ ಔಷಧಿ ಕೊಡಿ ಎಂದರೆ ''ಯಾರಮ್ಮಾ ಹೀಗೆ ಬರೆದುಕೊಟ್ಟಿರುವುದು? ನಿಮ್ಮ ಎಡ ಮೂಗು ಸೋರುತ್ತಿದೆ. ಬೆಲ್ಲಡೋನಾ ಸರಿಯಲ್ಲ. ನಿಮ್ಮ ದೇಹನೋಡಿದರೆ ಆರ್ಸೆನಿಕ್ ಸರಿಬರುವುದಿಲ್ಲ ಎನಿಸುತ್ತಿದೆ. ಒಳಗಡೆ ನಮ್ಮ ಡಾಕ್ಟರಿದ್ದಾರೆ. ಅವರಿಗೆ ತೋರಿಸಿ ಸರಿಯಾದ ಚಿಕಿತ್ಸೆ ತೆಗೆದುಕೊಳ್ಳಿ'' ಎಂದು ಬಿಟ್ಟರು. ಒಳಗಡೆ ಹೋದಾಗ ಕಾದಿದ್ದ ಪ್ರಶ್ನೆಗಳು ಎಂತಹವು! ನಿಮಗೆ ಉಪ್ಪು ಇಷ್ಟವೋ. ಅಥವಾ ಸಕ್ಕರೆಯೋ? ನಿಮಗೆ ಯಾವ ತರಹದ ಕನಸುಗಳು ಬೀಳುತ್ತವೆ? ನಿಮಗೆ ಬಾಯಾರಿಕೆಯಾದಾಗ ಪೂರ್ತಿ ಲೋಟ ನೀರು ಕುಡಿಯುವುರೋ ಅಥವಾ ಎರಡೇ ಗುಟುಕು ನೀರು ಸಾಲುವುದೋ ಹೀಗೆಲ್ಲಾ ಪ್ರಶ್ನೆಗಳನ್ನು ಕೇಳಿ ಬೇರೆ ಯಾವುದೋ ಔಷಧಿ ಬರೆದುಕೊಟ್ಟರು!

ಮನೆಗೆ ಬರುವ ಹೊತ್ತಿಗೆ ನನ್ನ ಗೆಳತಿ ಸಂಗೀತಾ ಬಂದಿದ್ದಳು. ನನ್ನ ಪುರಾಣ ಕೇಳಿದವಳೇ ''ಸುಮ್ಮನೆ ಹೀಗೆ ಚಿಕಿತ್ಸೆ ಮಾಡಿಸಿಕೊಳ್ಳಬೇಡಿ. ನನ್ನ ಗೆಳತಿ ಪೂನಮ್ ''ರೇಕಿ ಮತ್ತು ಪ್ರಾಣಿಕ್‌ಹೀಲಿಂಗ್'' ಕೋರ್ಸ್ ಈಗತಾನೇ ಮುಗಿಸಿದ್ದಾಳೆ. ಅವಳ ಕೈ ನಿನ್ನನ್ನು ಮುಟ್ಟಿದೊಡನೆ ನಿನ್ನ ಒಳಗಿನ ಶಕ್ತಿ ಜಾಗೃತವಾಗಿ, ತಾನೇ ತಾನಾಗಿ ಗುಣವಾಗುತ್ತದೆ. ನಾಳೆ ಸಂಜೆಯ ಅಪಾಯಿಂಟ್‌ಮೆಂಟ್ ತೆಗೆದುಕೋತೇನೆ'' ಎಂದಳು. ಸರಿ ಎಂದುಬಿಟ್ಟೆ.

ಆದರೆ ಅವತ್ತೇ ರಾತ್ರಿ ನನ್ನ ಪತಿಯ ಗೆಳೆಯರೊಬ್ಬರು ಮನೆಗೆ ಬಂದವರೇ ''ಭಾಭಿ, ಒಂದೇ ಸಲ ನನ್ನ ಹೆಂಡತಿಯ ತಮ್ಮನ ಹತ್ತಿರ ಆಕ್ಯುಪಂಕ್ಚರ್ ಚಿಕಿತ್ಸೆ ಮಾಡಿಸಿಕೊಂಡು ಬಿಡಿ. ಸರಿ ಹೋಗದಿದ್ದರೆ, ಆಕ್ಯುಪ್ರೆಷರ್ ಮತ್ತೆ ಮಾಗ್ನೊಟೋಥೆರಫಿ ಅರೋಮಾಥೆರಫಿ ಹಾಗೂ ಕಲರ್ಥೆರಫಿ ಕೂಡಾ ನನ್ನ ಭಾವ ಮೈದುನ ಮಾಡುತ್ತಾನೆ. ತುಂಬಾ ಒಳ್ಳೆ ಹೆಸರಿದೆ ಅವನಿಗೆ. ಅಮಿತಾಭ್ ಬಚ್ಚನ್‌ನ ಬಲಗೈ ಎನಿಸಿಕೊಂಡ ಸಹಾಯಕನಿಗೆ ಅವನೇ ಚಿಕಿತ್ಸೆ ಮಾಡುತ್ತಿದ್ದಾನೆ.'' ಎಂದೆಲ್ಲಾ ಹೇಳಿ ತಮ್ಮ ಕಿವಿಗೆ ಹಾಕಿಕೊಂಡಿದ್ದ ರಿಂಗು ತೋರಿಸಿ ''ಈ ಕಿವಿ ಚುಚ್ಚಿದ ನಂತರ ನನ್ನ

ಅಸ್ತಮಾ ಪೂರ್ತಿ ವಾಸಿಯಾಯಿತು'' ಎಂದರು.

ನನ್ನ ಗೊಂದಲ ಇನ್ನೂ ಜಾಸ್ತಿಯಾಗಿಬಿಟ್ಟಿತು. ಯಾರ ಹತ್ತಿರ ಹೋಗುವುದು ಎಂದೇ ತಿಳಿಯಲಿಲ್ಲ. ನನ್ನ ಮಗಳು ಕಾಲೇಜಿನ ಲೈಬ್ರರಿಯಿಂದ ಯಾವುದೋ ಪುಸ್ತಕ ತಂದವಳೇ ''ಅಮ್ಮಾ ಈಗಿನ ವೈದ್ಯರೆಲ್ಲಾ ಉಪಯೋಗವಿಲ್ಲದ ಚಿಕಿತ್ಸೆ ಮಾಡುತ್ತಾರೆ. ಈ ಪುಸ್ತಕ ಓದಿ ನೋಡು. ಹೋಲಿಸ್ಟಿಕ್ ಪದ್ಧತಿ ಇದರಲ್ಲಿ ಸಂಪೂರ್ಣ ದೇಹ ಹಾಗೂ ಮಿದುಳಿನ ನಿಯಂತ್ರಣದ ಬಗ್ಗೆ ಹೇಳಿದ್ದಾರೆ. ಡಾಕ್ಟರ್ ದೀಪಕ್ ಚೋಪ್ರಾ ಎಂದು ನಮ್ಮ ಭಾರತೀಯ ವೈದ್ಯರಂತೆ, ಅಮೇರಿಕಾ ದೇಶ ಈಗ ಅವರನ್ನೇ ಪೂರ್ತಿ ಅನುಸರಿಸುತ್ತಿದೆಯಂತೆ'' ಎಂದಳು. ಮನ ಇನ್ನೂ ಗೊಂದಲಕ್ಕೀಡಾಯಿತು!

ಬೆಂಗಳೂರಿಂದ ನಮ್ಮ ತಾಯಿ ತಂದೆಯರ ಫೋನು ಬಂದಿತು. ಅಮ್ಮನ ಹತ್ತಿರ ನನ್ನ ಗೋಳು ಹೇಳಿಕೊಂಡೆ. ''ಸಾಕು ಸುಮ್ಮನಿರೆ ಬಿಸಿಬಿಸಿಯಾಗಿ ಮೆಣಸಿನ ಸಾರು ಮಾಡಿಕೊಂಡು ತಿಂದು ಬಿಸಿ ಹಾಲಿಗೆ ಅರಿಷಿಣದ ಚಿಟಕಿ ಹಾಕಿಕೊಂಡು ಕುಡಿ. ನಾಳೆಗೆ ನಿನ್ನ ನೆಗಡಿ ಸರಿಯಾಗುತ್ತೆ'' ಅಂದರು!

ಹಾಗೇ ಮಾಡಿಬಿಟ್ಟೆ ನೋಡಿ , ನೆಗಡಿ ವಾಸಿಯಾಗೇ ಹೋಯಿತು ವೈದ್ಯೋ ನಾರಯಣೋ ಹರಿ:

---

ಪ್ರಕಟಿತ ಸಾಹಿತ್ಯ
ಬೂಸಾ
ಅಪ್ರಕಟಿತ ಸಾಹಿತ್ಯ
'ಕ.ಬು.'ಸಾ

'ಅಯ್ಯೋ' ಎಂದರೆ
ಸ್ವರ್ಗ
'ಎಲವೋ' ಎಂದರೆ
ವರ್ಗ

- ಶಂಸ

# ಅಟ್ಟ ನಿಟ್ಟುಸಿರಿಟ್ಟಿತು

- ಎಂ.ಎಸ್. ನರಸಿಂಹಮೂರ್ತಿ

ಪುಸ್ತಕಗಳ ಬ್ಯಾಗನ್ನು ಹೊತ್ತುಕೊಂಡು ಹತ್ತಾರು ಆಫೀಸುಗಳಿಗೆ ಅಲೆದು ಕಡೆಗೆ ಬಂದ ದಾರಿಗೆ ಸುಂಕವಿಲ್ಲ ಎಂಬ ಗಾದೆಯನ್ನು ಹೇಳಿಕೊಂಡ. ಈ ಜನಕ್ಕೆ ಪುಸ್ತಕಗಳು ಅಂದರೆ ಅಲರ್ಜಿ ಎಂದು ಬೈದುಕೊಂಡ. ತಾನು ಸಾಹಿತಿ ಆಗಲೇಬಾರದಿತ್ತು ಅಂದುಕೊಂಡ.

ವಿಶ್ವ ಬರೆದ ಪುಸ್ತಕಗಳು ಅಂದರೆ ಜನ ಆಸೆಪಟ್ಟು ಕೊಳ್ಳುತ್ತಿದ್ದ ಕಾಲವೊಂದಿತ್ತು. ಆದರೆ ಟಿ.ವಿ. ಬಂದಮೇಲೆ ಅವನ ಪುಸ್ತಕಗಳಿಗೆ ಡಿಮ್ಯಾಂಡ್ ಇಲ್ಲ. ತಾನೇ ಪ್ರಕಟಿಸಬೇಕು, ತಾನೇ ಮಾರಾಟ ಮಾಡಬೇಕು. ಅಷ್ಟೇ ಅಲ್ಲ. ತಾನೇ ಓದಬೇಕು.

''ಏನಾಯ್ತು ಹೋದ ಕೆಲಸ?'' ಮಡದಿ ವಿಶಾಲೂ ಕೇಳಿದಳು.

'ಬ್ಯಾಗು ಹಾಗೇ ವಾಪಸ್ ಬಂದಿದೆಕಣೆ. ತಗೊ ಅಟ್ಟದ ಮೇಲೆ ಹಾಕು' ಎಂದ.

ಅಟ್ಟ ಹೌಹಾರಿತು, 'ಬೇಡ ಸಾಹಿತಿಗಳೆ, ನಾನು ಇನ್ನಷ್ಟು ಭಾರ ತಡೆಯಲಾರೆ' ಎಂದು ಗೋಗರೆಯಿತು.

''ಏನ್ರೀ ಇದು! ಒಂದು ಪುಸ್ತಕಾನೂ ಖರ್ಚು ಆಗಲಿಲ್ವೆ?'

'ಬ್ಯಾಗು ನೋಡಿದ ಕೂಡಲೇ ಕೆಲವರು ಬಂದರು. ಆದ್ರೆ ಅವರು ಕೇಳಿದ್ದೇ ಬೇರೆ'

'ಅಂದ್ರೆ?'

'ಬ್ಯಾಗ್ ಚೆನ್ನಾಗಿದೆ. ಇದನ್ನು ಮಾರೋಹಾಗಿದ್ರೆ ಹೇಳಿ ಕೊಂಡ್ಕೊತೀವಿ ಅಂದ್ರು.''

''ನೀವು ಬ್ಯಾಗ್ ಮಾರೋ ಜನ ಅಲ್ಲ, ಹಾಸ್ಯ ಸಾಹಿತಿ ಅಂತ ಹೇಳಬೇಕಿತ್ತು'

'ಹೇಳಿದೆ. ನಿಮ್ಮ ಮೂತಿ ನೋಡಿದರೆ ತಿಳಿಯುತ್ತೆ ಸಾರ್. ಬ್ಯಾಗ್ ಎಷ್ಟಕ್ಕೆ ಕೊಡ್ತೀರ ಹೇಳಿ ಅಂದ್ರು'

ವಿಶಾಲೂ ಪುಸ್ತಕಗಳನ್ನು ಅಟ್ಟಕ್ಕೆ ಹಾಕಿದಳು.

ಮರುದಿನ ಬೆಳಿಗ್ಗೆ ಒಂದು ಆಟೋ ಬಂದು ಮನೆ ಮುಂದೆ ನಿಂತಿತು.

''ಕತೆ ಪುರಾಣ ಬರೆಯೋ ವಿಶ್ವನಾಥ್ ಮನೆ ಇದೇನಾ ಸಾರ್?'' ಎಂದು ಒಬ್ಬ ಚೋಟು ಕೇಳಿದ.

'ಹೌದು'

'ಸಾರ್, ಪ್ರೆಸ್ಸಿಂದ ಬುಕ್ಸ್ ಬಂದಿವೆ. ನೀವೂ ಬಂದು ಒಂದು ಕೈ ಹಾಕಿದ್ರೆ ಬೇಗ

ಇಳಿಸಬಹುದು' ಎಂದ ಚೋಟು.

ವಿಶ್ವ ಕಟ್ಟುಗಳನ್ನು ಇಳಿಸಿ ಮನೆಯೊಳಗೆ ತಂದ. ಆಟೋದವನಿಗೆ ಒಂದಷ್ಟು ಹಣ ನೀಡಿದ. ಚೋಟು ಕೈಗೆ ಹತ್ತು ರೂಪಾಯಿ ಇಡಲೋ ಅಥವಾ ಒಂದು ಪುಸ್ತಕ ಕೊಡಲೋ ಎಂದು ಯೋಚಿಸಿ,

'ಒಂದು ಪುಸ್ತಕ ಕೊಡ್ತೀನಿ ಮರಿ. ನಾನೇ ಬರೆದಿದ್ದು. ಓದು, ನಕ್ಕು ನಕ್ಕು ಹೊರಳಾಡ್ತೀಯ'

'ಬೇಡ ಸಾರ್ ಅಂಥ ಹಲ್ಕ ಕೆಲಸ ನಾನು ಮಾಡೊಲ್ಲ' ಎಂದು ಚೋಟು ಹಣವನ್ನೂ ನಿರಾಕರಿಸಿ ಹೊರಟುಬಿಟ್ಟ.

ಅಡಿಗೆ ಮನೆಯಲ್ಲಿದ್ದ ವಿಶಾಲೂ ಈಚೆಗೆ ಬಂದಾಗ ಇನ್ನೊಂದು ಸಾವಿರ ಪುಸ್ತಕಗಳನ್ನು ಕಂಡು ಗಾಬರಿಯಾದಳು.

'ಇವು ಯಾವ್ದು?'

'ಅದೇ ಪುಸ್ತಕ ಕಣೆ. 2 ಸಾವಿರ ಹಾಕಿಸಿದ್ದೆ. ಒಂದು ಸಾವಿರ ಮಾತ್ರ ಮನೆಗೆ ತಂದಿದ್ದೆ. ಇನ್ನೊಂದು ಸಾವರಿ ಪ್ರೆಸ್ಸಲ್ಲೇ ಇತ್ತು'

'ಯಾಕೆ?'

'ಅವನಿಗೆ ಪೂರ್ತಿ ಹಣ ಕೊಟ್ಟಿರಲಿಲ್ಲ. ಹಣ ಸೆಟ್ಲ್‌ಮಾಡಿ ಬುಕ್ಸು ತಗೊಂಡ್ ಹೋಗಿ ಅಂತ ಅಡವು ಇಟ್ಕೊಂಡಿದ್ದ ಇವುಗಳ್ನ'

'ಮತ್ತೆ ಈಗ ಯಾಕೆ ಕಳಿಸಿದ?'

'ನಿನ್ನೆ ನನಗೆ ಫೋನ್ ಮಾಡಿ ಹೇಳ್ದ. 'ಈ ಕಸಾನ ಇನ್ನೆಷ್ಟು ದಿನಿ ಇಟ್ಕೊಳ್ಳೋಕೆ ಸಾಧ್ಯ? ನೀವು ಹಣ ಕೊಡದೇ ಇದ್ರೂ ಪರ್ವಾಗಿಲ್ಲ. ಮೊದಲು ನನಗೆ ಜಾಗ ಖಾಲಿ ಮಾಡಿಕೊಡಿ. ಪ್ರೆಸ್ಸಲ್ಲಿ ಜಾಗ ಇಲ್ಲ' ಎಂದಿದ್ದ'

'ಎಲ್ಲಿ ಇಡ್ತೀರ ಇವುಗಳ್ನ?'

'ಅಟ್ಟದ ಮೇಲೆಕಣೆ'

ಅಟ್ಟ ಅಲುಗಾಡಿದಂತಾಯಿತು, 'ಬೇಡ, ಬೇಡ' ಎಂದು ಚೀರಿದಂತಾಯಿತು.

'ಅಲ್ರೀ, ಈಗಿರೋ ಪುಸ್ತಕಗಳೇ ಖರ್ಚು ಆಗ್ತಿಲ್ಲ, ಇವುಗಳ್ನ ಯಾವ ಕಾಲಕ್ಕೆ ಮಾರೋದು?'

'ತಪ್ಪು ಮಾಡ್ದೆಕಣೆ' ಎಂದ ವಿಶ್ವ.

ಗಂಡ ಹೆಂಡತಿ ಸೇರಿ ಅಟ್ಟದ ಮೇಲೆ ಸಾವಿರ ಪುಸ್ತಕಗಳನ್ನು ತುರುಕಿದರು. ಆ ಭಾರಕ್ಕೆ ಅಟ್ಟ ನಿಟ್ಟುಸಿರಿಟ್ಟು ತನ್ನೊಳಗೇ ಅತ್ತಿತು.

ಚಿನ್ನ, ಬೆಳ್ಳಿ, ತಾಮ್ರ. ಕಬ್ಬಿಣ ಎಲ್ಲಾ ಸೇರ್ಸಿ ಮಾಡಿರೋ
ಕೊಯಲಿಷನ್ ತಟ್ಟೇರಿ ಇದು!



# ದೊಡ್ಡವರಾಟ

-ಜಿ.ಎನ್.ಜಿ

ಚಂದ್ರಸ್ವಾಮಿಯ ವಿಷಯ ಓದಿದಾಗೆಲ್ಲಾ ನನಗೆ ಕೂಡಲೂರಿನ ಮಠದ ನೆನಪು, ಅಲ್ಲೊಂದು ಮಠ, ಬಲು ಪ್ರಸಿದ್ಧ. ದೇಶ ವಿದೇಶಗಳಿಂದ ಭಕ್ತರು. ಮಠದ ಸ್ವಾಮಿಗಳು ಮಠದಲ್ಲಿರುವುದೇ ವಿರಳ. ಸದಾ ಯಾತ್ರೆ.

ಆದರೆ ಕೂಡಲೂರಿನ ಜನಕ್ಕೆ ಮಠ ಕಂಡರೆ ಅಷ್ಟಕ್ಕಷ್ಟೆ ಮಠ ಹಿತ್ತಲ ಗಿಡ. ಅಲ್ಲಿನ ಜನ ಭಾವುಕರೂ ಅಲ್ಲ ಮೊದ್ದೂ ಅಲ್ಲ. ಜನಕ್ಕೆ ಭಕ್ತಿಗಿಂತಲೂ ಭಯ.

ಮಠದ ಸ್ವಾಮಿಗಳು ''ಸ್ವಾಹಾನಂದರು'' ಜನ ಅವರನ್ನು ಕರೆಯುವುದು ''ಅವಂದೇಸ್ವಾಮಿ''. ಏಕೆಂದರೆ ಸ್ವಾಮಿಗಳೆನ್ನುವುದು ಸದಾ ಒಂದೇ ಮಾತು ''ಎಲ್ಲಾ ಅವಂದೇ''. ಮಠವೂ ''ಅವಂದೇ ಮಠ.''

ಮಠದ ಪಾರು ಪತ್ಯ ದೊಡ್ಡದು. ಕೋಟ್ಯಾಂತರ ರೂಪಾಯಿ ವ್ಯವಹಾರ. ದೇಶ ವಿದೇಶಗಳಲ್ಲಿ ಶಿಷ್ಯಕೋಟಿ. ಮನಶ್ಶಾಂತಿ ಗುರುಕೃಪೆಗಳಿಗಾಗಿ ಕಾದಿರುವವರು. ದೇಶ ವಿದೇಶಗಳಲ್ಲಿ ಧ್ಯಾನ-ಜ್ಞಾನ ಕೇಂದ್ರಗಳು ಗುರುಗಳು ಮಹಾತಪಸ್ವಿಗಳು-ಯೋಗಿಗಳು-ಅವರದ್ದು ಇಟ್ಟರೆ ಶಾಪ-ಕೊಟ್ಟರೆ ವರ ಎಂದು ಪ್ರತೀತಿ.

ಆದರೆ ಕೂಡಲೂರಿನವರನ್ನು-ತೀರಾ ಅಂತರಂಗದಲ್ಲಿ ಕೇಳಿದಾಗ ''ಕಳ್ಳ ಸ್ವಾಮಿ-ಏಜೆಂಟು-ಮಾರ್ಜಾಲ-ರಾವಣ'' ಎನ್ನುತ್ತಾರೆ.

''ಮರಿದೇವರು ಮಠದ ಸರ್ವಾಧಿಕಾರಿಗಳು. ಗುರು ಕೃಪೆಗಿಂತ ಮರಿ ಕೃಪೆ ಮುಖ್ಯ. ಮರಿ ತಲೆಹಾಕಿದರೆ ಗುರು ತಲೆ ಹಾಕಿದಂತೆ ಮರಿದೇವರಲ್ಲ. ಅವರು ದೇವರ ಮರಿ. ಗುರುಗಳ ಅಂತರಂಗ ಬಹಿರಂಗ ಬಲ್ಲ ಚಾಣಾಕ್ಷ ಕೂಡಲೂರಿನವರ ಬಾಯಲ್ಲಿ 'ಕದೀಮ'.

ಗುರುಗಳ ಇನ್ನೊಬ್ಬ ಖಾಸಾ ಶಿಷ್ಯರು ರಾಜಧಾನಿಯಲ್ಲಿರುವ ಪರಸಪ್ಪನವರು. ಗುರುಗಳಿಗೆ ನಿಕಟರಾದವರು. ದೊಡ್ಡ ಉದ್ದಿಮೆದಾರರು ರಾಜಕೀಯದಲ್ಲಿ ಪ್ರಭಾವ ಶಾಲಿಗಳು ವಿಲಾಸಿಗಳು-ರಸಿಕರು ಜನಪ್ರಿಯರು ವಿನಯ ಸಂಪನ್ನರು. ದೊಡ್ಡಕುಳ ಕಿಲಾಡಿಗಳು.

ಅವರ ಬಂಗಲೆಗಳಲ್ಲಿ ಒಂದನ್ನು ಗುರುಗಳಿಗಾಗಿಯೇ ಬಿಟ್ಟುಕೊಟ್ಟಿದ್ದರು. ಮಠಕ್ಕೆ ಮಾರಿದ್ದರೆಂದು ಕೆಲವರೆಂದರೆ ಕೆಲವರು ದಾನವಾಗಿ ಕೊಟ್ಟಿದ್ದಾರೆ ಎನ್ನುತ್ತಾರೆ. ರಾಜಧಾನಿಗೆ ದಯಮಾಡಿಸಿದಾಗ ಗುರುಗಳ ವಾಸ ಬಂಗಲೆಯಲ್ಲಿ. ಆಗ ಪರಸಪ್ಪನವರೂ ಅಲ್ಲೇ. ಸಾರ್ವಜನಿಕ ಪ್ರವೇಶವಿಲ್ಲ. ತೀರಾ ಬೇಕಾದವರಿಗೆ ಮಾತ್ರ.

★★★

ಪರಸಪ್ಪನವರದ್ದು ಏಟಾದರೆ-ಮರಿದೇವರದ್ದು ಎದಿರೇಟು. ಆದರೆ ಗುರುಗಳು ಎಂದೂ ಇಬ್ಬರ ನಡುವೆ ಸ್ಯಾಂಡ್ ವಿಚ್ ಆಗಿರಲಿಲ್ಲ ತೋರಿಸಿ ಕೊಂಡಿರಲಿಲ್ಲ. ''ಗುರುತ್ವ'' ಇರುವುದು ಅಲ್ಲೇ!

★★★

ಬಂಗಲೆಯನ್ನು ಅಂತರಾಷ್ಟ್ರೀಯ-ಜ್ಞಾನ-ಧ್ಯಾನ-ಅಧ್ಯಯನ ಕೇಂದ್ರವನ್ನಾಗಿ ಮಾಡುವ ಯೋಜನೆಯನ್ನು ಮಠ ಹಾಕಿಕೊಂಡಿತು. ಮರಿದೇವರದ್ದೇ ಪ್ರೇರಣೆ. ಗುರುಗಳ ಆಶೀರ್ವಾದ. ಬಂಗಲೆಯನ್ನು ಬೀಳಿಸಿ ಹೊಸ ಕಟ್ಟಡವನ್ನು ಕಟ್ಟುವ ತರದೂದು ನಡೆಯಿತು. ಕೆಲಸ ಪ್ರಾರಂಭವಾಬೇಕೆನ್ನುವಷ್ಟರಲ್ಲಿ ಮರಿದೇವರು ಶಿವಸಾಯುಜ್ಯವನ್ನು ಹೊಂದಿದರು ಕೆಲಸ ನಿಂತಿತು.

ಕೂಡಲೂರಿನ ಜನ ಮರಿದೇವರ ಮರಣದಲ್ಲಿ ಪರಸಪ್ಪನವರ ಮಸಲತ್ತು ಕಂಡರು. ಜನರ ಜಾಯಮಾನವೇ ಹಾಗೆ ಅನುಮಾನ ಪ್ರಕೃತಿ.

★★★

ಬೆಳಿಗಿನ ಜಾವ ನಾಲ್ಕು ಗಂಟೆ ಇನ್ನೂ ಕತ್ತಲು ರಾಜಧಾನಿಯ ಐಷರಾಮ ಬಡಾವಣೆಯ ರಸ್ತೆಯ ಕೊನೆಯಲ್ಲಿ ಕಾರೊಂದು ನಿಂತಿತು. ಅದರಿಂದ ಇಳಿದು ವ್ಯಕ್ತಿ ಮೈತುಂಬ ಶಾಲು ಹೊದೆದು ಮುಸುಕು ಹಾಕಿಕೊಂಡು ಬಲವಂತ ಬಿಹಾರಿಯ ಬಂಗಲೆಯ ಮುಂದೆ ನಿಂತಿತು. ಕಾವಲುಗಾರ ಪ್ರಶ್ನಿಸಿ-ವ್ಯಕ್ತಿಯನ್ನು ಒಳಕ್ಕೆ ಕರೆದೊಯ್ದ.

ಬಲವಂತ ಬಿಹಾರಿ ಹೆಸರುವಾಸಿ ಖಾಸಗಿ ಪತ್ತೆದಾರ. ಪೋಲಿಸರಿಗೆ ತಿಳಿಯದೆ ಸರ್ಕಾರಕ್ಕೆ ತಿಳಿಯದೆ-ಪ್ರಚಾರಕ್ಕೆ ಸಿಗದೆ ರಹಸ್ಯ ಪತ್ತೆ ಕೆಲಸ ಮಾಡಿಕೊಡುವುದರಲ್ಲಿ ನಿಸ್ಸೀಮ. ಸ್ಕಾಟ್‌ಲೆಂಡಿನಲ್ಲಿ ಕೆಲವು ಕಾಲ ಇದ್ದನಂತೆ.

''ಏನು ಮಠದ ಸರ್ವಾಧಿಕಾರಿಗಳು ಈ ಅವೇಳೆಯಲ್ಲಿ?!'' ಎಂದು ಕೇಳಿದಾಗ ತಬ್ಬಿಬ್ಬಾದವರು ಪರಸಪ್ಪ. ಬಿಹಾರಿ ನಿದ್ರೆಗೆಟ್ಟು ಎದ್ದಿದ್ದರೂ ಫ್ರೆಶ್ ಆಗಿಯೇ ಇದ್ದ.

''ಯಾರಿಗೂ ತಿಳಿಯದ್ದು-ನಿಮಗಾಗಲೇ ತಿಳಿದಿದೆಯಲ್ಲ!'' ಪರಸಪ್ಪನವರು ಆಶ್ಚರ್ಯದಿಂದ ಕೇಳಿದರು.

ಗುರುಗಳು ತಮ್ಮ ಇಂಗಿತವನ್ನು ತಮಗೆ ಮಾತ್ರ ತಿಳಿಸಿದ್ದರೆಂದು ಪರಸಪ್ಪನವರು ತಿಳಿದಿದ್ದರು.

''ಬಿಹಾರಿಗಳೆ-ಈಗ-ನನ್ನ ಮರ್ಯಾದೆ ಮಠದ ಮರ್ಯಾದೆ ಸರ್ವಸ್ವ ನಿಮ್ಮ ಕೈಯಲ್ಲಿದೆ'' ಪರಸಪ್ಪನವರು ಶರಣಾಗಿದ್ದರು.

ಇಬ್ಬರೂ-ಬಿಹಾರಿಯ-ಖಾಸಗಿ ಕೋಣೆಯನ್ನು ಸೇರಿದರು. ಪಾನಕ ಸಮಾರಾಧನೆಯೊಂದಿಗೆ ಮಾತುಕಥೆ ಪ್ರಾರಂಭ.

''ಈಗ ನನ್ನಿಂದೇನಾಗಬೇಕು?' ಬಿಹಾರಿ ಕೇಳಿದ

''ಬಿಹಾರಿಗಳೇ-ಬಂಗಲೆಯನ್ನು ಮಠ ಯಾವಾಗ ಬೇಕಾದರೂ ಕೆಡವಬಹುದು. ಬಂಗಲೆ ಮಠದ್ದು ಮರಿದೇವರ ಸಾವಿನಿಂದ ಆ ಕೆಲಸ ನಿಲ್ಲಬಹುದೆಂದಿದ್ದೆ. ಆದರೆ ಗುರುಗಳ ತಿರ್ಮಾನ ಅಚಲ ಎಂದು ತೋರುತ್ತದೆ ನಾನು ಸರ್ವಾಧಿಕಾರಿ ಯಾಗುವುದರೊಳಗೆ ಕಟ್ಟಡ ಕೆಡವಿಸಿ ಹೊಸ ಮಂದಿರದ ಶಂಕು ಸ್ಥಾಪನೆ ಮಾಡುವವರಿದ್ದಾರೆ.''

ಪರಸಪ್ಪನವರು ದುಗುಡದಿಂದ ಹೇಳಿದರು.

''ಮಾಡಲಿ ಬಿಡಿ ಒಳ್ಳೆಯದೇ ಆಯಿತಲ್ಲ!'' ನೀವು ಸರ್ವಾಧಿಕಾರಿಯಾದ ಮೇಲೆ ತೊಂದರೆಯೇ ಇಲ್ಲವಲ್ಲ ಎಂದ ಬಿಹಾರಿ.

''ಅದು ಹಾಗಲ್ಲ ಬಂಗಲೆ ನನ್ನ ಸುಪರ್ದಿನಲ್ಲಿರುವವರೆಗೆ ಗುರುಗಳು ನನ್ನ ಹಿಡಿತದಲ್ಲಿದ್ದರು. ಮರಿದೇವರ ಮಸಲತ್ತಿನಿಂದ ಬಂಗಲೆ ನನ್ನ ಕೈಬಿಟ್ಟಿತು. ಇನ್ನು ನಾನು ಅವರ ಹಿಡಿತದಲ್ಲಿ ಸಿಕ್ಕಿಬಿದ್ದರೆ ತಪ್ಪಿಸಿಕೊಳ್ಳುವಂತೆಯೇ ಇಲ್ಲ. ಗುರುಗಳು ನನ್ನ ಹಿಡಿತದಲ್ಲೇ ಇರಬೇಕು. ಹಾಗೆ ಆಗಬೇಕು. ಪರಸಪ್ಪನವರು ಆತಂಕ ವ್ಯಕ್ತಪಡಿಸಿದರು.

''ಅದಕ್ಕೆ ನಾನೇನು ಮಾಡಬೇಕು?'' ಬಿಹಾರಿ ಕೇಳಿದ.

''ಬಿಹಾರಿಗಳೇ ಈಗ ನಾನು ಹೇಳುವುದು ಅತ್ಯಂತ ರಹಸ್ಯವಾದುದು ಗುರುಗಳು ಇಲ್ಲಿ ಬಿಡಾರ ಮಾಡುತ್ತಿದ್ದಾಗ ಕೆಲವು ವ್ಯವಹಾರಗಳು ಈ ಬಂಗಲೆಯಲ್ಲಿ ನಡೆಯುತ್ತಿದ್ದವು. ಪ್ರಮೀಳಾ ಪಟವರ್ಧನ್ ಎಂಬ ಶಿಷ್ಯೆಯೊಡನೆ ಅವರ ಸಂಬಂಧ. ಅವಳು ಗಂಡ ಗೋಪಾಲ ಪಟವರ್ಧನ್ ಇದ್ದಕ್ಕಿದಂತೆ ಅಪಘಾತದಲ್ಲಿ ಸತ್ತುದು. ಪ್ರಮಿಳಾ-ಗುರುಗಳ ಫೋಟೊಗಳು, ಪ್ರಮೀಳಾ ತಮ್ಮ ಆಸ್ತಿಯನ್ನೆಲ್ಲಾ ಮಠಕ್ಕೆ ಬರೆದ ದಾಖಲೆಗಳು, ಸ್ವಿಸ್ ಬ್ಯಾಂಕಿನ ಖಾತೆಯ ದಾಖಲೆಗಳು, ರಾಜಕಾರಣಿಗಳು-ಮಂತ್ರಿಗಳ ವ್ಯವಹಾರದ ದಾಖಲೆಗಳು, ಬಿಸ್ಕತ್ತುಗಳು ಖಾಸಗೀ ವ್ಯವಹಾರದ ನಂಬರ್-ಟು-ದಾಖಲೆಗಳು ನನ್ನಲ್ಲಿವೆ. ಇವು ನನ್ನಲ್ಲಿರುವವರೆಗೂ ಗುರುಗಳು ನನ್ನ ಕೈಯಲ್ಲಿ. ಪರಸಪ್ಪನವರು ರಹಸ್ಯವನ್ನು ಹೊರಗೆ ಹಾಕಿದರು.

''ಈಗ ಪ್ರಮೀಳಾ ಎಲ್ಲಿ?'' ಬಿಹಾರಿ ಕೇಳಿದ

''ಅವರು ಸ್ವಿಡ್ಸ್ರ್‌ಲೆಂಡಿನ-ಮಠದ ಶಾಖೆಯನ್ನು ನೋಡಿಕೊಳ್ಳುತ್ತಿದ್ದಾರೆ'' ಪರಸಪ್ಪನವರು ತಿಳಿಸಿದರು.

''ಅವರ ಮಕ್ಕಳು?''

''ಅವರಿಗೆ ಮಕ್ಕಳಿಲ್ಲ''

''ದಾಖಲೆಗಳು-ಎಲ್ಲಿವೆ?''

''ಅವೆಲ್ಲಾ ಒಂದು ಪೆಟ್ಟಿಗೆಯಲ್ಲಿವೆ. ವಿಷಯ ನನಗೆ ಮತ್ತು ಗುರುಗಳಿಗೆ ಮಾತ್ರ

ತಿಳಿದಿದೆ.

''ನಮಗೆ ಆ ಪೆಟ್ಟಿಗೆ ಬೇಕಾಗಿದೆ, ಪೆಟ್ಟಿಗೆ ಎಲ್ಲಿದೆ?''

''ಬಂಗಲೆಯ ಡ್ರಾಯಿಂಗ್ ರೂಮಿನಲ್ಲಿ ಒಂದು ವಾರ್ಡ್ ರೋಬಿದೆ. ಅವರ-ಅಡಿಯಲ್ಲಿ-ಡೆಕೋರೆಟೆಡ್ ಸ್ಟೋನಿದೆ. ಆ ಚಪ್ಪಡಿಯನ್ನು ಸರಿಸಿದರೆ-ಅದರ ಕೆಳಗೆ ಮೆಟ್ಟಲುಗಳಿವೆ. ಇಳಿದು ಹೋದರೆ ಅಲ್ಲೊಂದು ಪೀಠವಿದೆ. ಪೀಠವನ್ನು ಸರಿಸಿದರೆ ಅವರ ಕೆಳಗೆ ದೊಡ್ಡ ಪೆಟ್ಟಿಗೆ ಇದೆ-ಅದರೊಳಗೆ ಒಂದು ಗಂಧದ-ಚಿತ್ತಾರದ ಪೆಟ್ಟಿಗೆ ಇದೆ. ಅದರಲ್ಲಿ ಎಲ್ಲವೂ ಇವೆ. ಅದನ್ನು ನೀವು ತಂದು ನನಗೆ ಒಪ್ಪಿಸಬೇಕು.''

ಈಗ ಬಿಹಾರಿ ವ್ಯವಹಾರಕ್ಕಿಳಿದ.

''ನನಗೆ ಅದರಲ್ಲಿರುವ ಹಣದ ಮೌಲ್ಯದ ಶೇಕಡ ಹತ್ತರಷ್ಟು ಜೊತೆಗೆ ಉಳಿದ ದಾಖಲೆಗಾಗಿ ಹತ್ತು ಲಕ್ಷ ಮುಂಗಡ ಐದುಲಕ್ಷ ಬಿಹಾರಿ ಕಟ್ಟುನಿಟ್ಟಾಗಿ ತಿಳಿಸಿದ. ವ್ಯವಹಾರ ಕುದುರಿತು.

★★★

ಪರಸಪ್ಪನವರದ್ದೇ ಬಂಗಲೆಯಾದರೂ ಅವರು ಗುರುಗಳಿಗೆ ತಿಳಿಯದೆ ಪೆಟ್ಟಿಗೆಯನ್ನು ತರುವಂತಿರಲಿಲ್ಲ. ಬಂಗಲೆ ಆಗಲೇ ಮಠದ್ದು. ಗುರುಗಳಿಲ್ಲದಾಗ-ಬಂಗಲೆಗೆ ಬೀಗ. ಗುರುಗಳಿದ್ದಾಗ ಇಬ್ಬರದ್ದೂ ವ್ಯವಹಾರ. ಪರಸಪ್ಪನವರ ಜುಟ್ಟು ಗುರುಗಳ ಕೈಯಲ್ಲಿ ಗುರುಗಳ ಜುಟ್ಟು ಪರಸಪ್ಪನವರ ಕೈಯಲ್ಲಿ ಬಂಗಲೆ-ಧ್ಯಾನ-ಜ್ಞಾನ ಮಂದಿರವಾಗಿ ಬಿಟ್ಟರೆ ಪರಸಪ್ಪನವರ ಹಿಡಿತವೇ ತಪ್ಪುತ್ತದೆ. ಸರ್ವಾಧಿಕಾರಿ ಪಟ್ಟ ಸಿಗುವ ಮೊದಲೇ ಗುರುಗಳು ಪೆಟ್ಟಿಗೆ ಸಾಗಿಸಿಬಿಟ್ಟರೆ? ಅದಕ್ಕಾಗಿ ಪರಸಪ್ಪ ಬಿಹಾರಿಗೆ ಕೆಲಸ ಒಪ್ಪಿಸಿದ್ದು.

ಬಂಗಲೆಯನ್ನು ಬೀಳಿಸುವ ಕೆಲಸ ಪ್ರಾರಂಭವಾಗಿತ್ತು.

ಗುರುಗಳು ಹೊಸ ಕಟ್ಟಡದ ಶಂಕುಸ್ಥಾಪನೆ ಹೊಸ ಸರ್ವಾಧಿಕಾರಿಗಳ ಅಧಿಕಾರಗ್ರಹಣ ಒಂದೇ ಮುಹೂರ್ತದಲ್ಲಿ ರಾಜಧಾನಿಯಲ್ಲೇ ಆಗಬೇಕೆಂದು ಅಪೇಕ್ಷಿಸಿದ್ದರು. ಅದಕ್ಕಾಗಿ ದೇಶ ವಿದೇಶಗಳಿಂದ ಭಕ್ತಾದಿಗಳೂ ಶಿಷ್ಯರೂ ಅಭಿಮಾನಿಗಳು ರಾಜಕಾರಣಗಳು ಆಗಮಿಸುವವರಿದ್ದರು. ಅಷ್ಟರಲ್ಲಿ ಬಿಹಾರಿ ತನ್ನ ಕೆಲಸವನ್ನು ಮಾಡಬೇಕಾಗಿತ್ತು.

ಗುರುಗಳು ರಾಜಧಾನಿಯಲ್ಲೇ ಬಿಡಾರ ಮಾಡಿದ್ದರು. ಬಂಗಲೆಯಲ್ಲಿ ಉಳಿಯುವಂತಿರಲಿಲ್ಲ. ಪರಸಪ್ಪನವರು ಗುರುಗಳಿಗಾಗಿ ಬೇರೆಯ ವಿಶೇಷ ಏರ್ಪಾಡು ಮಾಡಿದ್ದರು. ಧ್ಯಾನ, ಜ್ಞಾನ ಮಂದಿರದ ಕೆಲಸ ಪ್ರಾರಂಭವಾಗುವವರೆಗೂ ಗುರುಗಳ ಬಿಡಾರ ರಾಜಧಾನಿಯಲ್ಲೇ.

★★★

ಕಟ್ಟಡದ ಕಂಟ್ರಾಕ್ಟರನ್ನು ತ್ರಿಲೋಕಚಂದರ್ ಎಂಬ ಆರ್ಕಿಟೆಕ್ಟಿಗೆ

ವಹಿಸಲಾಗಿತ್ತು. ಧ್ಯಾನ, ಜ್ಞಾನ ಮಂದಿರ ಸತ್ಯ, ಧರ್ಮ ಸಮನ್ವಯದ ಸಂಕೇತವಾಗಿರಬೇಕೆಂದು ಗುರುಗಳ ಅಪೇಕ್ಷೆ. ಅದಕ್ಕಾಗಿ ವಿಶೇಷ ವಿನ್ಯಾಸ.

ತ್ರಿಲೋಕ ಚಂದರ್‌ನ ಬಳಿ ಹೊಸದಾಗಿ ಸ್ಮಿತ್-ಡಿ-ಚಾರ್ಲ್ಸ್ ಎಂಬುವನು ಸೇರಿದ್ದ. ಬಂಗಲೆ ಬೀಳಿಸುವ ಕೆಲಸದ ಉಸ್ತುವಾರಿ ಅವನದ್ದು. ಸುಮಾರು 35-40 ರ ಪ್ರಾಯವಾಗಿದ್ದರೂ, ಅಷ್ಟು ವಯಸ್ಸು ಹೇಳುವಂತಿರಲಿಲ್ಲ ಎತ್ತರದ ಕಟ್ಟುಮಸ್ತಾದ ಆಳು, ಐರ್ಲೆಂಡ್ ಮೂಲದವನಾದರೂ ಪ್ರಪಂಚಸುತ್ತಿ, ಭಾರತಕ್ಕೆ ಬಂದು ಕೆಲವು ವರ್ಷಗಳಾಗಿವೆಯಂತೆ. ಕಪ್ಪನೆಯ ಗಡ್ಡಮೀಸೆಗಳು, ಇಳಿಬಿಟ್ಟ ತಲೆಕೂದಲು ಸದಾ ಕಪ್ಪುಕನ್ನಡಕ, ನಿಕ್ಕರು, ಜರ್ಕಿನ್ಸ್ ಹಾಕಿರುವವ, ವಾಚಾಳಿ, ಸರಸಿ.

★★★

ರಾತ್ರಿ ಸುಮಾರು ಎರಡು ಗಂಟೆ. ಬಂಗಲೆಯ ಹಿಂಭಾಗದಲ್ಲಿ ಸ್ಮಿತ್. ಕಟ್ಟಡದ ಮುಂಭಾಗ ಬಿದ್ದಿದೆ. ವಿದ್ಯುತ್ ಸಂಪರ್ಕ ಕಡಿದಿದೆ. ಕತ್ತಲು ಸ್ಮಿತ್ ಕೈಲಿ ಟಾರ್ಚು ಹಿಡಿದು ಡ್ರಾಯಿಂಗ್ ರೂಂ ಬಳಿ ಬಂದಿದ್ದಾನೆ. ವಾರ್ಡ್‌ರೋಬ್ ಆಗಲೇ ಮುರಿದು ಬಿದ್ದಿದೆ. ಅದರ ಕೆಳಗೆ ಚಿತ್ತಾರದ ಹಾಸುಗಲ್ಲು, ಟಾರ್ಚು ಬೆಳಕಿನಲ್ಲಿ ಸರಿಯಾಗಿ ಕಾಣುತ್ತಿಲ್ಲ. ಹಾಸುಗಲ್ಲು ಆಗಲೇ ಸರಿಸಿಯಾಡಿದಂತೆ ಅನುಮಾನ ಸ್ಮಿತ್ ಬಗ್ಗಿ ಸರಿಸಿದ. ಟಾರ್ಚು ಬೆಳಕಿನಲ್ಲಿ ಮೆಟ್ಟಲುಗಳು ಕಂಡವು. ಇಳಿದ ಪೀಠ ಕಂಡಿತು ಸರಿಸುವುದರೊಳಗೆ, ಭುಜದ ಮೇಲೆ ಯಾರೋ ಕೈ ಇಟ್ಟಂತಾಯಿತು. ಬೆನ್ನು ಹುರಿಯ ಮೇಲೆ ಮಂಜುಗಡ್ಡೆ ಆಡಿಸಿದಂತಾಯಿತು. ಚಕ್ಕನೆ ತಿರುಗಿ ನೋಡಿದ, ಗುರುಗಳು?!!!

ಷಾಕ್ ಹೊಡೆದಂತಾಯಿತು.

"Too late ಬಿಹಾರಿ, ಪ್ರಯೋಜನವಿಲ್ಲ...." ಗುರುಗಳು ನಕ್ಕರು

"ಪರಸಪ್ಪ....!?" - ತೊದಲಿದ ಬಿಹಾರಿ

"Out.... ಎಂದರು ಗುರುಗಳು, ಭಾವನಾ ರಹಿತರಾಗಿ, ದೊಡ್ಡವರ ಮಾತಿನ ಮರ್ಮ ಅವರೇ ಬಲ್ಲರು!

---

ಸಯಾಮ್ ಆದರೇನು?
ಗಿಯಾಮ್ ಆದರೇನು?
ಬೆಕ್ಕು ಕೂಗುವುದು
'ಮಿಯ್ಯಾವ್' ಎಂದೇ

– ಶಂಸ

